ಆತನ ಗುರು 'ಜಿನಸೇನಾಚಾರ್ಯ' ಎಂಬ ಸಂಗತಿ ತಿಳಿದುಬರುತ್ತದೆ. ಗೋವಿಂದಪೈ ಅವರ ಅಭಿಪ್ರಾಯದಂತೆ, ಜಿನಸೇನರು ಇದನ್ನು ತಮ್ಮ ೪೦–೪೫ರ ಪ್ರಾಯದಲ್ಲಿ, ಸುಮಾರು ಕ್ರಿ.ಶ. ೮೦೦ರಲ್ಲಿ, ಎಂದರೆ ನೃಪತುಂಗನು ಪಟ್ಟಕ್ಕೆ ಬರುವುದಕ್ಕೆ ೧೫ ವರ್ಷ ಮುಂಚೆ, (ಎಂದರೆ ನೃಪತುಂಗನು ಚಿಕ್ಕ ಮಗುವಾಗಿದ್ದಾಗ) ರಚಿಸಿರಬೇಕು ಎಂದು ಊಹಿಸಲಾಗಿದೆ. ಅಲ್ಲದೆ, ಈ ಕಾವ್ಯದ ಸರ್ಗಾಂತ ಗದ್ಯ ಪ್ರಕ್ಷಿಪ್ತವಾಗಿರಬೇಕೆಂದು ಗೋವಿಂದಪೈ ಅವರು ತೀರ್ಮಾನಿಸಿದ್ದಾರೆ. ಹೀಗಿರುವುದರಿಂದ, ಈ ಕಾವ್ಯದಲ್ಲಿನ ಅಮೋಘವರ್ಷ ಪರವಾದ ಉಲ್ಲೇಖಗಳನ್ನು ಪ್ರಮಾಣಭೂತವೆಂದು ಅಂಗೀಕರಿಸುವುದು ಕಷ್ಟ. ಅಲ್ಲದೆ ಈ ಉಲ್ಲೇಖಗಳಿಂದ ನೃಪತುಂಗನು ಜಿನಸೇನರಿಂದ ಜೈನಧರ್ಮ ಸ್ವೀಕಾರಮಾಡಿ, ಅವರ ಶಿಷ್ಯನಾದನೆಂಬ ಸಂಗತಿ ಹೊರಪಡುವುದಿಲ್ಲ.

೧೩. "ಶ್ರೀಮದಮೋಘವರ್ಷೇಣ ಯೇನಸ್ವೇಷ್ಟ ಹಿತೈಷಿಣಾ॥
ವಿಧಸ್ತೈಕಾಂತಪಕ್ಷಸ್ಯ ಸ್ಯಾದ್ವಾದ ನ್ಯಾಯವಾದಿನಃ।
ದೇವಸ್ಯ ನೃಪತುಂಗಸ್ಯ ವರ್ಧತಾಂತಸ್ಯ ಶಾಸನಂ॥"

("Mahavira, the author of this Mathematical work, was the disciple of ವಿದ್ಯಾನಂದ ವಾದೀಂದ್ರ and the teacher to Amoghavarsha, Amoghavarsha had the titles Deva, Nripatunga" - Dr. S. Srikantha Sastry, Sources of Karnataka History, p.71)

ಮುಳಿಯ ತಿಮ್ಮಪ್ಪಯ್ಯನವರು "ಮಹಾವೀರಾಚಾರ್ಯನೇನೋ ನೃಪತುಂಗನ ಆಸ್ಥಾನದಲ್ಲೇ ಇದ್ದವನು "ಎಂದು ಅಭಿಪ್ರಾಯಟ್ಟು" ಸ್ಯಾದ್ವಾದ ನ್ಯಾಯವಾದಿನಃ" ಎಂಬ ಕಡೆ "ಸ್ಯಾದ್ವಾದ ನ್ಯಾಯ ವೇದಿನಃ" ಎಂದು ಪಾಠವಿದ್ದಿರಬೇಕೆಂದು ಊಹಿಸಿ, ಜೈನಧರ್ಮವನ್ನು ಬಲ್ಲವನಾಗಿದ್ದನು ಎಂಬ ಅರ್ಥವನ್ನು ಹೊರಡಿಸಿದ್ದಾರೆ. ಇದು ವಿಚಾರಣೀಯವಾದ ಅಂಶ.

೧೪. "...It is variously attributed to Sankaracharya, Sankarananda, and a Svetambara writer Vimala. But, the royal authorship of 'Ratnamala' is confirmed by a Tibetan translation of it discovered by Schiefner in which the author is represented to have been a King, and his Tibetan name, as re-translated into Sanskrit by the same scholar, is Amoghodaya, which obviously stands for Amoghavarsha. This work was composed between Saka 797-99; in the former year Nripatunga abdicated in favour of his son Akalavarsha", (K.B. Pathak : (ಕವಿರಾಜಮಾರ್ಗದ ಮುನ್ನುಡಿ, ಪು.೯).

೧೫. "ನೃಪತುಂಗನು ೬೨ ವರ್ಷಗಳು ರಾಜ್ಯಭಾರ ಮಾಡಿದನು. ಬಳಿಕ ತಾನೇ ರಾಜ್ಯವನ್ನು ಬಿಟ್ಟಂತೆ ಅವನು ಸಂಸ್ಕೃತದಲ್ಲಿ ಬರೆದಿರುವ ಪ್ರಶ್ನೋತ್ತರ ಮಾಲೆಯೆಂಬ ಗ್ರಂಥದ ಅಂತ್ಯ ಶ್ಲೋಕದಿಂದ ತಿಳಿಯುತ್ತದೆ" (ಕ.ಕ.ಚರಿತೆ – ಪ್ರ. ಸಂಪುಟ, ೧೯೨೪; ಪು. ೧೮)

"He has written in Sanskrit a small work called Prasnottaramala, of which the concluding verse tells us that he voluntarily retired from the throne. It may be of some interest to learn that Ugraditya, says at the close of work that at the instance of this King he delivered at his court, in the presence of many physicians and doctors, a discourse on the evils of a flesh diet and on its avoidance in the presence of many physicians and doctors, a discourse on the evils of a flesh diet and on its avoidance in the treatment of disease. Nripatunga was a Jaina King, a disciple of Jinasena, the author of Adipurana." (History of Kannada Literature, 1940 ; p.2)

೧೬. ಪ್ರಶ್ನೋತ್ತರ ಮಾಲಿಕೆಯ ಮುಖ್ಯ ಪ್ರಸಕ್ತ ಶ್ಲೋಕಗಳು :

'ನಿರ್ಣಯಸಾಗರ' ಮುದ್ರಣಾಲಯದ ಮುದ್ರಿತ ಪ್ರತಿ ಎರಡು ಹಸ್ತಪ್ರತಿಗಳ ಪಾಠಗಳನ್ನೂ ಆಧರಿಸಿದೆ: 'ಕ' ಮತ್ತು 'ಖ'. ಈ ಎರಡು ಪ್ರತಿಗಳ ಕೊನೆಯ ಶ್ಲೋಕ ಮಾತ್ರ ಎರಡರಲ್ಲಿ ಭಿನ್ನವಾಗಿದೆ. ಎರಡಕ್ಕೂ ಸಮಾನವಾಗಿರುವ ಶ್ಲೋಕಗಳಲ್ಲಿ ಈ ಕೆಳಗಿನವು ಗಮನಾರ್ಹ.

ಪ್ರಣಿಪತ್ಯ ವರ್ಧಮಾನಂ ಪ್ರಶ್ನೋತ್ತರ ರತ್ನಮಾಲಿಕಾಂ ವಕ್ಷ್ಯೇ ।
ನಾಗನರಾಮರ ವಂದ್ಯಂ ದೇವಂ ದೇವಾಧಿಪಂ ವೀರಂ ॥೧॥
ಕಃಖಲು ನಾಲಂಕ್ರಿಯತೇ ದೃಷ್ಟಾದೃಷ್ಟಾರ್ಥ ಸಾಧನಪಟೀಯಾನ್।
ಕಂಠಸ್ಥಿತಯಾ ವಿಮಲ ಪ್ರಶ್ನೋತ್ತರ ರತ್ನಮಾಲಿಕಯಾ ॥೨॥

* * * * *

ಇತಿ ಕಂಠಗತಾ ವಿಮಲಾ ಪ್ರಶ್ನೋತ್ತರ ರತ್ನಮಾಲಿಕಾ ಯೇಷಾಮ್।
ತೇ ಮುಕ್ತಾಭರಣಾ ಅಪಿ ವಿಭಾಂತಿ ವಿದ್ವತ್ಸಮಾಜೇಷು ॥೨೮॥

'ನಿರ್ಣಯಸಾಗರ' ಮುದ್ರಣಾಲಯದ ಕ + ಖ ಹಸ್ತಪ್ರತಿಗಳಲ್ಲಿ 'ಕ' ಪ್ರತಿಯ ಕೊನೆಯ ಪದ್ಯ :

ರಚಿತಾ ಸಿತಪಟ ಗುರುಣಾ ವಿಮಲಾ ವಿಮಲೇನಾ ರತ್ನಮಾಲೇವ।
ಪ್ರಶ್ನೋತ್ತರಮಾಲೇಯಂ ಕಂಠಗತಾ ಕಂ ನ ಭೂಷಯತಿ ॥೨೯॥

'ಖ' ಪ್ರತಿಯ ಪಾಠ:

ವಿವೇಕಾತ್ಯಕ್ತರಾಜ್ಯೇನ ರಾಜ್ಞೇಯಂ ರತ್ನಮಾಲಿಕಾ
ರಚಿತಾಮೋಘವರ್ಷೇಣ ಸುಧಿಯಾ ಸದಲಂಕೃತಿಃ ॥೨೯॥

(i) ಈ ಗ್ರಂಥವನ್ನು ಕುರಿತು ದಿ॥ ಗೋವಿಂದಪೈ ಅವರ ತೀರ್ಮಾನಗಳನ್ನು ಹೀಗೆ ಸಂಗ್ರಹಿಸಬಹುದು:

(೧) ಅದ್ವೈತವಿಚಾರ, ಭಕ್ತಿ, ವಿಷ್ಣುಶಿವಸ್ತುತಿ ಮುಂತಾದ ಯಾವ ವೈದಿಕ ಸಂಗತಿಗಳ ಪ್ರಸ್ತಾವವೂ ಇದರಲ್ಲಿ ಇಲ್ಲ. ಆದ್ದರಿಂದ ಇದು, ಶಂಕರಾಚಾರ್ಯ ಇಲ್ಲವೆ ಶಂಕರಾನಂದಗುರು ಕೃತವಲ್ಲ (೨) 'ಖ' ಪ್ರತಿಯ ಕಡೆಯ ಶ್ಲೋಕ ('ವಿವೇಕಾತ್‌ತ್ಯಕ್ತ... ಸದಲಂಕೃತಿಃ') ಮಾತ್ರ ಅನುಷ್ಟುಪ್ ಛಂದಸ್ಸಿನಲ್ಲಿದ್ದು, ಉಳಿದ ೨೮ ಆರ್ಯಾವೃತ್ತ ಛಂದಸ್ಸಿನಲ್ಲಿವೆ; 'ಕ' ಪ್ರತಿಯ (ಕಡೆಯ ೨೯ನೆಯದೂ ಸೇರಿ) ಎಲ್ಲ ಶ್ಲೋಕಗಳೂ ಆರ್ಯಾವೃತ್ತಗಳಾಗಿವೆ. ಆದ್ದರಿಂದ, ಛಂದಸ್ಸಿನ ಪ್ರಯೋಗದ ದೃಷ್ಟಿಯಿಂದ 'ಕ' ಪ್ರತಿಯಲ್ಲಿ ಸುಸಾಂಗತ್ಯ ಕಂಡ ಬಂದು, ಅದರಲ್ಲಿ ಹೇಳಿರುವ ವಿಮಲನೇ ಕರ್ತೃವಾಗಿ ಕಂಡುಬರುತ್ತದೆ. (೩) ಎರಡೂ ಪ್ರತಿಗಳಿಗೂ ಸಮಾನವಾಗಿರುವ ಮೇಲ್ಕಂಡ (೧, ೨, ೨೮) ಶ್ಲೋಕಗಳಲ್ಲಿ ಎಲ್ಲೆಡೆಯೂ 'ಪ್ರಶ್ನೋತ್ತರ' ಎಂಬ ಪೂರ್ವಪದ ಸಮೇತವಾದ 'ಪ್ರಶ್ನೋತ್ತರ ಮಾಲಾ' ಎಂದಷ್ಟೇ ಇದ್ದರೂ 'ರತ್ನಮಾಲೀನ' ಎಂಬ ಮೊದಲ ಪಾದದ ಉಪಮಾನದಿಂದಾಗಿ ಅದು ಸಮಂಜಸವಾಗಿಯೇ ಇದೆ. ಆದರೆ, 'ಕ' ಪ್ರತಿಯ ೨೯ನೆಯ (ಕೊನೆಯ) ಅನುಷ್ಟುಪ್ ಶ್ಲೋಕದಲ್ಲಿ ಕೇವಲ 'ರತ್ನಮಾಲಿಕಾ' ಎದಷ್ಟೇ ಇದ್ದು, ಮುಖ್ಯವಾದ ಪೂರ್ವಪದ ಇಲ್ಲವಾಗಿದೆ. ಆದ್ದರಿಂದ 'ಖ' ಪ್ರತಿಯ ಕೊನೆಯ ಪದ್ಯ ಮೂಲಪ್ರತಿಯಲ್ಲಿ ಇದ್ದಿರಲಾರದು. (೪) ೨–೨೮ ಪದ್ಯಗಳಲ್ಲಿ 'ವಿಮಲ' ಪದದಲ್ಲಿ ಕವಿ ತನ್ನ ಹೆಸರನ್ನೆ ಸೂಚಿಸಿ, ಕೊನೆಯ ಪದ್ಯದಲ್ಲಿ ಸ್ಪಷ್ಟವಾಗಿಯೇ ಹೇಳಿಕೊಂಡಿದ್ದಾನೆ. (೫) ನೃಪತುಂಗನು ಕ್ರಿ.ಶ. ೮೭೫ರಲ್ಲಿ ಅಕಾಲವರ್ಷನಿಗೆ ಪಟ್ಟಕಟ್ಟಿ ನಿವೃತ್ತನಾದನೆಂದು ಪಾಠಕರು ಹೇಳಿರುವುದಕ್ಕೆ ಆಧಾರವಿಲ್ಲ. ಕ್ರಿ.ಶ. ೮೭೭ರ ಸೊರಬ ಶಾಸನದಂತೆ ಆ ಇಸವಿಯವರೆಗೂ ನೃಪತುಂಗನೇ ಆಳುತ್ತಿದ್ದನು. (೬) ತಿಬೆಟ್ ಭಾಷಾಂತರದಲ್ಲಿನ ಅಮೋಘೋದಯವನ್ನು ಅಮೋಘವರ್ಷನೊಂದಿಗೆ ಸಮೀಕರಣ ಮಾಡುವುದು ಸಲ್ಲದು. ಅಮೋಘೋದಯ = ಅಮೋಘವರ್ಷ ಎಂದಾದರೂ, ತಿಬೆಟ್ ಭಾಷಾಂತರ ಪ್ರಕ್ಷಿಪ್ತಶ್ಲೋಕವುಳ್ಳ ಪ್ರತಿಯ ಭಾಷಾಂತರವಾಗಿರಬಹುದು.

ಆದ್ದರಿಂದ ಈ ಕವಿತೆಯ ಕರ್ತೃ 'ವಿಮಲ' ; ನೃಪತುಂಗನಲ್ಲ... ಈ 'ವಿವೇಕಾತ್‌ತ್ಯಕ್ತ ರಾಜ್ಯೇನ' ಎಂಬ ಶ್ಲೋಕವು ಐತಿಹಾಸಿಕ ತಥ್ಯವನ್ನೇ ಹೇಳುತ್ತದೆಂದು ನಿಷ್ಪ್ರಮಾಣವಾಗಿ

ಒಪ್ಪಿದರೂ, ಇದರಿಂದ ನೃಪತುಂಗನು ಜೈನಮತವನ್ನು ಅವಲಂಬಿಸಿದನೆಂದೇನೂ ಅರ್ಥವಾಗುವುದಿಲ್ಲ; ವಿವೇಕದಿಂದ ತಾನೆ ರಾಜ್ಯಭಾರವನ್ನು ಬಿಟ್ಟನೆಂದು ಇದೆಯಲ್ಲದೆ, ಆ ವಿವೇಕೋದಯವು ಆತನಿಗೆ ಜೈನಧರ್ಮದಿಂದ ಆದುದೆಂದೇನೂ ಇಲ್ಲ (ಆ ವೇಳೆಗೆ, ಸುಮಾರು ೮೦–೮೨ ವಯಸ್ಸಿನ ಆತನಿಗೆ ಇದು ನೈಸರ್ಗಿಕ. ಈತನಿಗಿಂತ ಮೊದಲು ಅಜ್ಜ ಧ್ರುವರಾಜನ ಮೇಲ್ಪಂಕ್ತಿ ಇದ್ದೇ ಇದೆ.) (ನೃಪತುಂಗನ ಮತವಿಚಾರ ; ಕ.ಸಾ.ಪ., ೧೨–೪)

(ii) ಮುಳಿಯ ತಿಮ್ಮಪ್ಪಯ್ಯನವರ ತೀರ್ಮಾನ :

"ಈ ಎರಡೂ ಶಾಸನಗಳಿಂದಾಗಿ (ಸೊರಬ ಶಾಸನ ನಂ. ೮೫ ಮತ್ತು ಕನ್ಹೇರಿ ಶಾಸನ) ಕ್ರಿ.ಶ. ೮೭೭ (ಶಾ.ಶ. ೭೯೯)ರಲ್ಲಿಯೂ ನೃಪತುಂಗನು 'ವಿವೇಕಾತ್ಯಕ್ತ ರಾಜ್ಯ'ನಾಗಿಲ್ಲ. ರಾಜ್ಯಾಧಿರೂಢನಾಗಿಯೇ ಇದ್ದನು ಎಂಬುದು ಸಿದ್ಧವಾಗುತ್ತಿದೆ. ಇದರಿಂದ ಈ ಪ್ರಶ್ನೋತ್ತರಮಾಲಿಕೆ ಎಂಬ ಮತಗ್ರಂಥದಿಂದ ಕರ್ತೃತ್ವವು ನೃಪತುಂಗನಿಂದ ಕಳಚಿಹೋಗಿ ತನ್ಮೂಲಕವಾಗಿ ಆತನು ಜೈನಮತೀಯನು ಎನ್ನುವ ಹೇಳಿಕೆಯೂ ಮಾಸಿಹೋಗುತ್ತದೆ" (ಕವಿರಾಜಮಾರ್ಗ ವಿವೇಕ – ೧, ಪು. ೭೨)

೧೭. ಕವಿರಾಜಮಾರ್ಗವನ್ನು ಪ್ರಪ್ರಥಮವಾಗಿ ೧೮೮೩ರಲ್ಲಿಯೆ ವಿದ್ವಜ್ಜನರ ಗಮನಕ್ಕೆ ತಂದವರು ಬಿ.ಎಲ್.ರೈಸ್‌ರವರು ('Early Kannada Authors' - JRAS, N.S., Vol. XX, pp 295-314) ಎಂಬುದಾಗಿ ಕೆ.ಬಿ.ಪಾಠಕರು ಆ ಗ್ರಂಥದ ಪ್ರಥಮ ಮುದ್ರಣದ ಮುನ್ನುಡಿಯಲ್ಲಿ ತಿಳಿಸಿದ್ದಾರೆ. ಆದರೆ, J.F. ಫ್ಲೀಟರು, ಆ ಲೇಖನದಲ್ಲಿ ರೈಸರು ಎಲ್ಲಿಯೂ ಕವಿರಾಜಮಾರ್ಗದ ಹೆಸರನ್ನು ಕೂಡ ಎತ್ತಿಲ್ಲವೆಂದು ಹೇಳಿ, ಪಾಠಕರ ಈ ನಿರಾಧಾರವಾದ ಉಲ್ಲೇಖವನ್ನು 'Slovenly' ಅಲಕ್ಷ್ಯದ್ದು ಮತ್ತು ಅಜಾಗರೂಕ) ಎಂದು ಕರೆದಿದ್ದಾರೆ ! (Ind. Ant. XXXIII)

೧೮. ".... ಇದೇ ಪತ್ರಿಕೆಯಲ್ಲಿಯೂ ಇತರ ಪತ್ರಿಕೆಗಳಲ್ಲಿಯೂ (ಎಂದರೆ, ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ ಮತ್ತು ಪ್ರಬುದ್ಧ ಕರ್ಣಾಟಕ – ಸಂ.) ಕವಿರಾಜಮಾರ್ಗದ ಕರ್ತೃವಿನ. ವಿಷಯವಾಗಿ ಅನೇಕ ವಾಗ್ಯುದ್ಧಗಳು ನಡೆದಿವೆ. ಈ ಯುದ್ಧದಲ್ಲಿ ಅನ್ವಯಿಸುವ ಶಕ್ತಿ ನನಗಿಲ್ಲ. ಶ್ರೀಮಾನ್ ನಾರಾಯಣ ಶ್ರೀನಿವಾಸ ರಾಜಪುರೋಹಿತರು ಈ ಯುದ್ಧದಲ್ಲಿ ವಿಶೇಷವಾಗಿ ಅನ್ವಯಿಸಿ ಹಲವು ಆಯುಧಗಳನ್ನು ಜಳಪಿಸಿದ್ದಾರೆ. ಆದರೆ ಇದರಿಂದ ಕನ್ನಡಿಗರಿಗೆ ವಿಶೇಷ ಪ್ರಯೋಜನವಾದಂತೆ ಕಾಣುವುದಿಲ್ಲ. ಈ ವಾದದ ಗುಣಾವಗುಣಗಳನ್ನು ವಿಚಾರಮಾಡಲು ಇಲ್ಲಿ ಅವಕಾಶವಿಲ್ಲ ; ಇಷ್ಟು ಮಾತ್ರ ಹೇಳಬಹುದು ; ಜೈನನಾದ ನೃಪತುಂಗನು ಬ್ರಾಹ್ಮಣರ ಭಗವದ್ಗೀತೆಯ – 'ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ । ತತ್ರ ಶ್ರೀರ್ವಿಜಯೋ

ಭೂತಿರ್ಧ್ರುವ ನೀತಿರ್ಮತಿರ್ಮಮ॥' ಎಂಬ ಶ್ಲೋಕದಲ್ಲಿ ಉಕ್ತವಾದ ಕೆಲವು ಪದಗಳನ್ನೇ ತನಗೆ ಬಿರುದುಗಳಾಗಿ ಮಾಡಿಕೊಳ್ಳಲು ಕುತೂಹಲಿಯಾದುದಕ್ಕೆ ಕಾರಣವು ಗೋಚರವಾಗುವುದಿಲ್ಲ. ಶ್ರೀವಿಜಯ ಎಂಬ ಬಿರುದು ನೃಪತುಂಗನಿಗೆ ಉಂಟೆಂದು ತೋರಿಸುವುದಕ್ಕೆ ಶ್ರೀಮಾನ್ ರಾಜಪುರೋಹಿತರು ವೀರ ಶ್ರೀವಿಜಯನಕೆಯ್ಸಾರೆ ಸುರಾಂಗನೆಯ ರೊಸೆದು ಪರಸುವ ರವಮುಂ। ಭೋರೆಂದೆಸಗುವ ಕುಸುಮಾ। ಸಾರದ ಬಲ್ಸರಿಯುಮೆಸೆದುವಂಬರತಳದೊಳ್ ॥' ಎಂಬ ಪದ್ಯವನ್ನು ಉದಾಹರಿಸಿದ್ದಾರೆ. (ಪರಿಷತ್ಪತ್ರಿಕೆ, ಜುಲೈ ೧೯೨೩). ಈ ಪದ್ಯದಲ್ಲಿ ಶ್ರೀವಿಜಯ ಎಂಬ ಬಿರುದೇ ಇಲ್ಲ. ವೀರಶ್ರೀ ಎಂಬುದು ಕರ್ತೃ. ವಿಜಯ ಎಂದರೆ ಅರ್ಜುನ. ವೀರಲಕ್ಷ್ಮಿ ಅರ್ಜುನನ ಕೈಸೇರಲು ಸುರಾಂಗನೆಯರು ಹರಸಿದರು, ಪುಷ್ಪವೃಷ್ಟಿಯಾಯಿತು ಎಂಬುದು ಈ ಪದ್ಯದ ಅರ್ಥವು" (ಕವಿಚರಿತೆ: ತಿದ್ದಿದ ಮುದ್ರಣ ೧೯೨೪; ಅವತರಣಿಕೆ, ಪು. ೨೦)

೧೯. "These passages establish Nripatunga's Clims to authorship beyond dispute". (K.B. Pathak : ಕವಿರಾಜಮಾರ್ಗದ ಪೀಠಿಕೆ). III–೨೩೦, III –೨೨೫ ಈ ಪದ್ಯಗಳಲ್ಲಿನ ಉಲ್ಲೇಖಗಳನ್ನು ಕುರಿತು : "These facts prove that Nripatunga composed the present work".

೨೦. "... all the various allusions to the method, style opinions and teaching of Nripatunga. Atisayadhavala, etc., have, of course, tobe interpreted in accordance with any specific information that we can find else where. And, in the colophons, we have the plainest possible intimation that the author of the work was at any rate not Nripatunga. And the colophons explain, in the clearest manner, the real nature of the various references in the body of the work to the method, style, opinions and teachings of Nripatunga etc." (Dr. Fleet: Ind. Ant. Vol XXXIII) (ಇಲ್ಲಿ ಒಂದು ಸಂಗತಿಯನ್ನು ಗಮನಿಸಬಹುದು: ಫ್ಲೀಟರು 'ಕವೀಶ್ವರ' ಪಕ್ಷವಾದರೂ, ನೃಪತುಂಗಪಕ್ಷ ನಿರಸನಕ್ಕೆ ಅವರು ಹೂಡಿರುವ ಪ್ರತಿವಾದ ಬಲವತ್ತರವಾಗಿದೆ. ಆದ್ದರಿಂದ ಕವಿರಾಜಮಾರ್ಗವು ನೃಪತುಂಗಕೃತವಲ್ಲ. ಅನ್ಯಕವಿ ಕೃತ ಎಂದು ವಾದಿಸುವವರಿಗೆ ಅದು ಪ್ರಯೋಜನಕರ ವಾಗಬಲ್ಲದು – ಸಂ.)

೨೧. "ಕವಿರಾಜಮಾರ್ಗದ ದ್ವಿತೀಯ ಪರಿಚ್ಛೇದದ ಪದ್ಯಗಳು ೨೮–೩೦–೪೩ ಇವುಗಳಿಗೆ ವೃತ್ತಿ ಇದೆ. ಪದ್ಯ ೨೮ರ ವೃತ್ತಿಯಿಂದ ಹೊಸ ಅಂಶವೊಂದು ವ್ಯಕ್ತವಾಗುವುದರಿಂದ

ಆ ಪದ್ಯವನ್ನೂ ಅದರ ವೃತ್ತಿಯನ್ನೂ ಇಲ್ಲಿ ಕೊಡಲಾಗಿದೆ.. ವೃತ್ತಿ : 'ಕನ್ನಡ ಕವಿತೆಯೆಂಬ ಪೆಣ್ಗೆ ಪ್ರಾಸಮೆ ಪ್ರಾಣಮಾ ಪ್ರಾಸಂ ಶಬ್ದಾಳಂಕಾರದೊಳತಿಶಯಮವ (ದ)ಱ ಪ್ರಪಂಚಮಂ ನೃಪತುಂಗದೇವನ ಮತದಿಂ ಪೇೞ್ವೆಂ'

ಈ ವೃತ್ತಿಯನ್ನು ಯಾರೇ ಬರೆದಿರಲಿ, ಇದರಿಂದ ದ್ಯೋತವಾಗುವ ಮಹತ್ತ್ವದಂಶವೆಂದರೆ ಕೃತಕೃತ್ಯಮಲ್ಲವಲ್ಲಭವೆಂದರೆ ನೃಪತುಂಗದೇವನೆಂದೂ, ಆ ನೃಪತುಂಗನೇ ಕವಿರಾಜಮಾರ್ಗವನ್ನು ಬರೆದಿರುವನೆಂದೂ ಅದೀಗ ಮತ್ತಷ್ಟು ಬಲಪಡುವುದೆಂಬುದು. ಮುಂದೆ ಬೇರೆ ಎಡೆಯಲ್ಲಿ ಬರುವ ಪ್ರಯೋಗದಿಂದ ಈ ಅಂಶವೂ ಇನ್ನೂ ದೃಢವಾಗುತ್ತದೆ.

("ಗಟೆಯಿಸಿದರ್ಥಂ..." ಎಂದು ಮೊದಲಾಗುವ II–೫ ನೆಯ ಪದ್ಯ) "ಶ್ರೀವಿಜಯನ ಪ್ರಯೋಗಂ"

"ವ್ಯಾಖ್ಯಾನಕಾರನು ಈ ಪದ್ಯವನ್ನು ಉದಾಹರಿಸಿ ಅದನ್ನು ಶ್ರೀವಿಜಯನ ಪ್ರಯೋಗವೆಂದು ಕರೆದಿರುವುದರಿಂದ ಕವಿರಾಜಮಾರ್ಗವನ್ನು ಬರೆದವನು ಶ್ರೀವಿಜಯನೆಂಬಂಶವು ಮತ್ತಷ್ಟು ದೃಢಪಡುತ್ತದೆ. ಮೇಲೆ... ೨೮ನೆಯ ಪದ್ಯವನ್ನು ಉದಾಹರಿಸಿದೆಯಷ್ಟೆ. ಅಲ್ಲಿ ಕೃತಕೃತ್ಯ ಮಲ್ಲವಲ್ಲಭ ಎಂಬುದಕ್ಕೆ ವ್ಯಾಖ್ಯಾನಕಾರನು ನೃಪತುಂಗದೇವನೆಂದು ವ್ಯಾಖ್ಯಾನಾವಸರದಲ್ಲಿ ಬರೆದಿದ್ದಾನೆ. ಇಲ್ಲಿ ಶ್ರೀವಿಜಯನೆಂದು ಹೇಳಿದ್ದಾನೆ. ಕೃತಕತ್ಯಮಲ್ಲವಲ್ಲಭ, ನೃಪತುಂಗದೇವ, ಶ್ರೀವಿಜಯ ಎಂಬಿವುಗಳು ಒಬ್ಬನಿಗೇ ಇದ್ದ ಪರ್ಯಾಯನಾಮಗಳು. ಶ್ರೀವಿಜಯನು ಬೇರೆ ಎಂಬ ತಿಳಿವಳಕೆಯನ್ನು ಇದು ನಿರಸನಮಾಡುವುದು. ಕೇಶಿರಾಜನು ಪೂರ್ವಕವಿಗಳನ್ನು ಸ್ಮರಿಸುವ ಸಂದರ್ಭದಲ್ಲಿ ನೃಪತುಂಗನ ಹೆಸರನ್ನು ಹೇಳದೆ ಶ್ರೀವಿಜಯನ ಹೆಸರನ್ನು ಹೇಳಿರುವುದರಿಂದ ಇವು ಬೇರೆ ಬೇರೆ ಕವಿಗಳ ಹೆಸರಾಗಿರಬೇಕೆಂದು ಕೆಲವರು ಅಭಿಪ್ರಾಯಪಟ್ಟಿರುವುದನ್ನು ಪಂಡಿತರು ಬಲ್ಲರು. ಶ್ರೀವಿಜಯನೇ ನೃಪತುಂಗದೇವನೆಂಬುದು ಈ ವ್ಯಾಖ್ಯಾನಕಾರನ ಬರವಣಿಗೆಯಿಂದ ಸ್ಪಷ್ಟವಾಗಿದೆ. ಕೇಶಿರಾಜನು ಶ್ರೀವಿಜಯನ ಹೆಸರನ್ನು ಹೇಳಿರುವುದರಿಂದ ಅದು ನೃಪತುಂಗನ ಹೆಸರೆಂದು ನಿರ್ಧರಿಸಬೇಕು. ಈ ಎರಡು ಹೆಸರುಗಳು ಒಬ್ಬನಿಗೆ ಇದ್ದುದರಿಂದ ನೃಪತುಂಗನು ಎಂದರೆ ಶ್ರೀವಿಜಯನು ಕವಿರಾಜಮಾರ್ಗದ ಕರ್ತೃವೆಂದು ನಿರ್ಧರಿಸಿಕೊಳ್ಳಬೇಕು. ಕವಿರಾಜಮಾರ್ಗದಲ್ಲಿ ಪದ್ಯಕವಿಗಳನ್ನು ಹೆಸರಿಸುವ ಸಂದರ್ಭದಲ್ಲಿ ಶ್ರೀವಿಜಯನ ಹೆಸರೂ ಬಂದಿರುವುದರಿಂದ ಕವಿರಾಜಮಾರ್ಗವನ್ನು ಬರೆದ ಶ್ರೀವಿಜಯನು ತನ್ನ ಹೆಸರನ್ನು ಕವಿಗಳ ಗುಂಪಿಗೆ ಸೇರಿಸಿ ಹೇಳಿದುದು ಅಷ್ಟು ಯುಕ್ತವಾಗಲಾರದೆಂಬ ಆಕ್ಷೇಪಣೆ ಬಲವತ್ತರವಾಗಿಲ್ಲ. ನೃಪತುಂಗನು ಆಗಿನ

ಕಾಲದಲ್ಲಿ ಸರ್ವಮಾನ್ಯನಾದ ಕವಿಯಾಗಿದ್ದನು. ಎಲ್ಲರ ಮಾನ್ಯತೆಗೆ ಪಾತ್ರನಾಗಿದ್ದ ರಾಜಕವಿ ತನ್ನ ಹೆಸರನ್ನು ಕವಿಗಳ ಶ್ರೇಣಿಯಲ್ಲಿ ಸೇರಿಸಿ ಹೇಳಿದುದರಿಂದ ಯಾವ ನ್ಯೂನತೆಯೂ ಇಲ್ಲ. ಅಹಂಕಾರವೂ ಇಲ್ಲ, ತಮ್ಮನ್ನು ತಾವೇ ಹೊಗಳಿಕೊಳ್ಳುವ ಕವಿಗಳ ಆತ್ಮಶ್ಲಾಘನೆಗಿಂತ ಇದೇನು ಅಧಿಕವಾಗಿಲ್ಲ. ಆದ್ದರಿಂದ ಕೇಶಿರಾಜನೂ ಅವನಿಗೆ ಮುಂಚೆ ಇದ್ದ ದುರ್ಗಸಿಂಹನೂ ಹೆಸರಿಸಿದ ಶ್ರೀವಿಜಯನು ನೃಪತುಂಗದೇವನೇ": ಪ್ರೊ॥ ಡಿ.ಕೆ. ಭೀಮಸೇನರಾವ್, 'ಶಬ್ದಮಣಿದರ್ಪಣದ ಪಾಠಾಂತರಗಳು' (೧೯೫೧) (ಪು.೪೧–೪೪)

೨೨. "ತಥಾಪಿ ಸ ಕೈಶ್ಚಿದೇವ ಅಂಗೀಕ್ರಿಯತೇ ಉತ್ತರಮಾರ್ಗಾನುಗಾಮಿಭಿಃ ಕವೀಶ್ವರೈಃ ನ ಸರ್ವೈಃ, ದಕ್ಷಿಣಮಾರ್ಗಾನುಯಾಯಿಭಿಸ್ತೈರನಂಗೀಕಾರಾತ್. 'ಎನ್' ಪಕ್ಷಪಾತಿನೋ ಹಿ ದಾಕ್ಷಿಣಾತ್ಯಾಃ ಕವಿಜನಾ ಇತಿ. ದಕ್ಷಿಣೋತ್ತರ ಮಾರ್ಗಭೇದ ಭಿನ್ನಪ್ರಯೋಗ ಚಾತುರೀ ಪ್ರಪಂಚೋ ನೃಪತುಂಗ ಗ್ರಂಥೇ ದ್ರಷ್ಟವ್ಯ ಇತಿ" – ಶಬ್ದಾನುಶಾಸನ, ೨೮೮ನೆಯ ಸೂತ್ರದ ವ್ಯಾಖ್ಯಾನ; ಪು. ೨೬೩.

೨೩. "It is apparently thought that no quotations from previous literature are to be found in this work (Preface, p.22) the quotations under Prasa, etc., being interpolations (foot note, p. 22) But it has to be noticed that one merit in Kannada Lakshnagranthas is a careful and meticulous use of quotations from older writers by way of illustrations to rules and 'Nripatunga', whoever he is, is no exception" (Q.J.M.S., Vol.XXIII, No.3, pp.438-39). (ಈ ಉದ್ಧರಣದಲ್ಲಿ ನಿರ್ದೇಶಿಸಿರುವ ಪುಟಸಂಖ್ಯೆ ಮದ್ರಾಸು ಮುದ್ರಣವನ್ನು ಕುರಿತದ್ದು. – ಸಂ.)

೨೪. 'ಇವು ನಿಯತಂ ದಕ್ಷಿಣದೇಶವರ್ತಿ ಕವಿರಾಜಮಾರ್ಗದೊಳ್ ನೆಗಟ್ಟುಂ ಮತ್ತವಱ ವಿಪರ್ಯಯ ವೃತ್ತಿಯೆ ಬವರಿಸುಗುಮುದೀಚ್ಯ ಮಾರ್ಗದೊಳ್ ಪ್ರಚುರತೆಯಿಂ ॥' (ಕಾವ್ಯಾವಲೋಕನ, ಸೂ.೧೨೪), 'ಇವು (ಎಂದರೆ ಈ ಹತ್ತು ಗುಣಗಳು) ದಕ್ಷಿಣ ದೇಶದಲ್ಲಿ ವರ್ತಿಸುವ (ಎಂದರೆ ರೂಢಿಯಾಗಿರುವ) ಕವಿಶ್ರೇಷ್ಠರ ಮಾರ್ಗದಲ್ಲಿ ನಿಯತವಾಗಿ ಕಂಡುಬರುತ್ತವೆ ; ಅವುಗಳ ವಿಪರ್ಯಯ ಪ್ರಯೋಗವೆ ಉತ್ತರಮಾರ್ಗದಲ್ಲಿ ವಿಶೇಷವಾಗಿ ಸಲುವಳಿಯಾಗುತ್ತವೆ'. ಇದು ಪದ್ಯದ ತಾತ್ಪರ್ಯ. ಇಲ್ಲಿ ಕಾವ್ಯಾವಲೋಕನಕಾರ 'ದಕ್ಷಿಣ ದೇಶವರ್ತಿ ಕವಿರಾಜಮಾರ್ಗ', 'ಉದೀಚ್ಯ ಮಾರ್ಗ' ಎಂಬುವನ್ನು ೧೨೫ನೆಯ ಸೂತ್ರದಲ್ಲಿ 'ವೈದರ್ಭಗೌಡಮಾರ್ಗ' ಎಂದೇ ಸ್ಪಷ್ಟಪಡಿಸಿದ್ದಾನೆ. 'ದಕ್ಷಿಣ ದೇಶವರ್ತಿ ಕವಿರಾಜಮಾರ್ಗ' ಎಂಬ ಮಾತಿಗೆ 'ದಕ್ಷಿಣ

ದೇಶದಲ್ಲಿ ಪ್ರಚುರವಾಗಿರುವ ಕವಿಶ್ರೇಷ್ಠರ ಕಾರ್ವಮಾರ್ಗ' ಎಂದು ಅರ್ಥಮಾಡಬೇಕು. ಆದ್ದರಿಂದ "…. ಇವು ನಿಯತಂ ದಕ್ಷಿಣದೇಶವರ್ತಿ ಕವಿರಾಜಮಾರ್ಗದೊಳ್ ನೆಗಳ್ಗುಂ' ಎಂದಿರುವುದರಿಂದ (ನಾಗವರ್ಮನು) 'ಕವಿರಾಜಮಾರ್ಗ' ಗ್ರಂಏಥವನ್ನೂ ಓದಿರುವುದು ಸೂಚಿತವಾಗುತ್ತದೆ'' ಎಂದು ಡಾ॥ ಕೆ.ಕೃಷ್ಣಮೂರ್ತಿಗಳು ಅಭಿಪ್ರಾಯಪಟ್ಟಿರುವುದಕ್ಕೆ ('ಕನ್ನಡದಲ್ಲಿ ಕಾವ್ಯತತ್ತ್ವ', ಪು. ೪೨) ನಾಗವರ್ಮನ ಈ ಉಕ್ತಿ ಆಧಾರವಾಗಲಾರದು. ಇದರಿಂದ, ಅವನು ಕವಿರಾಜಮಾರ್ಗವನ್ನು ಓದಿರಲಾರ ಎಂದು ನಮ್ಮ ಅಭಿಪ್ರಾಯವಲ್ಲ. ಆ ಅಭಿಪ್ರಾಯವನ್ನು ಸಮರ್ಥಿಸಲು ಈ ಉಕ್ತಿ ಆಧಾರವಾಗಲಾರದಷ್ಟೆ; ಬೇರೆಯ ಆಧಾರಗಳನ್ನು ಹುಡುಕಬೇಕು. ಪ್ರೊ॥ ತೀ.ನಂ.ಶ್ರೀ. ಯವರೂ ಹೆಚ್ಚು ಕಡಮೆ ಡಾ॥ ಕೃಷ್ಣಮೂರ್ತಿಯವರ ಅಭಿಪ್ರಾಯವನ್ನೆ ಹೊಂದಿದ್ದಾರೆ.(ಭಾ.ಕಾ.ಮೀ., ಪು. xxii, ತಿದ್ದುಪಡಿ). ದಿ॥ ಆರ್. ನರಸಿಂಹಾಚಾರ್ಯರು "The context clearly shows that the expression Kavirajamarga does not refer to any work of that name ; but that it smiply means the path of excellent poets" ಎಂದು ಸ್ಪಷವಾಗಿ ತಿಳಿಸಿದ್ದಾರೆ. (ಕಾವ್ಯಾವಲೋಕನ, ದ್ವಿತೀಯ ಮುದ್ರಣ ಪು. xxxii)–

೨೫. "ಕನ್ನಡದ ದಕ್ಷಿಣೋತ್ತರ ಮಾರ್ಗಗಳಿಗೆ ಸಂಬಂಧಿಸುವ ವಿಷಯವು ಕವಿರಾಜಮಾರ್ಗದಲ್ಲಿ ಒಂದೇ ಒಂದು ಕಡೆ ದೊರೆಯುತ್ತದೆ. ಅದಾವುದೆಂದರೆ, ಕ್ರಿಯೆಗಳಲ್ಲಿ ನೋಟ್ಪಿಂ, ತರಿಸುವೆಂ ಇತ್ಯಾದಿ ರೂಪಗಳನ್ನು ದಕ್ಷಿಣಮಾರ್ಗದ ಕವಿಗಳೂ ಅವಕ್ಕೆ ಪ್ರತಿಯಾಗಿ ನೋಡುವೆಂ, ತರಿಪೆಂ ಇತ್ಯಾದಿ ರೂಪಗಳನ್ನು ಉತ್ತರಮಾರ್ಗದ ಕವಿಗಳೂ ಪ್ರಯೋಗಿಸುತ್ತಾರೆ ಎಂಬುದೇ. ಏವಂಚ ಸಮಾನಾರ್ಥಕವಾದ ಕೆಲವು ದ್ವಿರೂಪ ಕ್ರಿಯೆಗಳಲ್ಲಿ ಒಂದು ಉತ್ತರಮಾರ್ಗದಲ್ಲಿಯೂ ಮತ್ತೊಂದು ದಕ್ಷಿಣಮಾರ್ಗದಲ್ಲಿಯೂ ವಿಶೇಷವಾಗಿ ಬಳಕೆಯಲ್ಲಿರುವುದೇ ಈ ಮಾರ್ಗಗಳಿಗೆ ಭೇದಕಗುಣವೆಂದು ಫಲಿತವಾಯಿತು. ನೃಪತುಂಗನ ಕಾಲದಲ್ಲಿ ಒಂದು ವೇಳೆ ಈ ಭೇದವು ಇದ್ದಿರಬಹುದು. ಆದರೆ ಈಚೆಯ ಗ್ರಂಥಗಳಲ್ಲಿ ಕ್ರಿಯೆಗಳ ರೂಪದ್ವಯವೂ ದೊರೆಯುತ್ತದೆ. ಉತ್ತರಮಾರ್ಗದಲ್ಲಿ ನೃಪತುಂಗನ ಹೇಳಿಕೆಯ ಪ್ರಕಾರ 'ಟ' ಕಾರ ವಿಶಿಷ್ಟವಾದ ಕ್ರಿಯಾರೂಪವು ಬಳಕೆಯಲ್ಲಿಲ್ಲ. ತೆಲುಗಿನಲ್ಲೂ 'ಟ'ಕಾರವಿಲ್ಲ. ಆದುದರಿಂದ ಉತ್ತರಮಾರ್ಗವು ತೆಲುಗಿನ ಸಂಪರ್ಕದಿಂದ ಹುಟ್ಟಿತು ಎಂದು ನಿರ್ಣಯಿಸುವುದು ದಾರ್ಷ್ಟ್ಯವೇ ಸರಿ. ತೆಲುಗಿನಲ್ಲಿ ಈಗ 'ಟ' ಕಾರವಿಲ್ಲದಿದ್ದರೂ ಒಂದಾನೊಂದು ಕಾಲದಲ್ಲಿ ಅದು ಇದ್ದಿರಬಹುದು ಎಂಬ ಊಹೆಗೆ ಸಾಧಕವಾದ ಗುರುತುಗಳು ಶಬ್ದಗಳಲ್ಲಿ ಕಾಣತ್ತವೆ…" ಎಂದು ಹೇಳಿ ಮಾರ್ಗಭೇದ ವಿಚಾರದಲ್ಲಿ ನಾಗವರ್ಮ

ಭಟ್ಟಾಕಳಂಕರ ಮತಗಳನ್ನು ತಿಳಿಸಿ ಆರ್. ನರಸಿಂಹಾಚಾರ್ಯರೂ ತಮ್ಮ ವಾದವನ್ನು ಹೀಗೆ ಮುಗಿಸಿದ್ದಾರೆ; "ಇದುವರೆಗೂ ಮಾಡಿದ ವಿಚಾರದಿಂದ ಕನ್ನಡದಲ್ಲಿ ದಕ್ಷಿಣೋತ್ತರ ಮಾರ್ಗಗಳುಂಟು ; ಅವಕ್ಕೆ ಸಮಾನಾರ್ಥಕವಾದ ದ್ವಿರೂಪಕ್ರಿಯೆಗಳಲ್ಲಿಯೂ ಉತ್ತಮಪುರುಷ, ದ್ವಿರೂಪ ಸರ್ವನಾಮಗಳಲ್ಲಿಯೂ ಅನ್ಯತರವನ್ನು ಪ್ರಯೋಗಿಸುವುದೇ ಭೇದಕಗುಣವು – ಎಂದು ಫಲಿತವಾಯಿತು. ಈ ಭೇದಕ್ಕೆ ತಮಿಳಾಗಲಿ ತೆಲುಗಾಗಲಿ ಕಾರಣವೆಂದು ಹೇಳಲು ಆಧಾರವಿಲ್ಲ. ಆದುದರಿಂದ ಅತ್ಯಲ್ಪವಾಗಿಯೂ ಅಮುಖ್ಯವಾಗಿಯೂ ಇರುವ ಭೇದವನ್ನು ಆಧಾರವಾಗಿಟ್ಟುಕೊಂಡು ದಕ್ಷಿಣೋತ್ತರ ಮಾರ್ಗಗಳಿಗಾಗಿ ಈಗ ಹೋರಾಡುವುದು ಅಷ್ಟು ಪ್ರಯೋಜನಕಾರಿಯಲ್ಲ" (ಕವಿಚರಿತೆ, ಸಂಪುಟ ೨ರ ಅವತರಣಿಕೆ ಪು. ೨೩–೨೫)

೨೬. "...ಕನ್ನಡ ತೆಲುಗು ತಮಿಳು – ಈ ಮೂರೂ ಒಂದೇ ಮೂಲಭಾಷೆಯಿಂದ ಹುಟ್ಟಿದ್ದುವಾದ್ದರಿಂದ ತೆಲುಗು ತಮಿಳುಗಳ ಸಂಪರ್ಕದಿಂದಲೇ ಉತ್ತರ ದಕ್ಷಿಣ ಮಾರ್ಗಭೇದವುಂಟಾಯಿತೆಂಬ ವಾದವು ಸಮರ್ಪಕವಾದುದಲ್ಲ. ಹಿಂದೆಯೇ ಹೇಳಿದಂತೆ ದೇಶವಿಸ್ತಾರದಿಂದ ಪೂರ್ವದಲ್ಲಿಯೂ ಪ್ರಾಂತಭೇದವಿತ್ತೆಂದು ಸ್ಥೂಲವಾಗಿ ಒಪ್ಪಿಕೊಳ್ಳಬಹುದು. ಆ ವ್ಯತ್ಯಾಸವು ಇಂಥದೇ ಎಂದು ನಿರ್ಧರಿಸುವುದಕ್ಕೆ ಪ್ರಯತ್ನಿಸುವುದು ಪ್ರಕೃತಸ್ಥಿತಿಯಲ್ಲಿ ಸಾಹಸಕಾರ್ಯವೆಂದು ತೋರುತ್ತದೆ." (ಕನ್ನಡ ಕೈಪಿಡಿ, ಪ್ರಥಮ ಸಂಪುಟ, ಪು. ೩೬೫).

೨೭. ಮಱುಗು (೧–೫೮); ಉಲ್ಲಿಂ, ಊ (೧–೬೩), ಉಂತೆ (೩–೧೦೫): ಅಟ್ಟಿಯೆ, ಅನುಕ್ರಮೋಕ್ತಿಯೆ (೧–೮೫, ೮೭); ಅದರಱಿಯೆ (೧–೮೭); ನೋಟ್ಟಿಗ (=ನೋಡಲಿ) (೧–೮೯); ಈ ತೆಱತ್ತು, ಎರಟ್ಟಿಱತ್ತು (೧–೧೦೧, ೧೧೪); ನೋಡಲಿಂ (೧–೧೨೨), ಕಲ್ಲದರಿಂ (೨–೧೪); ಬಾರಾದೆ, ಬಗೆಯಾದೆ, ತಡೇದಾನ್, ಅವನಾನ್, ಅಟ್ಟಿದೇನ್ (೧–೧೨೮); ಸಯ್ (=ಸಾಯ್) (೧–೧೩೦); ಒಪ್ಪುವವಳಾನ್ (೨–೧೪೫), ಗುಣಂಗಳಾನ್ (೩–೧೨), ಮತ್ತು ೨–೧೭, ೧೮ರಲ್ಲಿನ ಇಂಥವೇ ಪ್ರಯೋಗಗಳು ; ಅಪ್ಪೊನ್ (೨–೧೪೮); ಕಿರಿ (೩–೧೪೪).
ಮೇಲ್ಕಂಡ ಪ್ರಯೋಗಗಳಲ್ಲಿ ಕೆಲವುಗಳ ಬಗೆಗೆ ಬಿ.ಎಂ. ಶ್ರೀ. ಅವರ ಅಭಿಪ್ರಾಯ ಗಮನಾರ್ಹ.

೨೮. 'In st. 128 he gives examples of ಗೌರವ ದೋಷ, making a syllable long when it should be short. These are : ಬಗೆಯಾದ for ಬಗೆಯದೆ, ಅವನಾನ್ for ಅವನನ್, ಅಟ್ಟಿದೇನ್ for ಅಟ್ಟಿದೆನ್, ಬಾರಾದೆ (the true reading which

satisfies the metre) for ಬಾರದೆ (which is the corrupt reading apparently corrected by a copyist), ತಡೆದಾನ್ for ತಡೆದನ್. These especially the negative forms of the verb, are taken even by the author of Kavirajamarga as errors, and as objectionable, when really the negative froms were the older froms found in inscriptions and nearer the Tamil froms which still persist to our own days. The oldler forms in the accusative is noted by kesiraja : Sutra ೧೧೮ example : ತನತ್ತು ಬಿಲ್ಲಾನದನಂತೆ ಕೀಸುವಂ. (Nripatunga himself in II–೧೫, ೧೬, ೧೭, ೩೬೨, See also II – ೧೦೪, p ೫೪) (೩೬೨ ಪದ್ಯಸಂಖ್ಯೆ ತಪ್ಪಾಗಿ ಅಚ್ಚಾಗಿರುವ ಹಾಗೆ ಕಾಣುತ್ತದೆ. ಉಳಿದವು ಮದರಾಸು ಮುದ್ರಣದಲ್ಲಿರುವಂತೆ – ಸಂ.) A Curious trace of this is preserved in Kesiraja: Sutra ೬೧, Parishad pp. ೪೮–೪೯. ಬಗೆವೊಡಮಿನಿಸಿನಿಸಿರ ಅದೆ, ಇರ ಅದೇ, ಇರಾದೆ, ಇರದೆ," (Q.J.M.S., Vol. XXIII New Series no. ೩; p. ೪೩೯)
(I-೧೨೮ನೆಯ ಪದ್ಯಸಂಬಂಧವಾಗಿ ನಮ್ಮ ಟಿಪ್ಪಣಿಯನ್ನು ನೋಡಿ : ಈ ಪದ್ಯ ಗೌರವದೋಷಕ್ಕೆ ಉದಾಹರಣೆಯಾಗಿರದೆ, ನಿಜವಾಗಿ ಲಘುದೋಷಕ್ಕೆ ಉದಾಹರಣೆ ಎಂಬ ನಮ್ಮ ಊಹೆ ಸರಿಯಾಗಿರುವ ಪಕ್ಷಕ್ಕೆ ದೀರ್ಘ ಆಕಾರವನ್ನುಳ್ಳ ನಿಷೇಧಾತ್ಮಕ (ಬಾರಾದೆ ಇತ್ಯಾದಿ) ಕ್ರಿಯಾರೂಪಗಳು ಕವಿರಾಜಮಾರ್ಗಕಾರನಿಗೂ ಸಮ್ಮತವೆಂದಾಗುತ್ತದೆ. – ಸಂ)

* * * *

# ಪರಿಶಿಷ್ಟ

## ಕವಿರಾಜಮಾರ್ಗದಲ್ಲಿ ಬಳಕೆಯಾಗಿರುವ ಛಂದಸ್ಸುಗಳು

### ೧. ಛಂದಸ್ಸುಗಳ ಸಂಖ್ಯಾವಿವರ

ಪರಿಚ್ಛೇದ I : ಒಟ್ಟು ಪದ್ಯಸಂಖ್ಯೆ : ೧೫೦–ಕಂದ ೧೧೦ ; ವೃತ್ತ ೩೬ ; ಗೀತಿಕೆ೪

ಪರಿಚ್ಛೇದ II : ಒಟ್ಟು ಪದ್ಯಸಂಖ್ಯೆ : ೧೫೫–ಕಂದ ೯೬ ; ವೃತ್ತ ೧೫ ; ಗೀತಿಕೆ ೧೬ ; ಶ್ಲೋಕ ೨೮

ಪರಿಚ್ಛೇದ III : ಒಟ್ಟು ಪದ್ಯಸಂಖ್ಯೆ : ೨೩೧–ಕಂದ ೨೦೭ ; ವೃತ್ತ ೨೦ ; ಗೀತಿಕೆ ೪ (ಮದರಾಸು ಪ್ರತಿಯಲ್ಲಿ ಮಾತ್ರ ಇದೆಯೆಂದು ಹೇಳಲಾದ ಒಂದು ಕಂದವನ್ನು ಬಿಡಲಾಗಿದೆ.)

ಅಧಿಕ ಪಾಠ : ಕಂದ ೫

ಗ್ರಂಥದ ಒಟ್ಟು ಪದ್ಯಸಂಖ್ಯೆ : ೫೩೬ + ೫. ಇವುಗಳಲ್ಲಿ, ಕಂದ ೪೨೧ + ೫; ವತ್ತ ೭೧; ಶ್ಲೋಕ ೨೮; ಗೀತಿಕೆ ೨೪.

### ೨. ವರ್ಣವೃತ್ತಗಳ ವಿವರ

(೧) ಚಂಪಕಮಾಲೆ : ನಜಭಜ ಜಂಜರಂ ಬಗೆಗೊಳ್ಳುತ್ತಿರೆ ಚಂಪಕಮಾಲೆ ಯೆಂದಪರ್.
I – ೧೧೫,೧೧೬, ೧೨೦, ೧೨೧, ೧೨೨, ೧೨೩, ೧೨೪, ೧೪೯ ; II – ೧೦೪, ೧೦೫, ೧೦೬, ೧೦೭, ೧೦೮, ೧೦೯, ೧೧೦ : ಒಟ್ಟು ೧೫.

(೨) ಉತ್ಪಲಮಾಲೆ : ಉತ್ಪಲಮಾಲೆಯಪ್ಪುದು ಭರಂನಭಭಂರಲಗಂ ನೆಗಟ್ದಿರಲ್.
I – ೧೧೩, ೧೧೪, ೧೧೭, ೧೧೮, ೧೧೯ ; II – ೯೯, ೧೦೦, ೧೦೧, ೧೦೨, ೧೦೩, ೧೫೫; ಒಟ್ಟು ೧೧.

(೩) ದ್ರುತವಿಲಂಬಿತ: ದ್ರುತವಿಲಂಬಿತಮೊಪ್ಪೆ ನಭಂ ಭರಂ.

I – ೧೩೮, ೧೩೯, ೧೪೧, ೧೪೨, ೧೪೩, ೧೪೪, ೧೪೫, ೧೪೬, ; III – ೨೧೮, ೨೧೯ : ಒಟ್ಟು ೧೦.

(೪) ಮಣಿ(ವಿ)ಭೂಷಣ: ಅಪ್ಪುದಾಮಣಿವಿಭೂಷಣಮೇ ರನಭಂಭರಂ.
I – ೧೨೬, ೧೨೭, ೧೨೮, ೧೨೯, ೧೩೧, ೧೩೨, ೧೩೪ ; III : ೨೨೦, ೨೨೪ : ಒಟ್ಟು ೯.

(೫) ಮಾಲಿನೀ: ನನಮಯಯಗಣಂಗಳ್ ಮಾಲಿನೀವೃತ್ತಮಕ್ಕುಂ.
II–೧೫೪ ; III–೨೦೯, ೨೧೦, ೨೧೧, ೨೧೨, ೨೧೩, ೨೧೪, ೨೧೫, ೨೧೬ : ಒಟ್ಟು ೯.

(೬) ಮಂಗಳ: ನಭಜ ಜಂಜಗಮುಮೊಂದಿರಲಪ್ಪುದು ಮಂಗಳಂ.
I – ೧೩೦, ೧೩೩, ೧೩೫, ೧೩೬ ; III – ೨೨೧, ೨೨೨: ಒಟ್ಟು ೬.

(೭) ವಿಧಿವೃತ್ತ : ಸಜಸಂಸಯಂ ನೆರೆದಿರಲ್ ವಿಧಿವೃತ್ತಮಕ್ಕುಂ.
III – ೨೨೬, ೨೨೭, ೨೨೮, ೨೨೯ : ಒಟ್ಟು ೪.

(೮) ಪುಷ್ಪಿತಾಗ್ರ : ಇದು ಅರ್ಧಸಮವೃತ್ತ. ಇದರ ವಿಷಮಪಾದಗಳಲ್ಲಿ ನನರಯ ಗಣಗಳೂ, ಸಮಪಾದಗಳಲ್ಲಿ ನಜಜರಗಣಗಳೂ ಒಂದು ಗುರುವೂ ಬರುವುವು.
I – ೧೪೭, ೧೪೮; III – ೨೩೦ : ಒಟ್ಟು ೩.

(೯) ಮತ್ತೇಭವಿಕ್ರೀಡಿತ : ಸಭರಂ ನಂ ಮಯಲಂಗಮುಂ ಬಗೆಗೊಳಲ್ ಮತ್ತೇಭ ವಿಕ್ರೀಡಿತಂ.
I – ೧೫೦ ; III – ೨೪೧ : ಒಟ್ಟು ೨.

(೧೦) ಶಾರ್ದೂಲವಿಕ್ರೀಡಿತ : ಕಣ್ಗೊಪ್ಪಲ್ ಮಸಜಂತಸತಂತಗಮುಮಾ ಶಾರ್ದೂಲ ವಿಕ್ರೀಡಿತಂ.
II – ೧೪೨ : ೧.

(೧೧) ವೀರವೃತ್ತ : ವೀರವೃತ್ತಮಿರಲ್ ರಸಸಂಲಗಂ.
I – ೧೪೦ : ೧.

(೧೨) (ಅನುಷ್ಟುಪ್) ಶ್ಲೋಕ : II – ೧೧೨ ರಿಂದ ೧೩೬ ; ೧೩೯ ರಿಂದ ೧೪೧ : ಒಟ್ಟು ೨೮.
ಸಂಸ್ಕೃತದ ಅನುಷ್ಟುಪ್ ಶ್ಲೋಕದಲ್ಲಿ (೮ + ೮ = ೧೬) ಹದಿನಾರು ಅಕ್ಷರಗಳ ಎರಡು ಪಾದಗಳು. ಮಾರ್ಗಕಾರನು ಇದನ್ನು ಕನ್ನಡದ ಜಾಯಮಾನಕ್ಕೆ ಹೊಂದಿಸಲು ಆದಿಪ್ರಾಸವನ್ನೂ, ೮ ಅಕ್ಷರಗಳಾದ ಮೇಲೆ ಒಳಪ್ರಾಸವನ್ನೂ ಯೋಜಿಸಿರುವುದನ್ನು ಗಮನಿಸಬೇಕು.

## ೩. ಮಾತ್ರಾವೃತ್ತ

ಕಂದ : ಒಟ್ಟು ೪೧೩+೫ (ಕಂದಪದ್ಯವನ್ನು ಸುಲಭವಾಗಿ ಗುರುತಿಸ ಬಹುದಾದ್ದರಿಂದ ಪರಿಚ್ಛೇದ – ಪದ್ಯಸಂಖ್ಯಾನುಗುಣವಾಗಿ ಅವನ್ನು ಇಲ್ಲಿ ನಿರ್ದೇಶಿಸಿಲ್ಲ. ಒಟ್ಟು ಪದ್ಯ ಸಂಖ್ಯೆಯಲ್ಲಿ ಸು. ೪–೫ರಷ್ಟು ಕಂದಪದ್ಯಗಳಿರುವುದು ಗಮನಾರ್ಹ.) ಲಕ್ಷಣ: "ಚತುರ್ಮಾತ್ರಾಗಣವು ಒಂದು ಮೂರನೆಯ ಪಾದಗಳಲ್ಲಿ ಮೂರು ಮೂರೂ, ಎರಡು ನಾಲ್ಕನೆಯ ಪಾದಗಳಲ್ಲಿ ಐದೈದೂ ಇರಬೇಕು. ಇದರ ಪೂರ್ವೋತ್ತರಾರ್ಧಗಳ (೧–೩–೫–೭ನೆಯ) ವಿಷಮಸ್ಥಾನಗಳಲ್ಲಿ ಮಧ್ಯಗುರುವುಳ್ಳ (U-U) ಗಣಗಳು ಬರಕೂಡದು. ಆರನೆಯ ಸ್ಥಾನದಲ್ಲಿ (U-U) 'ಜ' ಗಣವಾಗಲಿ ನಾಲ್ಕು ಲಘುವುಳ್ಳ (UUUU) ಗಣವಾಗಲಿ ಬಂದು ಮೊದಲಿನ ಹ್ರಸ್ವದ ಮುಂದೆ ಯತಿ ಇರಬೇಕು." ಕವಿರಾಜಮಾರ್ಗಕಾರನೂ ಕಂದಪದ್ಯಕ್ಕೆ ಯತಿ ನಿಯಮವನ್ನು ವಿಧಿಸಿದ್ದಾನೆ. (ನೋಡಿ : I–೭೭). ಮುಂದಿನ ಚಂಪೂ ಕಾವ್ಯಗಳಲ್ಲಿ ವೃತ್ತಗಳ ಬಳಕೆಗಿಂತ ಕಂದಕ್ಕೇ ಹೆಚ್ಚಿನ ಪ್ರಾಧಾನ್ಯ ಸಂದಿರುವುದಕ್ಕೆ ಮಾರ್ಗಕಾರನ ಮೇಲ್ಪಂಕ್ತಿಯೂ ಕಾರಣವಾಗಿರಬಹುದೆ?

## ೪. ಕನ್ನಡ ಛಂದಸ್ಸು : ಗೀತಿಕೆ

ನಾಗವರ್ಮನ ಪ್ರಕಾರ ಗೀತಿಕೆಯ ಲಕ್ಷಣ :

೨
ಎರಡಱೊ । ಳಾಜೆಂ । ಬ ಸಂಖ್ಯೆಯೊಳ್ । (ಬಾ?)
೬
ಬರೆ ಪದ್ಮ । ಭವನುಟಿ । ದುವು ಮೆ । ಚ್ಚುವ ತೆರದಿಂ ।
೨
ದಿರೆ ಮುಂ । ದಣ ಪ । ದಂ ಮುನ್ನಿನಂ ।
೬
ತಿರೆ ಕರಂ । ಗೀತಿಕೆ । ಯಿಂತ । ಕ್ಕುಂ ಸಖೀ ।

(i) ಈ ಪದ್ಯದ ಬಗೆಗೆ ಕನ್ನಡ ಕೈಪಿಡಿಯ ಟಿಪ್ಪಣಿ : "ಎರಡನೆಯ ಪಾದದಲ್ಲಿ 'ಬರೆ ಬ್ರಹ್ಮನುಳಿದೆಡೆಗಳೊಳು ವಿಷ್ಣುಮುಂ' ಎಂದೂ ಮೂರನೆಯ ಪಾದದಲ್ಲಿ 'ಒಪ್ಪುವ ಗೀತಗಣಂ' 'ಗೀತಿಕೆಗೇಳುಗಣಮಕ್ಕುಂ' ಎಂದೂ ಪಾಠಾಂತರಗಳಿವೆ. ಇದ್ದ ಹಾಗೆ ನೋಡಿದರೆ :–

೨ ೬

ವಿ । ಬ್ರ । ರು ॥ ವಿ । ವಿ । ಬ್ರ । ರು ॥

೨ ೬

ಬ್ರ । ಬ್ರ । ರು ॥ ವಿ । ವಿ । ಬ್ರ । ವಿ. (ರು?) :

ಏಳೇಳುಗಣದ ಎರಡು ಪಾದ ಮಾತ್ರ, ನಾಲ್ಕನೆಯ ಗಣದಲ್ಲಿ ಒಳಪ್ರಾಸ, ಕಡೆಯಲ್ಲಿ ರುದ್ರ, ಮಿಕ್ಕ ಕಡೆ ವಿಷ್ಣು, (ರುದ್ರಪರ್ಯಾಯಗಣ), ೨, ೬ರಲ್ಲಿ ಬ್ರಹ್ಮ ಎಂದು ಹೇಳಬಹುದೆ? ಗೀತಿಕೆ ಎಂಬುದರಿಂದ ಸಾಂಗತ್ಯ ಸಂಬಂಧಿಯಾಗಿರಬಹುದೆ ?"

(ii) ಗೀತಿಕೆಯನ್ನು ಕುರಿತು ಡಾ॥ ಡಿ.ಎಸ್. ಕರ್ಕಿಯವರು ತಮ್ಮ 'ಛಂದೋವಿಕಾಸ'ದಲ್ಲಿ (ಪು. ೧೫೧–೧೫೨), "ಗೀತಿಕೆಯ ಲಕ್ಷಣವು ನಿರ್ದಿಷ್ಟವಾಗಿ ನಿರೂಪಿಸಲ್ಪಟ್ಟಿಲ್ಲ. ಅದರ ಗಣಯೋಜನೆಯು ಖಚಿತವಾಗಿದ್ದಂತೆ ತೋರುವುದಿಲ್ಲ" ಎಂದು ಹೇಳಿ, ನಾಗವರ್ಮನ ಲಕ್ಷಣ ನಿರೂಪಣೆಯೂ, ಅನಿರ್ದಿಷ್ಟವೆಂದು ಸೂಚಿಸಿ, ಜಯಕೀರ್ತಿ ತನ್ನ 'ಛಂದೋನುಶಾಸನ'ದಲ್ಲಿ ಹೇಳುವ ಗೀತಿಕೆಯ ಲಕ್ಷಣವನ್ನು ಹೀಗೆ ತಿಳಿಯಪಡಿಸಿದ್ದಾರೆ: "ಜಯಕೀರ್ತಿಯು ಹೇಳುವ ಗೀತಿಕೆಯ ಲಕ್ಷಣದಲ್ಲಿ ಒಂದಿಷ್ಟು ವಿವರಗಳು ಕಾಣುವವೇನೋ ನಿಜ. ಆದರೆ ಅಲ್ಲಿಯೂ ಲಯದ ಸುಳುಹು ಸಂಪೂರ್ಣವಾಗಿ ಸಿಕ್ಕುವುದಿಲ್ಲ. ಗೀತಿಕೆಯ ಪ್ರತಿ ಅರ್ಧದ ೨ ನೆಯ ಮತ್ತು ೬ನೆಯ ಗಣಗಳು ಬ್ರಹ್ಮಗಣಗಳಾಗಿರಬೇಕೆಂದೂ ಉಳಿದ ಗಣಗಳು ಲಯಕ್ಕೆ ಹೊಂದಿಕೆಯಾಗುವಂತೆ ವಿಷ್ಣು ಅಥವಾ ರುದ್ರಗಣಗಳಾಗಿರಬೇಕೆಂದೂ ಅವನು ಅಭಿಪ್ರಾಯಪಡುತ್ತಾನೆ."

ಇನ್ನು ಕವಿರಾಜಮಾರ್ಗದ (೨೪) ಗೀತಿಕೆಗಳಲ್ಲಿ ಕೆಲವನ್ನು ಪರಿಶೀಲಿಸಿ ನೋಡಲಾಗಿ, ಪ್ರತಿ ಎರಡು ಪಾದಗಳ ಒಂದೊಂದು ಘಟಕದಲ್ಲಿಯೂ ಏಳೇಳು ಗಣದ ನಿಯಮವೇನೋ ಸ್ಥೂಲವಾಗಿ ಗೋಚರಕ್ಕೆ ಬರುತ್ತದೆ. (ಗಣಸಂಖ್ಯೆ ಹೆಚ್ಚಿರುವುದೂ ಉಂಟು. ಉದಾ. III–೨೨೩). ಸರ್ವಸಾಮಾನ್ಯವಾಗಿ ವಿಷ್ಣುಗಣಗಳೂ ಪರ್ಯಾಯವಾಗಿ ಅನಿಯತ ಸ್ಥಳಗಳಲ್ಲಿ ಬ್ರಹ್ಮ ಅಥವಾ ರುದ್ರಗಣವೂ ಪ್ರಯೋಗವಾಗಿರುವುದು ಕಂಡುಬರುತ್ತದೆ. ಉದಾಹರಣೆಯಾಗಿ ಗ್ರಂಥದಲ್ಲಿ ಮೊತ್ತ ಮೊದಲು ಕಣ್ಣಿಗೆ ಬೀಳುವ ಗೀತಿಕೆಯ ಲಕ್ಷಣವನ್ನು ಪರಿಶೀಲಿಸಬಹುದು:

– U – – – – – – U –

ಕಾಣನೇ । ಗೆಯ್ದುಂ ತ । ನ್ನ(ನ್ನಾ ?) ದೋಷಮಂ ।

– U – – – – – – U – U U –

ಕಾಣದಂ । ತೆಂದುಂ ಕ ।ಣ್ಗಳ್ತಮ್ಮ । ಕಾಡಿಗೆಯಂ ॥

– U U – U U – U U –

ಪೂಣಿಗ । ನಾದುದ । ಜ಼ ಪೆ ಜ಼ ರಿಂ ।

–UU – UU – U U – U –

ಜಾಣರಿ । ನೋದಿಸಿ । ಪೇೞ್ವುದು । ಕಬ್ಬಮಂ ।

(ವಿ । ವಿ । ರು ॥ ವಿ । ವಿ । ರು ॥ ವಿ । ವಿ । ರು ॥ ವಿ । ವಿ । ವಿ । ವಿ ॥)

'ಗೀತಿಕೆ' ಹಾಡುವ ಮಟ್ಟು ಎಂಬುದನ್ನು ನೆನೆದರೆ, ಕವಿರಾಜಮಾರ್ಗದ ಕಾಲದಲ್ಲಿ, ಬೇಕಾದಲ್ಲಿ ಎಳೆದು ಬೇಕಾದಲ್ಲಿ ನಿಲ್ಲಿಸಿ ಹಾಡಲನುಕೂಲವಾಗುವಂತೆ ಗಣಯೋಜನೆಯಲ್ಲಿಯೂ ಲಯವಿನ್ಯಾಸದಲ್ಲಿಯೂ ಸ್ವತಂತ್ರಗತಿಯೇ ಇದ್ದಿರಬೇಕೆಂದು ಕಾಣುತ್ತದೆ. ಮೇಲ್ಕಂಡ ಪದ್ಯದ ಮೊದಲ ಪಾದಕ್ಕೆ ಹೀಗೂ ಪ್ರಸ್ತಾರ ಮಾಡಬಹುದು.

– U – – – – U – U –

ಕಾಣ । ನೇಗೆಯ್ದುಂ । ತನ್ನ । ದೋಷಮಂ ॥

ಬ್ರ । ವಿ । ಬ್ರ । ವಿ ॥

ಈ ಲಯವಿನ್ಯಾಸದಲ್ಲಿ ಗೀತಗುಣ ಮೊದಲಿಗಿಂತ ಹೆಚ್ಚು ಬಂಧುರವಾಗಿದೆ ಯೆಂದು ನಮ್ಮೆಣಿಕೆ.

ಇನ್ನೊಂದು ಗೀತಿಕೆಯ (II–೧೪೩) ಪೂರ್ವಾರ್ಧ.

UUU– – U U U–

ಅನುಗತಂ । ಪೂರ್ವ । ಕವಿಗಳ್ ।

U U– – – – – – U – U –

ನೆನದಿನ್ನುಂ । ಪೇೞ್ದಿಂ । ದುಷ್ಕ । ರೋಕ್ತಿಯ ॥ ನ್ನನುಗತ –

ವಿ । ಬ್ರ । ವಿ ॥ ವಿ । ಬ್ರ । ಬ್ರ । ವಿ ॥

ಕವಿರಾಜಮಾರ್ಗದಲ್ಲಿ ಗೀತಿಕೆಗಳ ಪ್ರಯೋಗದಲ್ಲಿ ಕಂಡುಬರುವ ಗಮನಾರ್ಹ ಸಂಗತಿ ಎಂದರೆ, ಹೇಳಿಕೆಗಳ ಲಕ್ಷ್ಯಗಳನ್ನು (II, ೧೧೪–೧೫೨) ಹೊರತುಪಡಿಸಿದರೆ, ವಿಶೇಷವಾಗಿ ಒಂದು ನಿರ್ದಿಷ್ಟ ಪ್ರಕರಣಾಂತ್ಯದಲ್ಲಿ ಉಪಸಂಹಾರ ವಾಕ್ಯವಾಗಿಯೂ, ಕ್ವಚಿತ್ತಾಗಿ ಪ್ರಕರಣಾದಿಯ ಪ್ರತಿಜ್ಞಾ ವಾಕ್ಯವಾಗಿಯೂ ಗೀತಿಕೆಯನ್ನು ಬಳಸಿರುವುದು ಕಂಡುಬರುತ್ತದೆ.

ಗೀತಿಕೆಯ ಛಂದಸ್ಸು ನಿಷ್ಕೃಷ್ಟವಾಗಿ ತಿಳಿಯದ ಕಾರಣ, ಗೀತಿಕೆಗಳಲ್ಲಿನ ಪಾಠದೋಷಗಳನ್ನು ಛಂದಸ್ಸಿನ ಆಧಾರದ ಮೇಲೆ ಗುರುತಿಸಿ, ಪಾಠ ಪರಿಷ್ಕರಣ ಮಾಡುವುದು ಕಷ್ಟಸಾಧ್ಯವೆಂದೇ ಹೇಳಬೇಕು.

(I–೧೩೦, ೧೩೫, ೧೩೬, ೧೪೦ ; II –೧೪೨ ; III – ೨೨೦, ೨೨೧, ೨೨೪, ೨೨೬, ೨೨೭, ೨೨೮, ೨೨೯, ೨೩೧ – ಈ ವೃತ್ತಗಳ ಹೆಸರುಗಳೂ ಲಕ್ಷಣವೂ ಯಾವ ಛಂದೋಗ್ರಂಥದಲ್ಲಿಯೂ ದೊರಕಲಿಲ್ಲವೆಂದು ಮದರಾಸು ಮುದ್ರಣದ ಸಂಪಾದಕರು ಸಂಬಂಧಪಟ್ಟ ಪದ್ಯಗಳ ಅಡಿಟಿಪ್ಪಣಿಗಳಲ್ಲಿ ತಿಳಿಸಿರುತ್ತಾರೆ. ಒಂದೆರಡು ವೃತ್ತಗಳ ನಾಮನಿರ್ದೇಶ

ಸರಿಯಾಗಿರಲಿಲ್ಲ. ಈ ವೃತ್ತಗಳಿಗೆಲ್ಲಾ ಗಣಪ್ರಸಾರ ಹಾಕಿ ಕೂಲಂಕಷವಾಗಿ ಪರಿಶೀಲಿಸಲಾಗಿ, ಇವೆಲ್ಲವುಗಳ ಹೆಸರುಗಳೂ ಲಕ್ಷಣವೂ ಕನ್ನಡ ಕೈಪಿಡಿಯಲ್ಲಿಯೆ ದೊರೆತವು. ಈ ಸಂದರ್ಭದಲ್ಲಿಯೆ, I–೧೪೭೭ರ ಮತ್ತು I–೧೪೮ರ ೨ನೆಯ, ೪ನೆಯ ಪಾದಗಳಲ್ಲಿ ಅರ್ಥಪ್ರತೀತಿಯ ದೃಷ್ಟಿಯಿಂದ ಈ ಮೊದಲು ಮಾಡಿದ್ದ ತಿದ್ದುಪಾಟು ಛಂದಸ್ಸಿನ ದೃಷ್ಟಿಯಿಂದ ದೋಷಪೂರ್ಣವಾಗಿ ಕಂಡುಬಂದಿತು. ಈ ಸಂಬಂಧದ ಮರುತಿದ್ದಪಾಟುಗಳನ್ನು ಶುದ್ಧಾಶುದ್ಧ ಪತ್ರಿಕೆಯಲ್ಲಿ ಕಾಣಿಸಿದೆ. ಈ ಪ್ರಮಾದಕ್ಕಾಗಿ ವಿಷಾದಿಸಬೇಕಾಗಿದೆ. ಈ ಎರಡು ಪದ್ಯಗಳ ಪುನಃಪರಿಷ್ಕರಣದ ಕಡೆಗೆ ನನ್ನ ಗಮನವನ್ನು ಸೆಳೆದದ್ದು, 'ಕನ್ನಡನುಡಿ' ಯಲ್ಲಿ ಪ್ರಕಟವಾಗಿದ್ದು, ಈಚೆಗೆ ನನ್ನ ನೆನಪಿಗೆ ಬಂದ 'ಕವಿರಾಜಮಾರ್ಗದ ಎರಡು ವೃತ್ತಗಳು' ಎಂಬ ಲೇಖನ, ಶ್ರೀ ಕ.ಪು. ಸೀತಾರಾಮ ಕೆದಿಲಾಯ ಅವರದ್ದು – ಸಂ.)

* * * *

# ಸಂಕ್ಷಿಪ್ತಗಳು

| | |
|---|---|
| ಉದಾ. | ಉದಾಹರಣೆ |
| ಉ.ವಿ.ವಿ.ನಿ. | ಉಸ್ಮಾನಿಯಾ ವಿಶ್ವವಿದ್ಯಾನಿಲಯ |
| ಕ.ಕಾ. | ಕನ್ನಡ ಕಾವ್ಯಾಲಂಕಾರ |
| ಕ.ಕೈ | ಕನ್ನಡ ಕೈಪಿಡಿ |
| ಕ.ಚ. | ಕವಿ ಚರಿತೆ |
| ಕ.ಸಾ.ಚ. | ಕನ್ನಡ ಸಾಹಿತ್ಯ ಚರಿತ್ರೆ |
| ಕ..ಸಾ.ಪ.; ಪರಿಷತ್ಪತ್ರಿಕೆ | ಕನ್ನಡ (ಕರ್ಣಾಟಕ) ಸಾಹಿತ್ಯ ಪರಿಷತ್ಪತ್ರಿಕೆ |
| ಕ.(ರಾ.) (ಮಾರ್ಗ) ವಿವೇಕ | ಕವಿರಾಜಮಾರ್ಗ ವಿವೇಕ |
| ಕಾವ್ಯಾ. | ಕಾವ್ಯಾವಲೋಕನ |
| ಕಾವ್ಯಾಲಂ. | ಕಾವ್ಯಾಲಂಕಾರ |
| ಕ್ರಿ.ಶ. | ಕ್ರಿಸ್ತಶಕ |
| ಗದಾಯು.ಸಂ. | ಗದಾಯುದ್ಧ ಸಂಗ್ರಹ |
| ತ್ಭ. | ತದ್ಭವ |
| ಧಾ. | ಧಾತು |
| ಪ. | ಪದ್ಯ |
| ಪು. | ಪುಟ |
| ಪ್ರ.ಮು. | ಪ್ರಥಮ ಮುದ್ರಣ |
| ಭಾ.ಕಾ.ಮೀ. | ಭಾರತೀಯ ಕಾವ್ಯ ಮೀಮಾಂಸೆ |
| ಮ.ಮು. | ಮದರಾಸು ಮುದ್ರಣ |
| ಮಾರ್ಗಕಾರ | ಕವಿರಾಜಮಾರ್ಗಕಾರ (=ಶ್ರೀವಿಜಯ) |
| ಶ. | ಶಾಲಿವಾಹನ ಶಕಾ |
| ಶ.ಮ.ದ. | ಶಬ್ಧಮಣಿದರ್ಪಣ |

| | |
|---|---|
| ಶ.ಶಾಸನ | ಶಬ್ದಾನುಶಾಸನ |
| ಸಂ. | (ಸಂದರ್ಭಾನುಸಾರ) ಸಂಪಾದಕ; ಸಂಪುಟ; ಸಂಸ್ಕೃತ |
| ಸು. | ಸುಮಾರು |
| ಸೂ. | ಸೂತ್ರ |
| Gr.K.L. | Grammar of Kannada Language |
| I.A.; Ind.Ant. | Indian Antiquary |
| P.,PP. | Page, Pages |
| Q.J.M.S. | Quarterly Journal of the Mythic Society |
| S.K.H. | Sources of Karnataka History |

(ವಿ.ಸೂ. – ಶಬ್ದಮಣಿದರ್ಪಣದ ಸೂತ್ರಸಂಖ್ಯೆಗಳು ಕನ್ನಡ ಸಾಹಿತ್ಯ ಪರಿಷತ್ತಿನ ಮುದ್ರಣದ ಸೂತ್ರ ಸಂಖ್ಯಾಕ್ರಮವನ್ನು ಅನುಸರಿಸಿವೆ)

# ಕವಿರಾಜಮಾರ್ಗಂ

## ಪ್ರಥಮ ಪರಿಚ್ಛೇದಂ

ಶ್ರೀ ತಳ್ತುರದೊಳ್‌ಕೌಸ್ತುಭ
ಜಾತದ್ಯುತಿ ಬಳಸಿ ಕಾಂಡಪಟದಂತಿರೆ ಸಂ
ಪ್ರೀತಿಯಿನಾವನನಗಲಳ್
ನೀತಿನಿರಂತರನುದಾರನಾ ನೃಪತುಂಗಂ ೧

ಕೃತಕೃತ್ಯಮಲ್ಲನಪ್ರತಿ
ಹತವಿಕ್ರಮನೊಸೆದು ವೀರನಾರಾಯಣನ
ಪ್ಪತಿಶಯಧವಳಂ ನಮಗೀ
ಗತರ್ಕಿತೋಪಸ್ಥಿತ ಪ್ರತಾಪೋದಯಮಂ ೨

ಶ್ರೀ ವಿಶದವರ್ಣೆ ಮಧುರಾ
ರಾವೋಚಿತೆ ಚತುರರುಚಿರ ಪದರಚನೆ ಚಿರಂ
ದೇವಿ ಸರಸ್ವತಿ ಹಂಸೀ
ಭಾವದೆ ನೆಲೆಗೊಳ್ಗೆ ಕೂರ್ತು ಮನ್ಮಾನಸದೊಳ್ ೩

ಪರಮಾಲಂಕಾರೋಚಿತ
ವಿರಚನೆಗಳ್ ನೆಗಟ್ಟಿಮಾರ ವದನೋದರದೊಳ್
ನೆರಮಕ್ಕಾ ಪರಮ ಕವೀ
ಶ್ವರರೆಮಗೀ ಕೃತಿಯೊಳಕೃತಕಾಚಾರಪರರ್ ೪

ಶ್ರುತದೊಳ್ ಭಾವಿಸಿ ನೋಳ್ಪೊಡೆ
ಸತತಂ ಕವಿವೃಷಭರಾ ಪ್ರಯೋಗಂಗಳೊಳಂ
ಕೃತಪರಿಚಯಬಲನಪ್ಪನ
ನತಿಶಯಧವಳನ ಸಭಾಸದರ್ ಮನ್ನಿಸುವರ್ ೫

ವ್ಯಾಕರಣ ಕಾವ್ಯನಾಟಕ
ಲೋಕಕಳಾ ಸಮಯಮಾದಳಂಕೃತಿಗಳೊಳಂ
ವ್ಯಾಕುಳನಲ್ಲದನೇಕೆ ವಿ
ವೇಕಬೃಹಸ್ಪತಿಯ ನಗರಮಂ ಪುಗುತರ್ಪಂ ೬

ಮೃಗಪಶುಶಕುನಿ ಗಣಂಗಳೊ
ಳಗಣಿತ ನಿಜಜಾತಿಜನಿತ ಭಾಷೆಗಳೆಂದುಂ
ನೆಗಟ್ದಿಂತಿರೆ ನರರೊಳಮ
ಪ್ರಗಲ್ಭವಚನಪ್ರವೃತ್ತಿ ನೆಗಟ್ಗುಂ ಸಹಜಂ ೭

ಗುಣಮಿದು ದೋಷಮಿದೆಂಬೀ
ಗಣಿದಮನೆತ್ತಟಿಗುಮಶ್ರುತ ಪ್ರಕೃತಿಜನಂ
ತೃಣಸಸ್ಯಘಾಸವಿಷಯ
ಪ್ರಣಯಂ ಸಮವೃತ್ತಿಯಪ್ಪವೋಲ್ ಮೃಗಗಳೊಳ್ ೮

ಅದಱಿಂ ಪರಮಾಗಮ ಕೋ
ವಿದನಪ್ಪುದು ಪೂರ್ವಕಾವ್ಯರಚನೆಗಳಂ ತಾಂ
ಮೊದಲೊಳ್ ಕಲ್ತಂಗಲ್ಲದೆ
ಪದದೊಳ್ ಜಾಣುಂ ಬೆಡಂಗುಮಕ್ಕುಮೆ ಕೃತಿಯೊಳ್ ೯

ಜನಜನಮುಮೆಲ್ಲಮೋದಂ
ತಡೆಯದೆ ಕಲ್ಗುಂ ಗುರೂಪದೇಶಕ್ರಮದಿಂ
ನುಡವಲ್ಮೆಯಲ್ತದೇಂ ಕ
ಲ್ತೊಡನೋದುವುವಲ್ತೆ ಗಿಳಿಗಳು ಪುರುಳಿಗಳುಂ ೧೦

ಪ್ರತಿಭಾವತ್ವಮುಮಕೃತಕ
ಚತುರತೆಯುಂ ಪರಮಬುಧಜನೋಪಾಸನಮುಂ
ಶ್ರುತಪರಿಚಯಮುಂ ತರ್ಕುಂ
ಪ್ರತೀತಿಯಂ ವಾಗ್ವಿದಗ್ಧತಾ ನಿಪುಣತೆಯೊಳ್ ೧೧

ಪಸರಿಸಿದಾ ಬಗೆ ಮನಮಂ
ಪೊಸತಾಗೆ ನೆಗೞ್ಚಲರಿಯನಾ ರಚನೆಯೊಳೇಂ
ಬಸನಂ ತನಗಿತಱ ಬೇ
ವಸಮೇಂ ಕವರ್ದವರುಮೊಳರೆ ಕವಿಯಲ್ಲದರಂ ೧೨

ಬಗೆಬಗೆದು ಕೇಳ್ದು ಬುಧರೊಲ
ವೊಗೆದಿರೆ ಹೃದಯದೊಳೆ ತಾಳ್ದ ಮಣಿಹಾರಂಬೋಲ್
ಸೊಗಯಿಸುವ ವಚನವಿರಚನೆ
ನೆಗೞ್ಗಂ ಭಾವಿಸುವೊಡದಱ ಪೆಂಪತಿಸುಲಭಂ ೧೩

ನೆನೆನೆನೆದು ಪೆಱರ ಮಾತುಗ
ಳನೆ ನೆಗೞ್ದಿರೆ ಕೃತಿಯೊಳಿಡುವವಂ ನಗದ ಗುಹಾ
ಧ್ವನಿಯವೊಲನರ್ಥವಚನಂ
ತನಗಾಗಿಸಲಱಿಯನುಚಿತ ವಾಕ್ಚತುರತೆಯಂ ೧೪

ಕುಱಿತಂತು ಪೆಱರ ಬಗೆಯಂ
ತೆಱಿದಿರೆ ಪೆಱರ್ಗಱಿಪಲಾರ್ಪಮಂ ಮಾತಱಿವಂ
ಕಿಱಿದಱೊಳೆ ಪಿರಿದುಮರ್ಥಮ
ನಱಿಪಲ್‌ನೆಱಿವಾತನಾತನಿಂದಂ ನಿಪುಣಂ ೧೫

ನುಡಿಯಂ ಛಂದದೊಳೊಂದಿರೆ
ತೊಡರ್ಚಲಱಿವಾತನಾತನಿಂದಂ ಜಾಣಂ
ತಡೆಯದೆ ಮಹಾಧ್ವಕೃತಿಗಳ
ನೊಡರಿಸಲಾರ್ಪಾತನೆಲ್ಲರಿಂದಂ ಬಲ್ಲಂ ೧೬

ಮಾತಱಿವರ್ ಕೆಲಬರ್‌ಜಗ
ತೀತಳಗತ ಮನುಜರೊಳಗೆ ಮಾತಱಿವವರೊಳ್
ನೀತಿವಿದರಮಳ ಕವಿತಾ
ನೀತಿಯುತರ್ ಕೆಲರೆ ಪರಮ ಕವಿವೃಷಭರ್ಕಳ್ ೧೭

ಪಾಪಮಿದು ಪುಣ್ಯಮಿದು ಹಿತ
ರೂಪಮಿದಹಿತಪ್ರಕಾರಮಿದು ಸುಖಮಿದು ದುಃ
ಖೋಪಾತ್ತಮಿದೆಂದಱಿಪುಗು
ಮಾ ಪರಮ ಕವಿಪ್ರಧಾನರಾ ಕಾವ್ಯಂಗಳ್ ೧೮

ಲೌಕಿಕ ಸಾಮಯಿಕೋರು ವಿ
ವೇಕಮುಮಭ್ಯುದಯ ಪರಮ ನಿಃಶ್ರೇಯಸಮುಂ
ಪ್ರಾಕಟಮಕ್ಕುಂ ವಿದಿತಾ
ನೇಕ ಕವೀಶ ಪ್ರಯೋಗ ಪದಪದ್ಧತಿಯೊಳ್ ೧೯

ಅಧಿಕೃತ ಸತ್ಪುರುಷಾರ್ಥ
ಪ್ರಧಾನ ಧರ್ಮಾರ್ಥಕಾಮಮೋಕ್ಷಂಗಳವಾ
ಬುಧಜನ ವಿವಿಕ್ತ ಕಾವ್ಯ
ಪ್ರಧಾರಿತಾರ್ಥಂಗಳಖಿಳ ಭುವನಹಿತಂಗಳ್ ೨೦

ಲೋಕದೊಳದಱಿಂ ಕಾವ್ಯ
ಶ್ರೀಕರಣೋದ್ಯುಕ್ತನಕ್ಕೆ ಕವಿ ತನ್ನಱಿವಂ
ತಾಕಲ್ಪಾಂತಸ್ಥಾಯಿ
ಶ್ರೀಕೀರ್ತಿವಧೂಪ್ರಧಾನವಲ್ಲಭನಕ್ಕುಂ ೨೧

ಕವಿಭಾವಕೃತಾನೇಕ
ಪ್ರವಿಭಾಗ ವಿವಿಕ್ತ ಸೂಕ್ತಮಾರ್ಗಂ ಕಾವ್ಯಂ
ಸವಿಶೇಷ ಶಬ್ದರಚನಂ
ವಿವಿಧಾರ್ಥವ್ಯಕ್ತಿ ವರ್ತಿತಾಲಂಕಾರಂ ೨೨

ನರಲೋಕಚಂದ್ರ ಮತದಿಂ
ಪರಮಾಲಂಕಾರಮುಂ ಶರೀರಮುಮೆಂದಿಂ
ತೆರಡಕ್ಕುಂ ಭೇದಂ ಬಹು
ಪರಿಕರಮಾ ಕಾವ್ಯವಸ್ತು ಪುರುಷಂಗೆಂದುಂ ೨೩

ಅವಱೊಳ್ಶರೀರಮೆಂಬುದು
ಕವಿಪ್ರಧಾನ ಪ್ರಯೋಗ ಪದಪದ್ಧತಿಯೊಳ್
ದ್ವಿವಿಧಮೆನಿಕ್ಕುಮದತಿಶಯ
ಧವಳೋಕ್ತಕ್ರಮದೆ ಗದ್ಯಪದ್ಯಾಖ್ಯಾತಂ ೨೪

ಪದಪಾದ ವಿಯುತ ನಿಯಮಾ
ಸ್ಪದಮಲ್ಲದಳಂಕೃತಂ ಕ್ರಿಯಾಕಾರಕದೊಳ್
ಪುದಿದರ್ಥವ್ಯಕ್ತಿಯನೀ
ವುದುಗದ್ಯಮನೇಕ ರೂಪಭೇದ ವಿವಿಕ್ತಂ ೨೫

ಸದಮಳ ಸಮಸಂಸ್ಕೃತ ಕಾ
ವ್ಯದ ಹೃದಯಂ ಹರ್ಷಚರಿತ ಕಾದಂಬರಿಗಳ್
ಮೊದಲಾಗಿ ನೆಗಟ್ದುವಿದಱೊಳ್
ಸದಳಂಕಾರಂಗಳಖಿಳ ಕವಿವಿಧಿತಂಗಳ್ ೨೬

ಮಿಗೆ ಕನ್ನಡಗಬ್ಬಂಗಳೊ
ಳಗಣಿತಗುಣ ಗದ್ಯಪದ್ಯ ಸಮ್ಮಿಶ್ರಿತಮಂ
ನಿಗದಿಸುವರ್ಗದ್ಯಕಥಾ
ಪ್ರಗೀತಿಯಿಂ ತಚ್ಚಿರಂತನಾಚಾರ್ಯರ್ಕಳ್ ೨೭

ಸಕಳಕಳಾ ಭಾಷಾ ಲೌ
ಕಿಕ ಸಾಮಯಿಕಾದಿ ವರ್ಣನಾನಿರ್ಣಿಕ್ತ
ಪ್ರಕಟತರ ವಸ್ತುವಿಸ್ತರ
ವಿಕಲ್ಪವಿದನಲ್ಲದಾಗದಾಗದು ಪೇಟಿಲ್ ೨೮

ವಿಮಳೋದಯ ನಾಗಾರ್ಜುನ
ಸಮೇತ ಜಯಬಂಧು ದುರ್ವಿನೀತಾದಿಗಳೀ
ಕ್ರಮದೊಳ್ನೆಗಟ್ಟೆ ಗದ್ಯಾ
ಶ್ರಮಪದ ಗುರುತಾಪ್ರತೀತಿಯಂ ಕೆಯ್ಕೊಂಡರ್ ೨೯

ಪದ್ಯಂ ಸಮಸ್ತ ಜನತಾ
ಹೃದ್ಯಂ ಪದವಿದಿತಪಾದನಿಯಮ ನಿವೇದ್ಯಂ
ವಿದ್ಯಾಪಾರ ಪರಾಯಣ
ಮಾದ್ಯಂ ಸದ್ವೃತ್ತಿವೃತ್ತಜಾತ್ಯಾಯತ್ತಂ ೩೦

ಪ್ರಣುತ ಗುಣಸೂರಿ ನಾರಾ
ಯಣ ಭಾರವಿ ಕಾಳಿದಾಸ ಮಾಘಾದಿಗಳೀ
ಗಣಿದದೊಳೆ ಮಹಾಕಾವ್ಯ
ಪ್ರಣಯಮನಾಗಿಸಿದರಮಳ ಕವಿವೃಷಭರ್ಕಳ್ ೩೧

ಪರಮ ಶ್ರೀ ವಿಜಯಕವೀ
ಶ್ವರ ಪಂಡಿತ ಚಂದ್ರ ಲೋಕಪಾಲಾದಿಗಳಾ
ನಿರತಿಶಯ ವಸ್ತುವಿಸ್ತರ
ವಿರಚನೆ ಲಕ್ಷ್ಯಂ ತದಾದ್ಯಕಾವ್ಯಕ್ಕೆಂದುಂ ೩೨

ನುಡಿಗೆಲ್ಲಂ ಸಲ್ಲದ ಕ
ನ್ನಡದೊಳ್ಚತ್ತಾಣಮುಂ ಬೆದಂಡೆಯುಮೆಂದೀ
ಗಡಿನ ನೆಗಟ್ತೆಯ ಕಬ್ಬದೊ
ಳೊಡಂಬಡಂ ಮಾಡಿದರ್ ಪುರತಾನ ಕವಿಗಳ್ ೩೩

ಕಂದಮುಮಮಳಿನ ವೃತ್ತಮು
ಮೊಂದೊಂದೆಡೆಗೊಂ(ಡು) ಜಾತಿಜಾಣೆಸೆಯ ಬೆಡಂ
ಗೊಂದಿವಟಿೊಳಮರೆ ಪೇಟಿಲ್
ಸುಂದರ ರೂಪಾ ಬೆದಂಡೆಗಬ್ಬಮದಕ್ಕುಂ ೩೪

ಕಂದಂಗಳ್ ಫಲವಾಗಿರೆ
ಸುಂದರ ವೃತ್ತಂಗಳಕ್ಕರಂ ಚವುಪದಿ ಮ
ತ್ತಂ ದಲ್ ಗೀತಿಕೆ ತಿವದಿಗ
ಳಂದಂಬೆತ್ತೆಸೆಯೆ ಪೇಟ್ದೊಡದು ಚತ್ತಾಣಂ ೩೫

ಕಾವೇರಿಯಿಂದಮಾ ಗೋ
ದಾವರಿವರಮಿರ್ಪ ನಾಡದಾ ಕನ್ನಡದೊಳ್
ಭಾವಿಸಿದ ಜನಪದಂ ವಸು
ಧಾವಳಯವಿಲೀನವಿಶದ ವಿಷಯ ವಿಶೇಷಂ ೩೬

ಅದಱೊಳಗಂ ಕಿಸುವೊಳಲಾ
ವಿದಿತ ಮಹಾ ಕೊಪಣ ನಗರದಾ ಪುಲಿಗೆಱೆಯಾ
ಸದಭಿಸ್ತುತಮಪ್ಪೊಂಕುಂ
ದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್ ೩೭

ಪದನಱಿದು ನುಡಿಯಲುಂ ನುಡಿ
ದುದನಱಿದಾರಯಲುಮಾರ್ಪರಾ ನಾಡವರ್ಗಳ್
ಚದುರರ್ ನಿಜದಿಂ ಕುಱಿತೋ
ದದೆಯುಂ ಕಾವ್ಯಪ್ರಯೋಗ ಪರಿಣತಮತಿಗಳ್ ೩೮

ಕುಱಿತವರಲ್ಲದೆ ಮತ್ತಂ
ಪೆಱರುಂ ತಂತಮ್ಮ ನುಡಿಯೊಳೆಲ್ಲರ್ ಜಾಣರ್
ಕಿಱುವಕ್ಕಳುಮಾ ಮೂಗರು
ಮಱಿಪಲ್ಕಱಿವರ್ ವಿವೇಕಮಂ ಮಾತುಗಳಂ ೩೯

ಜಾಣರ್ಕಳಲ್ಲದವರುಂ
ಪೂಣಿಗರಱಿಯದೆಯುಮಱಿವವೋಲವಗುಣದಾ
ತಾಣಮನಿನಿಸೆಡೆವೆತ್ತೊಡೆ
ಮಾಣದೆ ಪಿಡಿದದನೆ ಕೃತಿಗಳಂ ಕೆಡೆನುಡಿವರ್ ೪೦

ಸಕ್ಕದಮುಂ ಪಾಗದಮುಮ
ದಕ್ಕುಂ ಬಗೆದಂತೆ ಸಮಱಿ ಪೇೞಲ್‌ಮುನ್ನಂ
ನಿಕ್ಕುವಮೊಳವಪ್ಪುದಱಿಂ
ತಕ್ಕಂತವಱವಱ ಲಕ್ಷ್ಯಮುಂ ಲಕ್ಷಣಮುಂ ೪೧

ಅರಿದಾದಂ ಕನ್ನಡದೊ
ಳ್ತಿರಿಕೊಱೆಗೊಂಡಱೆಯೆ ಪೇೞ್ವೆನೆಂಬುದಿದಾರ್ಗಂ
ಪರಮಾಚಾರ್ಯರವೋಲ್ಸೈ
ತಿರಲಱೆಯರ್ ಕನ್ನಡಕ್ಕೆ ನಾಡವರೋಜರ್ ೪೨

ಅವಗುಣಮಿನಿತಾದೊಡಮಾ
ಕವಿತಾಬಂಧಮನಶೇಷಮಂ ದೂಷಿಸುಗುಂ
ಸವಿಳಾಸಲೋಲಲೋಚನ
ವಿವರಮನೆಡೆವೆತ್ತ ಕಸದವೋಲನವರತಂ ೪೩

ಅದಱೆಂದಲಸದೆ ಪೀನಂ
ಪದೆಯದೆ ಪಾಂಗಱೆದು ದೋಷಮಂ ಪಿಂಗಿಸಿ ತ
ಪ್ಪದೆ ಬಗೆದು ಪೇೞ್ವುದಾಗಮ
ಮುದಾರ ನೃಪತುಂಗ ದೇವ ವಿದಿತಕ್ರಮದಿಂ ೪೪

(ಗೀತಿಕೆ)

ಕಾಣನೇಗೆಯ್ದುಂ ತನ್ನ ದೋಷಮಂ
ಕಾಣದಂತೆಂದುಂ ಕಣ್ಗಳ್ ತಮ್ಮ ಕಾಡಿಗೆಯಂ
ಪೂಣಿಗನಾದುದಱೆಂ ಪೆಱರಿಂ
ಜಾಣರಿನೋದಿಸಿ ಪೇೞ್ವುದು ಕಬ್ಬಮಂ ೪೫

ದೋಸಮಿನಿತೆಂದು ಬಗೆದು
ದ್ಭಾಸಿಸಿ ತಱೆಸಂದು ಕನ್ನಡಂಗಳೊಳೆಂದುಂ
ವಾಸುಗಿಯುಮಱೆಯಲಾಱದೆ
ಬೇಸಱುಗುಂ ದೇಶೀ ಬೇಱೆವೇಱಪ್ಪುದಱೆಂ ೪೬

ಅಂತುಂ ಪುರಾಣಕವಿಗಳ
ಸಂತ(ತ)ಗತ ಮಾರ್ಗಗದಿತ ದೋಷಂಗಳುಮಂ
ಚಿಂತಿಸಿ ಮತ್ತೆನ್ನಱೆವುದು
ಮಂ ತಱೆಸ(ಲೆ) ಬುಧಜನಕ್ಕೆ ಕೆಲವಂ ಪೇೞ್ವೆಂ ೪೭

ನೆಲಸಿದ ಕಾವ್ಯಂ ಕಾವ್ಯ
ಕ್ಕೆ ಲಕ್ಷಣಂ ಸತತಮೆಂದೆ ಪೞಗನ್ನಡಮಂ
ಪೊಲಗೆಡಿಸಿ ನುಡಿವರಾಗಮ
ಬಲಹೀನರ್ ದೇಸಿಯಲ್ಲದೆಂದಱಿದಿರ್ದುಂ ೪೮

ಪೊಡವಿಪತಿ ಗೊರವನೆನೆ ಪೇ
ೞ್ವಡೆಯದುವದೆಕರಿಸಿ ಕಬ್ಬಿಗರ್ದೂಱನೆಯುಂ
ಹಡುಮಸುಮಱಿಸೆಟ್ಟಿಸು ಗೆಂ
ಮುಡಿಯೊಳಮಾರ್ಗೆಂದು ನುಡಿವ ಪೞಗನ್ನಡಂ (?) ೪೯

ದೊರೆಕೊಂಡಿರೆ ಸೊಗಯಿಸುಗುಂ
ಪುರಾಣ ಕಾವ್ಯ ಪ್ರಯೋಗದೊಳ್ ತತ್ಕಾಲಂ
ವಿರಸಂ ಕರಮವು ದೇಸಿಗೆ
ಜರದ್ವಧೂವಿಷಯ ಸುರತ ರಸರಸಿಕತೆವೋಲ್ ೫೦

ಸಮಸಂಸ್ಕೃತಂಗಳೊಳ್ ಸ
ಯ್ತುಮರ್ದಿರೆ ಕನ್ನಡಮನಱಿದು ಪೇೞ್ಗೆಂಬುದಿದಾ
ಗಮಕೋವಿದ ನಿಗದಿತ ಮಾ
ರ್ಗಮಿದಂ ಬೆರಸಲ್ಕಮಾಗದೀ ಸಕ್ಕದದೊಳ್ ೫೧

ಅಹರಹರುಚ್ಚೈರ್ನೀಚೈ
ರ್ಮುಹುರ್ಮುಹುರಿತಸ್ತತಃ ಪುನಃಪುನರಂತ
ರ್ಬಹಿರಾದಿಹ ಪ್ರಾದುರಹೋ
ಸಹಸಾದಿಗಳವ್ಯಯಂಗಳಸಹಾಯಂಗಳ್ ೫೨

ಬೆರೆಸಿರೆ ಕನ್ನಡದೊಳ್ ಬಂ
ಧುರಮಾಗದು ಕಾವ್ಯರಚನೆ ಪೇೞ್ದೊಡೆ ಪೀನಂ
ಪರುಷತರಮಕ್ಕುಮೊತ್ತುಂ
ಗರಡೆಯ ಮದ್ದಳೆಯ ಜರ್ಝರ ಧ್ವನಿಗಳವೋಲ್ ೫೩

ಬಹಿರಂತರುಪವನಂಗಳೊ
ಳಹರಹಮಾ ಪರಭೃತಂಗಳುಲಿವ ರವಂಗಳ್
ಸಹಸಾ ತಳಮಳಗೊಳಿಸಿದ
ವಹೋ ಮನಂಗಳನಿತಸ್ತತಂ ವಿರಹಿಗಳಾ ೫೪

ವಿದಿತಸಮಸಂಸ್ಕೃತೋದಿತ
ಪದಂಗಳೊಳ್ ಪುದಿದು ಬೆರಸಿ ಬರೆ ಕನ್ನಡದೊಳ್
ಮುದಮನವು ತರ್ಕುಮತಿಶಯ
ಮೃದಂಗ ಸಂಗೀತಕಾದಿ ಮಧುರರವಂಬೋಲ್ ೫೫

ಬಹಿರುದ್ಯಾನಾಂತರದೊಳ್
ಸಹಸೋದಿತಮತ್ತಕೋಕಿಲೋಚ್ಚೈರ್ಧ್ವಾನಂ
ಮುಹುರಾಕರ್ಣಿಸೆ ಪಡೆದ
ತ್ತಹರ್ನಿಶಂ ಪೆರ್ಚನಂತರಂಗಕ್ಕೆನ್ನಾ ೫೬

ನೆಗಟ್ದಿರ್ದ ಕನ್ನಡಂಗಳೊ
ಳಗಣಿತ ಗುಣ ವಿದಿತ ಸಂಸ್ಕೃತತೋಕ್ತಕ್ರಮಮಂ
ಬಗೆದೊಂದು ಮಾಡಿ ಪೇಟ್ದೊಡೆ
ಸೊಗಯಿಸುಗಂ ಕಾವ್ಯಬಂಧಮೆಂದುಮನಿಂದ್ಯಂ ೫೭

ತಱಿಸಂದಾ ಸಕ್ಕದಮುಮ
ನಱಿಯದೆ ಕನ್ನಡಮುಮಂ ಸಮಾಸೋಕ್ತಿಗಳೊಳ್
ಕುಱಿತು ಬೆರಸಿದೊಡೆ ವಿರಸಂ
ಮಱುಗುವ ಪಾಲ್ಗಳೆಯ ಪನಿಗಳಂ ಬೆರಸಿದವೋಲ್ ೫೮

ಅರಸುಕುಮಾರನನಾಯತ
ತರ ಕಡೆಗಣ್ಣಿಂದ ನೋಡಿ ಕೆಳದಿಸಮೇತಂ
ಪರಿಗತನಗೆಯಿಂದಿರ್ದೆಂ
ಗುರುನಾಣ್ಭರದಿಂದಮೆಱಗಿ ಮುಖತಾವರೆಯಂ ೫೯

ನರಪತಿತನಯನನಾಯತ
ತರಳಾಪಾಂಗದೊಳೆ ನೋಡಿ ಕೆಳದಿಯರೊಡನಾಂ
ಪರಿಗತ ಹಾಸ್ಯದೊಳಿರ್ದೆಂ
ಗುರುಲಜ್ಜಾಭರದಿನೆಱಗಿ ಮುಖಸರಸಿಜಮಂ ೬೦

ಎಂದಿಂತು ಸಮಾಸೋಕ್ತಿಯೊ
ಳೊಂದಾಗಿರೆ ಸಕ್ಕದಂಗಳುಂ ಕನ್ನಡಮುಂ
ಸುಂದರಮಕ್ಕುಂ ಕವಿಪದ
ವೊಂದಿದವೋಲ್ ಕನಕರಚನೆಯೊಳ್ ಮಣಿನಿಕರಂ ೬೧

ಶ್ರುತದುಷ್ಟಮರ್ಥದುಷ್ಟಂ
ಶ್ರುತಿಕಷ್ಟಂ ಕಲ್ಪನೋಕ್ತಿಕಷ್ಟಮುಮೆಂದೀ
ಕೃತಕೃತ್ಯಮಲ್ಲವಲ್ಲಭ
ಮತದಿಂ ನಾಲ್ಕಕ್ಕುಮಿಲ್ಲಿ ಕೃತಿದೋಷಂಗಳ್ ೬೨

ನಿಲ್ತೋಳಂ ಬರ್ಪುದು ಸ
ಯ್ತಲ್ತೂರುಂ (ದೂರಮೆನೆತುಡಗರ್ಪೂರಂ)
ಕಲ್ತುಲ್ಲಿಂದೋಡುವಮೆಂ
ಬಲ್ತುಣ್ಣಿಂ ತಂದ ಕೂಟನೂ ಸಂಗಮದೊಳ್ ೬೩

ನೆರೆದೂರ್ಧ್ವರೇತನೊಳ್ ಪುರು
ಹಿರಣ್ಯರೇತೋತಿತೀವ್ರನೊಳ್ ಮುನಿವರನೊಳ್
ಪರಮಭಗಸಹಿತೆ ಮುದದಿರೆ
ಪರಿಶ್ರಮಕ್ಕೆನ್ನ ನಿರ್ವಿಶೇಷನೊಳಾಗಳ್ ೬೪

ಪರದರ್ಗಾ ಪಾರ್ವರ್ಗಾ
ಯ್ತರಸರ್ಗಾ ಕುಡಿಯರಪ್ಪ ನಾಲ್ವರ್ಗಾಗಳ್
ಸ್ಥಿರ ಗೋಪಾಧ್ಯಾಯ ಕ್ಷಾತ್ರ
ಪರಿಪಾಲ್ಯ ಕ್ಷೇತ್ರಕರ್ಷಣಂಗಳ್ ಕ್ರಿಯೆಗಳ್ ೬೫

ಮಸಗಿ ಬೆಸದಿರ್ದು ವಿವರಮ
ನಸಿಯದಱಿಡೆವೊತ್ತಿ ಪೊಕ್ಕು ಕೆಲನಂ ಕೊರ್ಬು
ತ್ತೆಸೆದು ಬಿದಿರ್ದಾ [ದೇ]ಟ್ಗೇ
ಟ್ಗಿ ಸಮಂಜಸನಿಕ್ಕಿ ಮಿಕ್ಕನರಿವಾಹಿನಿಯಂ ೬೬

ಕುಱಿತಂತೆ ಪೇೞ್ದ ನಾಲ್ಕುಂ
ಕುಱುಪುಗಳಿಂದಱಿದು ಪರರ ದೋಷಂಗಳುಮಂ
ಪೆಱವುಮನೀ ಮಾೞ್ಕೆಯೊಳಂ
ತೊಱೆವುದು ತೊಱೆವಂತಸಾಧುಜನಸಂಗತಿಯಂ ೬೭

ಮಿಗೆ ದುಷ್ಕರ ಕಾವ್ಯಂಗಳೊ
ಳಗರ್ಹಿತಪ್ರಾಯಮಕ್ಕುಮಾಶ್ರುತಿಕಷ್ಟಂ
ಪಗರಣದೊಳುಱಿದ ಮೂಱುಂ
ನಗಿಸುಗುಮಪ್ಪುದಱಿನಲ್ಲಿಗಂತವದೋಷಂ ೬೮

ಯತಿಭಂಗಮರ್ಥಶೂನ್ಯಂ
ಸತತ ವಿರುದ್ಧಾರ್ಥಮುಕ್ತಪುನರುಕ್ತಾರ್ಥಂ
ಚ್ಯುತಯಾತಾಸಂಖ್ಯಂ ವ್ಯವ
ಹಿತಮಚ್ಛಂದಂ ವಿಸಂಧಿಕಂ ನೇಯಾರ್ಥಂ ೬೯

ಆಗಮ ಸಮಯ ನ್ಯಾಯವಿ
ಭಾಗ ಕಳಾ ಕಾಲ ಲೋಕ ದೇಶ ವಿರುದ್ಧಂ
ಭೋಗಿವಿಷಂಬೋಲ್ ಪ್ರಾಣ
ತ್ಯಾಗಮನಾಗಿಸುಗುಮಮಳಕೃತಿವಧುಗಿನಿತುಂ ೭೦

ಯತಿಯೆಂಬುದುಸಿರ್ವ ತಾಣಂ
ಕೃತಾಸ್ಪದಂ ವೃತ್ತಜಾತಿ ಪದ ಪದ್ಧತಿಯೊಳ್
ಸತತಂ ಛಂದೋವಿದಿತ
ಪ್ರತೀತಶಾಸ್ತ್ರೋಕ್ತಮಾರ್ಗದಿಂದಱಿವುದದಂ ೭೧

ಕೇಡಡಸಿದಂದು ಬಗೆ(ಯು)ಂ
ಕೂಡದು ಕೂಡಿದುದುಮಱಿದು ವಿಪರೀತಮುಮಂ
ಮಾಡುಗುಮದಱಿಂ ಕರ್ಮ
ಕ್ಕೋಡಿ ಬರ್ದುಂಕಲ್ಕಮಱಿವರಾರ್ ಭೂತಳದೊಳ್ ೭೨

ತಡವಡಿಸಿ ಯತಿಯನಿಂತಿರೆ
ತೊಡರ್ಚಿ ಕೆಡೆಪೇೞ್ದೊಡಕ್ಕುಮದು ಯತಿಭಂಗಂ
ಸಡಲಿಸದಲಸದ(ದ)ಂಪೇ
ೞ್ವೆಡೆಯೊಳ್ ನಿಲೆಪೇೞಲಾರ್ಪೊಡಂತ[ದ]ದೋಷಂ ೭೩

ಕೇಡಡಸಿದೊಡಂ ಬಗೆ(ಯು)ಂ
ಕೂಡದು ಕೂಡಿದುದುಮಱಿದು ವಿಪರೀತಮುಮಂ
ಮಾಡುಗುಮದಱಿಂ ಕರ್ಮ
ಕ್ಕೋಡಿ ಬರ್ದುಂಕಲ್ಕೆ ಕಲ್ತರಾರ್ ಬಿನ್ನಣಮಂ ೭೪

ದೋಸಮನೆ ಗುಣದವೋಲು
ದ್ಭಾಸಿಸಿ ಕನ್ನಡದೊಳೊಲ್ದು ಪೂರ್ವಾಚಾರ್ಯರ್
ದೇಸಿಯನೆ ನಿಱಿಸಿ ಖಂಡ
ಪ್ರಾಸಮನತಿಶಯಮಿದೆಂದು ಯತಿಯಂ ಮಿಕ್ಕರ್ ೭೫

ನಿರತಿಶಯಮಕ್ಕುಮದು ಬಂ
ಧುರ ಕವಿಜನತಾಪ್ರಯೋಗ ಸಂಬಂಧನದಿಂ
ಗುರುಜಘನಸ್ತನಭರಮಂ
ಥರಲೀಲಾಲಸವಿಳಾಸಿನೀ ಚಳಿತಂಬೋಲ್ ೭೬

ಅಂತುಂ ಯತಿಯಂ ಪೇೞ್ಗಾ
ರ್ಪಂತಾದ್ಯದೊಳಲಸದಾರ್ಯೆಯೊಳ್ ಕಂದದೊಳಂ
ಸಂತಂ ದ್ವಿತೀಯ ಪಾದಗ
ತಾಂತದೊಳಕ್ಕದು ಚತುಷ್ಪದೀಪದವಿಗಳೊಳ್ ೭೭

ಸಮುದಾಯಾರ್ಥಮನಾರಯೆ
ಸಮನಿಸುವರ್ಥಪ್ರತೀತಿ ತೋಱದೊಡೆಲ್ಲಂ
ಕ್ರಮಮಕ್ಕುಮರ್ಥಶೂನ್ಯಂ
ಸಮಸ್ತ ಕವಿವೃಷಭ ದೂರದೂಷಿತಮಾರ್ಗಂ ೭೮

ಮುನಿ ವೀತರಾಗನೆಂದುಂ
ಬನಮಂ ಸಾರ್ತಕ್ಕುಮಾವ ತೆಱದಿಂ ಪೋಪಂ
ಮನಮಂಜುಗುಮಱಿಯದವಂ
ಮುನಿಗುಂ ಪಗೆವಂಗೆ ಪಾಪಕರ್ಮಂ ಪೊಲ್ಲಂ ೭೯

ಸ್ಥಿರಮರ್ಥಶೂನ್ಯವೆಂಬುದು
ದುರುಕ್ತಮಿದನಿಂತು ಪೇೞ್ದೊಡೆಲ್ಲಂ ಪೀನಂ
ಮರುಳಂ ಮದಿರಾಪರವಶ
ಶರೀರನುಂ ಪೇೞ್ಗೆಮಱೆವನಾವಂ ಪೇೞ್ಗುಂ ೮೦

ಪರಿಗೀತಾರ್ಥಂ ಪೂರ್ವಾ
ಪರದೊಳ್ ಬಗೆವಾಗಳೆಂದುಮೊಂದಱೊಳೊಂದುಂ
ದೊರೆಕೊಂಡೊಂದದೊಡದು ದು
ಷ್ಕರಮೆ ವಿರುದ್ಧಾರ್ಥಮೆಂಬುದಾದಂ ದೋಷಂ ೮೧

ಅರಿನೃಪಬಲಮಂ ಗೆಲ್ದುರು
ಪರಾಕ್ರಮಕ್ರಮದೆ ಶೌರ್ಯಮಂ ಪ್ರಕಟಿಸು ನೀಂ
ನರಮಹಿತಾ ನಿನಗೇನಹಿ
ತರುಮೊಳರೇ ಸತತ ಪರಹಿತಾಚಾರಪರಾ ೮೨

ಇದು ವಿದಿತ ವಿರುದ್ಧಾರ್ಥ
ಕ್ಕುದಾಹೃತಂ ಹರಣಮಾತ್ರಮಿನ್ನಪ್ಪುವನುಂ
ಸದಭಿಮತ ಕಾವ್ಯಪದವಿಧಿ
ವಿದೂರಗತಮಾಗೆ ಪರಿಹರಿಕ್ಕೆ ಬುಧರ್ಕಳ್ ೮೩

ಪುನರುಕ್ತಮೆಂಬುದಕ್ಕುಂ
ನೆನೆಯದೆ ಪೂರ್ವೋದಿತಾರ್ಥಪದಪದ್ಧತಿಗೊಂ
ದಿನಿಸುಂ ವಿಶೇಷಮಿಲ್ಲದೆ
ಜನಿಯಿಸಿದ ಪದಾರ್ಥಮದಱಿದೀ ದೃಷ್ಟಾಂತಂ ೮೪

ತ್ರಿದಶಸುರಲೋಕವಾಸಾ
ಸ್ಪದಮಂ ಪೆಱುಗುಂ ಮನುಷ್ಯ ಮನುಜಂ ನಿನ್ನಾ
ಪದಚರಣ ಯುಗದ್ವಯಮಂ
ಮುದದಱ್ತಿಯೆ ಬಗೆದು ನೆನೆವನನುದಿನಮೆಂದುಂ ೮೫

ನಿಯತೋದ್ದೇಶಿಯುಮನುದೇ
ಶಿಯುಮನನುವಿನಂತು ಪೇೞ್ ಯಾಥಾಸಂಖ್ಯಾ
ಹ್ವಯಮಕ್ಕುಮಾಗಮೋಕ್ತಾ
ಶ್ರಯದಿಂ ವ್ಯತಿರೇಕಮಕ್ಕುಮಲ್ಲದುವೆಲ್ಲಂ ೮೬

ಚ್ಯುತಯಾಥಾಸಂಖ್ಯಾರ್ಥ
ಪ್ರತೀತದೋಷಾನುವಸಥಮೆಂದಱಿಗೆ ಬುಧರ್
ಸತತಮದಱಿಯೆ ನಿದರ್ಶನ
ಗತಮಿಂತಕ್ಕುಂ ಪ್ರಮೋದದಿಂ ಕವಿಜನದೊಳ್ ೮೭

ಅಳಕಾನನ ನಯನಂಗಳೊ
ಳಳಿನಳಿನೋತ್ಪಳವಿಕಾಶಮಂ ಗೆಲ್ದುದಱಿಂ
ತಿಳಿಗೊಳನಂ ಪೋಲ್ತಿರ್ದುಂ
ತಿಳಿಯದಿದೇನೆಂಬುದುಂ ತದನ್ವಯಮದಱೊಳ್ ೮೮

ಅಳಿನಳಿನೋತ್ಪಳರುಚಿಗಳ
ನಳಕಾನನ ನಯನಯುಗಳದಿಂ ಗೆಲ್ದಿರ್ದುಂ
ಕೊಳದೊಳಗೇನಂ ನೋೞ್ಪಗ
ವಿಳಾಸಿನೀ ನಿನ್ನ ಪೋಲದೇನತಿಶಯಮೋ ೮೯

ಸವಿಶೇಷಾಲಂಕಾರೋ
ದ್ಭವಮಾಗಿಯುಮೊಂದುವರ್ಥದೊಳ್ ಸಂಬಂಧ
ವ್ಯವಧಾನಮಾದೊಡಕ್ಕುಂ
ವ್ಯವಹಿತದೋಷಂ ಪ್ರಯೋಗಮೀತೆಱದನಱ ೯೦

ಮನದೆ ನೆನೆದವರ ಕಿಡುಗುಂ
ಜಿನಾಧಿಪಾ ನಿನ್ನ ಪಾಪನಿಚಯಂ ಗುಣಮಂ
ಮುನಿಗಳುಮದಱಿಂ ತತ್ಸೇ
ವನೆಯಿಂ ಕಿಡಿಪಲ್ಕೆ ಪತ್ತಿದರ್ ಸಂಸೃತಿಯಂ ೯೧

ಗುರುಲಘುವಿನ್ಯಾಸಕ್ರಮ
ವಿರಚನೆಯೂನಾತಿರಿಕ್ತಮಾದೊಡೆ ಕೃತಿಯೊಳ್
ನಿರುತಂ ಛಂದೋಭಂಗಂ
ದುರುಕ್ತತರದೋಷಮದಱ ಪಾಂಗಿಂತಕ್ಕುಂ ೯೨

ವನರುಹದಳನಯನೆ ನಿ
ನ್ನನೆ ನೆನೆನೆನೆದಿರು[ಳೊಳಗೊ]ಱಗದಿರೆ ಕಡೆಗಣ್ಗಳ್
ಮುನಿಸನಭಿನಯಿಪವೋಲ್ಕೆ
ಮ್ಮನೆ ರಕ್ತಾಂಭೋಜರುಚಿಯನಿಟ್ಟುಳಿಗೊಳ್ಗುಂ ೯೩

ಮೊದಲ ಪದಂ ನ್ಯೂನಾಕ್ಷರ
ಮದಱಿಂದೆ ಬೞಿಕ್ಕಮರ್ಥಮಧಿಕಾಕ್ಷರಮಿಂ
ತಿದಱಿಂ ಛಂದೋಭಂಗಂ
ಪದನಱಿದದನಿಂತು ಸಮಱಿ ಪೇೞ್ದೊಡೆ ಚೆಲ್ವಂ ೯೪

ಛಂದಕ್ಕೆ ಬಾರದೆಂದಱಿ
ದೊಂದೊಂದಱೊಳೊಂದಿ ಬಂದು ನಿಂದಕ್ಕರಮಂ
ಸಂಧಿಸದೆ ಪೇೞ್ದೊಡದು ಕೃತಿ
ನಿಂದಿತಮೆಂದುಂ ವಿಸಂಧಿಯೆಂಬುದು ದೋಷಂ ೯೫

ಜನಪತಿಗೆ ಒಸಗೆಯಂ ಪುರ
ಜನಮೆಲ್ಲಂ ಬೀಱುತಿರ್ಪ್ಪರಾಗಳ್ತಾಮುಂ
ಮನದುತ್ಸವದಿಂ ಕುಣಿವಂ
ತನಿಲಾಹತಕೇತನಾಳಿ ಸೊಗಯಿಸಿ ತೋರ್ಕ್ಕುಂ ೯೬

ಮುನ್ನಂ ಪೇೞ್ದಿರ್ದರ್ಥಂ
ಭಿನ್ನಪ್ರಸ್ತಾರಭಿತ್ತಿದೋಷನುಗತಂ
ಸನ್ನುತಮಪರಾರ್ಥಂ ಸಂ
ಪನ್ನಂ ಶ್ಲಿಷ್ಟಾಕ್ಷರೋಪರಚಿತಮದೋಷಂ ೯೭

ಸಂಧಿಗಳುಂ ಕೆಲವೆಡೆಯೊಳ್
ಬಂದು ವಿರೂಪಂಗಳಾಗಿ ಸಮನಿಸಿ ಕವಿತಾ
ಬಂಧನದೊಳಾಗೆ ದೋಷಾ
ಬಂಧುಗೆ ಶಶಲಕ್ಷ್ಮದಂತೆ ಕಱೆಯಂ ತರ್ಕ್ಕುಂ ೯೮

ಅರಮರಸಂ ಕೃತಕಾದ್ರಿಯೊ
ಳರಮರಮನೆಯೊಳಗೆ ಕಂದುಕ ಕ್ರೀಡೆಗಳೊಳ್
ಅರಮುದ್ಯಾನವನಂಗಳೊ
ಳರಮಂತಃಪುರದೊಳರಮದೆಂದುಂ ನಿಲ್ವಂ ೯೯

ದೋಷಂಗಳಿಂತು ಮಿಗೆ ಸಂ
ಶ್ಲೇಷದೊಳಾದಂದು ಸಕಲ ವಿದ್ವತ್ಸಭೆಯೊಳ್
ದೂಷಿಸುಗುಂ ಕೃತಿವಧುವಂ
ಭಾಷಾವಿದರದಱ ತೆಱನನುಱೆ ಗೀ ದೆಸೆಯಿಂ ೧೦೦

ಕುಱಿತಂತೆ ಪೇೞ್ದ ಪದದೊಳ್
ಮೆಱೆಯದೊಡೆಲ್ಲಂ ವಿವಕ್ಷಿತಾರ್ಥಮಶೇಷಂ
ಪೆಱತೊಂದಲ್ಲಿಲ್ಲದುಮುಮ
ನಱಿವವರಿಟ್ಟಱಿಯೆ ಪೇೞ್ದೊಡದು ನೇಯಾರ್ಥಂ ೧೦೧

ಪರೆದಿರೆ ರಾಗಂ ತನ್ನೊಳ್
ನಿರಂತರಂ ಗಗನವಿವರ ಮೊಪ್ಪಿತ್ತಾದಂ
ವರ ಪಾರಿಜಾತ ಕುಸುಮೋ
ತ್ಕರ ಸಾಂದ್ರಪರಾಗ ವಿಸರ ಪಿಂಜರಿತಂಬೋಲ್ ೧೦೨

ಪರೆದಿರೆ ಸಂಧ್ಯಾರಾಗಂ
ನಿರಂತರಂ ಗಗನವಿವರಮೊಪ್ಪಿತ್ತೆಂದಾ
ದರದಿಂ ಪೇೞಲ್ ಬಗೆದಂ
ತಿರೆ ಸಂಧ್ಯಾಪದಮನಿಡದೆ ಪೇೞ್ವುದು ದೋಷಂ ೧೦೩

ರಾಗಾದಿ ದೋಷರಹಿತ
ವಾಗತಿಶಯವಖಿಳವಸ್ತು ವಿಸ್ತರ ವಿಷಯಂ
ಯೋಗಿಗುಣಾನುಗತಂ ಮ
ತ್ತಾಗಮವೇತದ್ವಿರುದ್ಧ ವಚನಂ ದೋಷಂ ೧೦೪

ಆ ಕಪಿಲ ಸುಗತ ಕಣಚರ
ಲೋಕಾಯತಿಕಾದಿ ಮಾರ್ಗಭೇದಂ ಸಮಯಂ
ಪ್ರಾಕಟಮದಂ ವಿರುದ್ಧ ವಿ
ವೇಕದಿನಱಿಪುವೊಡೆ ನಾಡೆ ಸಮಯವಿರುದ್ಧಂ ೧೦೫

ಉಕ್ತವಿಚಾರಂ ನ್ಯಾಯನಿ
ಯುಕ್ತಂ ಕ್ರಮವಿನ್ನದಕ್ಕೆ ಬಾರದುವೆಲ್ಲಂ
ವ್ಯಕ್ತಂ ನ್ಯಾಯವಿರುದ್ಧಂ
ಪ್ರೋಕ್ತ ಮಹಾದೋಷಮಂತು ಪೇೞಲ್ಕೆಂತುಂ ೧೦೬

ನಿರುಪಮ ಗಂಧರ್ವಗತಿ
ಸ್ವರಾದಿಕ ಕಳಾಗುಣಂ ಚತುಃಷಷ್ಟಿವಿಧಂ
ದೊರೆಕೊಳ್ಳದುದೆಲ್ಲಿ ಕಳಾ
ವಿರುದ್ಧದೋಷಂ ವಿಶಿಷ್ಟಜನತಾದೂಷ್ಯಂ ೧೦೭

ಕಾಲಮಹೋರಾತ್ರಾದಿಕ
ಮಾ ಲಕ್ಷಿತ ಭೇದಮದಱಿಕೊಳೊಂದದೊಡಕ್ಕುಂ
ಕಾಲವಿರುದ್ಧಂ ದೋಷ
ಕ್ಕಾಲಯಮದನಱಿದು ಕೃತಿಯೊಳಿಡದಿರ್ಕೆ ಬುಧರ್ ೧೦೮

ಲೋಕಮದೂರ್ಧ್ವಾಧೋಮ
ಧ್ಯಾಕಾಂಕ್ಷಿತಭೇದರೂಪದಿಂ ಮೂಱಕ್ಕುಂ
ಲೋಕವಿರುದ್ಧಂ ತದ್ವ್ಯತಿ
ರೇಕೋಕ್ತಿ ವಿವೇಕಿಲೋಕಗರ್ಹಿತ ಮಾರ್ಗಂ ೧೦೯

ದೇಶಂ ವರರಾಷ್ಟ್ರಾದಿ ನಿ
ವೇಶಾಂತಂ ತದ್ವಿರುದ್ಧವಚನಂ ಮಿಗೆ ಸಂ
ಕ್ಲೇಶಕರಂ ಕೃತಿಕರ್ತೃಗೆ
ಕೌಶಲಮಂ ಪಡೆಯದುಕ್ತ ದೇಶವಿರುದ್ಧಂ ೧೧೦

ಇಂತಿಂತೆ ಪೇೞ್ವೊಡೆಲ್ಲಮ
ನಂತಾತ್ಮಕಮಕ್ಕುಮಾ ವಿರುದ್ಧದ ಭೇದಂ
ಸಂತಯಿಸಿ ಬಲಿದು ಮನಮನ
ದಂತಱಿಸಲೆ ಪೇೞಲಾರ್ಪೆನೆಂಬವನೊಳನೇ ೧೧೧

(ಗೀತಿಕೆ)

ದೋಸಮೇನಾನುಂ ಸ್ವಲ್ಪಮಾದೊಡಂ
ಮಾಸಿಸಿರ್ಕುಮಣಂ ಕೃತಿವಧುವಂ
ಪೇಸದೆ ದುರ್ಜನದೊಳಾದ ಪರಿಚಯಂ
ಮಾಸಿಸಿ ಕಿಡಿಸುವವೊಲೊಪ್ಪುವ ಕುಲವಧುವಂ ೧೧೨

(ವೃತ್ತಗಳು)

ಕಾರಕದೋಷಮುಂ ವಚನದೋಷಮುಮಾ ಗುರುದೋಷಮುಂ ಲಘೂ
ಚ್ಚಾರಿತ ಶಬ್ದದೋಷಮುಮದಂತೆ ಸಮುಚ್ಚಯಜಾತದೋಷಮುಂ
ಭೂರಿ ವಿಕಲ್ಪದೋಷಮುಮದಿನ್ನವಧಾರಣದೋಷಮುಂ ವಿಶಂ
ಕಾ ರಚಿತೋರು ದೋಷಮುಮನೀ ತೆಱದಿಂ ತಱಿಸಲ್ಗೆ ಪಂಡತರ್ ೧೧೩

ಕಾರಕಮಾಱು ಕರ್ಮಕರಣಾದಿಕದಿಂ ಪ್ರಥಮಾದಿಭೇದನಿ
ರ್ಧಾರದಿಂದದಂ ಪಿಡಿದು ನಿಲ್ವ ವಿಭಕ್ತಿಗಳೇೞೆನಿಕ್ಕುಮಾ
ಚಾರುಗುಣೋದಯಂ ವಚನಮೇಕಬಹುಕ್ರಮದಿಂದೆರಟ್ಟಿರ
(ತ್ತಾ)ರಯೆ ಪೇೞ್ವೆನಿಂತಿವಱ ಜಾತಿವಿಭಾಗ ಗುಣಾಗುಣಂಗಳು ೧೧೪

ನರಪತಿ ಬಂದನಾ ನೃಪನನಟ್ಟಿಯೆ ಕಾಣ್ಬುದು ತನ್ನರೇಂದ್ರನಿಂ
ಧರಣಿ ಸನಾಥೆ ಭೂಪತಿಗೆ ಕಪ್ಪವನಿತ್ತವನೀಶನತ್ತಣಿಂ
ಪರಿಭವಮಂ ಕೞಲ್ಚುವುದಧೀಶ್ವರನಾ ದಯೆಸಾಲ್ಗುಮಾ ಮಹೀ
ಶ್ವರನೊಳಿದಪ್ಪುದೆಂಬುದಿದು ಕಾರಕಯುಕ್ತ ವಿಭಕ್ತ್ಯನುಕ್ರಮಂ ೧೧೫

ಬರಮೆಮಗೀಗೆ ದೇವತೆಗಳಾದರದಿಂ ಕರುಣಿಪ್ಪುದಕ್ಕೆ ಬಂ
ಧುರಗುಣ ಬಂಧುಸಂತತಿಯನೆಂಬುದು ಕಾರಕದೋಷಮಾಗಳುಂ
ಬರವನಮೋಘಮೀಗೆಮಗೆ ದೇವತೆಗಳ್ ಕರುಣಿಪ್ಪುದಕ್ಕೆ ಬಂ
ಧುರ ಗುಣಬಂಧುಸಂತತಿಗೆ ನಿಕ್ಕುವಮೆಂಬುದದುಷ್ಟಕಾರ(ಕಂ) ೧೧೬

ನಿಕ್ಕುವಮಿಂತುಮಲ್ಲದದ(ಱಾ)ಕ್ರಿಯೆ ಸಾರ್ದಿರೆ ಪತ್ತಿ ಮುಂದೆ ಸ
ಯ್ತಕ್ಕುಮನುಕ್ರಮಾನುಗತದಿಂ ಬರಮೀಗೆಮಗೆಂಬ ಕಾರಕಂ
ಸಕ್ಕದವೇನೊ ಕಾರಕ ವಿಭಕ್ತಿಯೊಳೊಂದೆ ಸಮಾಸಯುಕ್ತಿ ಲೇ
ಸಕ್ಕುಮಭೇದರೂಪಗುಣಮಾಗಿ ತಗುಳ್ದಿರೆ ಮೇಣ್ ಕ್ರಿಯಾಪದಂ ೧೧೭

ಬಂದುವು ಪಾವುಡಂ ನೃಪತಿಗೆಂಬುದುಮಾನೆಗಳೀ ಪ್ರದೇಶದೊಳ್
ನಿಂದುದಿದೆಂಬುದುಂ ವಚನದೋಷವಿಶೇಷಮನೈಪುಣೋಕ್ತಿಯಿಂ
ಬಂದುದು ಪಾವುಡಂ ನೃಪತಿಗೆಂಬುದುಮಾನೆಗಳೀ ಪ್ರದೇಶದೊಳ್
ನಿಂದುವಿವೆಂಬುದು ಬಗೆದು ನೋಡೆ ಗುಣಂ ವಚನಕ್ಕೆ ನಿಕ್ಕುವಂ ೧೧೮

ಜಾತಿವಿಭಾಗಮಂ ಬಗೆದು ಪೇೞೆ ಬಹುತ್ವಮನೇಕ ವಾಕ್ಯ ಸಂ
ಜಾತಗುಣಂ ತದೇಕವಚನಂಗಳೊಳಂ ದೊರೆವೆತ್ತು ಕೂಡುಗುಂ
ಮಾತಿನೊಳೇನೋ ಸಂಖ್ಯೆಗಳೊಳೇಕ ಬಹುತ್ವ ವಿಪರ್ಯಯಕ್ಕಸಂ
ಖ್ಯಾತಗುಣಂ ವಿಕಲ್ಪಮದು ಕನ್ನಡದೊಳ್ ಗುಣಮಂ ತಗುಳ್ಚುಗುಂ ೧೧೯

ಕುದುರೆ ತಗುಳ್ದುವಾದೆಸೆಯ ಬಿಲ್ಲವರಂ ಸುಟಿದಾನೆ ನಿಂದು ಮೆ
ಟ್ಟಿದುವೆಲೆ ನೋಡಿಮೆಂಬುದಿದು ಜಾತಿಕೃತೈಕಬಹುತ್ವಮೊಂದುಗುಂ
ಕುದಿಕುದಿದತ್ತಣಿಂ ಕುದುರೆ ನೂಱಱೊಳಾ ಬಲದಾನೆ ಪತ್ತು ತಾ
ಗಿದುವೆನೆ ದೋಷಮಾ ಪಿರಿದು ಸಂಖ್ಯೆಯೋಳೇಕಬಹುತ್ವ ಸಂಗದಿಂ ೧೨೦

ಬೆರಸಿರೆ ಮುಂ ಸಮುಚ್ಚಯ ಪದದ್ವಿತಯೋಕ್ತಿ ವಿಭಕ್ತಿ ಕೂಡೆ ಬಂ
ದಿರದೆಯುಮೇಕ ವಾಕ್ಯದೊಳೆ ಕಾರಕ ಸಂಪದಮಂ ತಗುಳ್ಚುಗುಂ
ನರಪತಿಯುಂ ನೃಪಾಂಗನೆಯರುಂ ನೆರೆದಟ್ಟಿಯಿನಾಡಿಪೋದರಾ
ಪರಿಜನಂಮುಂ ಮಹೋತ್ಸವದೊಳೊಂದಿದುದೆಂಬುದಿದಲ್ಪದೂಷಿತಂ ೧೨೧

ಗಣಿದದೊಳೊಂದಿ ಬರ್ಪ ಪದಮೊಂದೆಡೆಗೊಂ [ಡು] ವಿಶೇಷ್ಯಮುಂ ವಿಶೇ
ಷಣಮುಮನೊಂದಲೀಯದಿರೆಯುಂ ಮಿಗೆ ಕಾರಕ ದೋಷ [ಮಲ್ತದು]
ಪ್ರಣುತ ಪದಾಂತರೀಕರಣಮಂತದೆ ತಾಣದೊಳಾದೊಡಂ ಮಹಾ
ಗುಣಮನೆ ತರ್ಕುಮೇಕ ಬಹುಭೇದವಿಕಲ್ಪಮನಲ್ಲಿ ನೋಡಲಿಂ ೧೨೨

ಗುಣಯುತನಪ್ಪನಂ ಸುಭಟನಪ್ಪನನಾಯುಧಯುಕ್ತನಪ್ಪನಂ
ಪ್ರಣುತ ಸಮಸ್ತವೈರಿಗಣನಪ್ಪನನುಜ್ಜ್ವಲಕೀರ್ತಿಯಪ್ಪನಂ
ಗಣಿದಮನೇನುಮಂ ಬಗೆಯದಾಗಡುಮಂತೆ ಪರೋಪಕಾರಕಾ
ರಣಪರನಪ್ಪನಂ ಮನದೆ ಮೆಚ್ಚದರಾರಭಿಮಾನಿಯಪ್ಪನಂ ೧೨೩

ನೆನೆದ ಮುಗಿಲ್ಗಳುಂ ಸುರಿವ ಪೆರ್ಮಟಿಯುಂ ಮಿಗೆ ನುಣ್ಣನಪ್ಪ ಕೇ
ಕಿಗಳ ಸರಂಗಳುಂ ಪೊಳೆವ ಮಿಂಚುಗಳುಂ ಕರಮುಚ್ಚಮಪ್ಪ ಬೆ
ಟ್ಟುಗಳ ತಟಂಗಳಿಂ ಸುರಿವ ನಿರ್ಝರಮುಂ ಪೊಸ ಕಾರೊಳಿಂತು ಬೆ
ಳ್ಪಗೆ ಪಥಿಕಾಂಗನಾಜನಮನಂಜಿಸುವಂತಿರೆ ತೋಱೆ ಸುತ್ತಲುಂ ೧೨೪

(ಗೀತಿಗೆ)

ಇಂತುಕಾರಕಂಗಳೊಳ್
ಸಂತಮಱಿಯೆ ಪೇಳ್ದ ಗುಣಮಂ ದೋಷಮುಮಂ
ಚಿಂತಿಸಿ ಪೆಱವುಮಿನ್ನಪ್ಪುವಂ
ಭ್ರಾಂತಿಲ್ಲದಱಿದುಕೊಳ್ಗೆ ಕವಿಗಳ್ ಕೃತಿಗಳೊಳ್ ೧೨೫

(ವೃತ್ತ)

ಆರುಮೀ ಗುರುಲಘೂದಿತದೋಷ ವಿಶೇಷಮಂ
ಧೀರಸತ್ವರಱಿದುಂ ಕುಱಿಗೊಂಡು ವಿಭಾಗಿಸರ್
ಕಾರಣಾಂತರಮನಂತದೞೊಳ್ ತಱಿಸಂದು ನಿ
ರ್ಧಾರಿತ ಕ್ರಮದೆ ಪೇೞ್ವೆನುದಾಹರಣಂಗಳಂ ೧೨೬

ಆಗಳುಂ ಗುರುಗಳಲ್ಲದ ತಾಣದೊಳಂ ಗುರೂ
ದ್ಯೋಗದಿಂ ಬಗೆಗೆ ಗೌರವ ದೋಷಮಿದೆಂಬುದಂ
ಬೇಗಮಾ ಲಘುಗಳಲ್ಲದ ತಾಣದೊಳಂ ಲಘೂ
ಪಾಗಮ ಕ್ರಮದೆ ನಂಬುಗೆ ಲಾಘವ ದೋಷಮಂ ೧೨೭

ನೆರೆದು ಬಂದಪರವರ್ ಸಯಲಾಬಲಮೆಲ್ಲಮೆ
ಟ್ಟಿರದೆ ಕೊಂದಪನಿವಂದಿರನೀಗಳೆ ನಿಕ್ಕುವಂ
ಪರಿದು ಬೀೞ್ವವೊಲಿವಂದಿರ ಪಾಡೞಿವಂದಮಂ
ತಿರವೇ(ೞೊ)ಡ್ದೞಿಯದಂತಿರೆ ನಮ್ಮವರೆಲ್ಲರಂ ೧೨೮

ಇಂತು ಪೇಳ್ದೊಡಿದು ಗೌರವದೋಶದ ಮಾೞ್ಕೆನಿ
ಶ್ಚಿಂತಮೀ ತೆಱದವಂ ಕಳೆಗಾ ಕೃತಿಯತ್ತಣಿಂ
ಮುಂತೆ ಪೇೞ್ವೆ ಕುಱಿಪಂ ಕುಱಿಗೊಂಡು ಕವೀಶರಾ
ರ್ಪಂತು ಪಿಂಗಿಸುಗೆ ಕಾವ್ಯದಿನಾ ಲಘುದೋಷಮಂ ೧೨೯

ಸಾದುಗೆತ್ತು ಬಗೆಯಾದವನಾನೋಡನಟ್ಟಿದೆ
ನಾದಮಾನುಮಱಿಮಾನಸನಾಗದೆ ಮಾಳದೊಳ್
ಮೋದದಾನುಡುವ ಸೀರೆಗಮೆನ್ನನದಿರ್ಪಿಬಾ
ರದೆ ಪೋದೆಡೆಯೊಳೆ ತಡೆದಾನವನೆಂದಪಂ ೧೩೦

ಬೇಱೆವೇಱೆರೆ ವಿಕಲ್ಪ ಸಮುಚ್ಚಯಯುಗ್ಮದೊಳ್
ತೋಱುವೆಂ ಕ್ರಮವಿಕಲ್ಪನೆಯಿಂ ಗುಣದೋಷಮಂ
ಕೀೞಿಕೊಂಡು ಗುಣಮಂ ಕಳೆಗಲ್ಲಿಯ ದೋಷಮಂ
ತೋಱೆ ಪಿಂಗಿಸುವವೊಲ್ ಪೊಸನೆಲ್ಲಿರೆ [ಪೊಳ್ಗ]ಳಂ ೧೩೧

ದೇವರುಂ ಗೊರವರುಂ ಗುಣವೃದ್ಧರನಾರತಂ
ಕಾವರಕ್ಕರಸನಂ ಪ್ರಜೆಯಂ ಪರಿವಾರಮಂ
ಏವಮಂ ಬಗೆಯದಂತಿರೆ ಪೇೞ್ದ ಸಮುಚ್ಚಯೋ
ದ್ಭಾವಕಕ್ರಮವಿಚಾರದೆ ದೋಷಮಿದಗ್ಗಳಂ ೧೩೨

ನೃಪನುಮಂ ಪ್ರಜೆಯುಮಂ ಪರಿವಾರಮುಮಂ ಮಹಾ
ಕೃಪೆಯಿನಾ ಗೊರವರುಂ ಸುರರುಂ ಗುಣವೃದ್ಧರುಂ
ವಿಪುಳ ರಾಗಪರರಾಗಿಸುಗೆಂದು ಸಮುಚ್ಚಯ
ಕ್ಕುಪಚಿತೋರುಗುಣಮಂ ಮಿಗೆ ಪೇೞ್ಗೆ ಕವೀಶ್ವರರ್ ೧೩೩

ಬೇಱುವೇಱು ನಿಲೆ ಕಾರಕದೊಳ್ ಕ್ರಿಯೆ ತಳ್ತು ಮು
ತೋಱು ಪೇೞ್ದವಗುಣಂ ಗುಣರೂಪದೆ ಪೊರ್ದುಗುಂ
ಸಾಱುಗಾನೆಯವರೆಲ್ಲರುಮಂ ನೃಪ [ತಾ] ನೆ ಮ
ತ್ತೇಱು [ವಂ] ಪಣಿದೊಡಾನೆಯನೆಂಬು [ದ] ದೂಷಿತಂ ೧೩೪

ಒಸೆಗೆ ಮೇಣ್ ಮುನಿಗೆ ಮೇಣವರೆಲ್ಲರುಮಂತೆ ಬ
ಗ್ಗಿಸುಗೆ ಮತ್ತುೞಿಯಲಾಗದು ನೆಟ್ಟನೆ ಪೂಣ್ದುದಂ
ಪುಸಿವರಾಗಿರದೆ ಮಾನಸರೆಂಬುದನಿಂತೆ ಶಂ
ಕಿಸದೆ ನಂಬುವುದು ಮಿಕ್ಕ ವಿಕಲ್ಪದ ದೋಷಮಂ ೧೩೫

ಪೞಿಗೆ ಮೇಣ್ ಪೊಗೞ್ಗೆ ಮೇಣ್ನೆವಮಿಲ್ಲದೊಡಿಂತು ಕೈ
ಗೞಿಯೆ ಬಗ್ಗಿಸುಗೆ ಮೇಣವರೆಲ್ಲರುಮಂತುಮಾ
ನುೞಿವೆನಲ್ಲೆನೆನಿತಾದೊಡಮೆಂಬುದು ಚೆಲ್ವ ಪಾಂ
ಗೞಿಯ [ದ]ಂತಿದನಿಂತಿರೆ ಪೇೞ್ಗೆ ವಿಕಲ್ಪಮಂ ೧೩೬

(ಗೀತಿಕೆ)

ಕುಱಿತು ಸಮುಚ್ಚಯದಾ ಬೞಿ ವಿಕಲ್ಪದಾ
ತೆಱದೊಳೆ ದೋಷಮುಮನಂತೆ ಗುಣಮುಮಂ
ಕಿಱಿದಱಿೊಳಱಿಯೆ ಪೇೞ್ದೆನಿಂತೆ ಪೆಱವುಮನೀ
ಕುಱಿಪನೆ ಕುಱಿಮಾಡಿ ಪೇೞ್ಗೆ ಕಬ್ಬಮಂ ೧೩೭

(ವೃತ್ತ)

ನಿಯಮಿತಾ[ನ್ವಯ] ಜಾತಿ ಗುಣಕ್ರಿಯಾ
ಶ್ರಯಮಿದಾಯವಧಾರಣಲಕ್ಷಣಂ
ನಯ ನಿಯೋಗ ವಿಕಲ್ಪನೆಯೊಳ್ ವಿಶಂ
ಕೆಯ ವಿಶೇಷ ಗುಣಕ್ಕುಪಲಕ್ಷಣಂ ೧೩೮

ಕುಲಜನೀತನೆ ಪಂಡಿತನೀತನು
ಜ್ಜ್ವಲಯಶೋಧಿಕನೀತನೆ ತಿಬ್ಬಮೆಂ
ದಲಸಿ ಪೇಟ್ಟವಧಾರಣದೋಷಮಂ
ನೆಲಸಲೀಯದಿರಿಂ ಕೃತಿನಾರಿಯೊಳ್ ೧೩೯

ಶೂರನೀತನೆ ಪಂಡಿತನೀತನೇ
ಕ್ಷೀರಗೌರಯಶೋಧಿಕನೀತನೇ
ಧಾರಿಣೀತಳದೊಳ್ ಧ್ರುವಮೆಂಬುದಾ
ಧಾರಮಿಂತವಧಾರಣದೊಳ್ ಗುಣಂ ೧೪೦

ದಿವಿಜನೋ ಫಣಿನಾಯಕನೋ ಮನೋ
ಭವನಿವಂ ಕರಮೊಪ್ಪಿದನೆಂಬುದಂ
ಕವಿಗಳಿಟ್ಟ ವಿಶಂಕೆಯ ಪಾಟಿಯಂ
ತವಿಸಿ ನಿಲ್ಕೆ ಮನೋಹರ ಕಾವ್ಯದೊಳ್ ೧೪೧

ಸುರಗಣಾಧಿಪನೋ ಫಣಿನಾಥನೋ
ನಿರುತಮಾ ಸ್ಮರನೋ ಸೊಗಯಿಪ್ಪರೀ
ದೊರೆಯರಿಲ್ಲ ನರರ್ ಪೆಱರೆಂಬುದಾ
ದರದಿನಕ್ಕೆ ಗುಣೋದಯ ಕಾರಣಂ ೧೪೨

ಅಪರಿಮೇಯಮೆ ದೋಷಗುಣೌಘಮಿಂ
ತುಪಚಿತಕ್ರಮದಾರೆಯೆ ಕಾವ್ಯದೊಳ್
ವಿಪುಳ ವೃತ್ತಿಯೊಳೊಂದಿರೆ ಪೇಟ್ವಿನ
ಭ್ಯುಪ[ಮಿತೋ]ಕ್ತಿ ಗುಣಾವಗುಣಂಗಳಂ ೧೪೩

ಪೊಳೆವ ಮಿಂಚುಗಳಂತಿರೆ ಕೇತುಗಳ್
ಜಳದ ವೃಂದದವೋಲಿರೆ ಹಸ್ತಿಗಳ್
ಗಳಿತಧಾರೆಗಳಿಂತಿರೆ ಪತ್ತಿಗಳ್
ಬಳಸಿ ಕಾರ್ಗೆಣೆಯಾಯ್ತು ಮಹಾಹವಂ ೧೪೪

ನಿಯಮಿತಾಕ್ಷರದಿಂದುಪಮಾಪ್ರತಿ
ಜ್ಞೆಯನೆ ತಿರ್ದುವುದಟ್ಟೆಯಿನಿರ್ದುಮಾ
ಬಯಕೆ ತೀರದ ಕಾರಣದಿಂ ವಿಪ
ರ್ಯಯಮಿದಭ್ಯುಪಮೋಕ್ಷ್ಯುಪದೂಷಣಂ ೧೪೫

ಉಪಮಿತಾಕ್ಷರಮೆಲ್ಲಿಯುಮೇಕರೂ
ಪ ಪರಿವೃತ್ತಿಯೊಳೊಂದಿದ ಮಾಟ್ಕೆಯಿಂ
ದುಪಚಿತ ಕ್ರಮಮಕ್ಕುಮಿದೆಂದುಮ
ಭ್ಯುಪ [ಮಿತ]ಕ್ಕೆ ಗುಣೋದಯ ಕಾರಣಂ ೧೪೬

ಸಮುಚಿತ ನೃಪತುಂಗದೇವ ಮಾರ್ಗ
ಕ್ರಮನಮನಾಭಿಮುಖರ್ಕಳಪ್ಪ [ರೆಲ್ಲರ್]
ಕ್ರಮಸಹಿತಮಗಮ್ಯರೂಪ ಕಾ[ವ್ಯಾ]
ಶ್ರಮಪದಮಂ ನಿರಪಾಯ[ದೆ]ಯ್ದಲಾರ್ಪರ್ ೧೪೭

ಅತಿಶಯಧವಳೋರ್ವಿಪೋದಿತಾಳಂ
ಕೃತಿಮತಿ ನೀತಿ ನಿರಂತರ ಪ್ರತೀತಂ
ಶ್ರುತಿಯುವತಿಕೃತೋಪಚಾರ ಸಾರ
ಸ್ವತಗುಣದಿಂ ಕೃತ್ಯಕೃತ್ಯ [ಮೆಲ್ಲ] ಮಕ್ಕುಂ ೧೪೮

ನುಡಿಗಳೊಡಂಬಡಲ್ ಬಗೆದವೋಲ್ ಬಗೆಯಂ ಮಿಗಲೀಯದೊಂದೆ ನಾ
ಟ್ನುಡಿಯ ಬೆಡಂಗೆ ಕನ್ನಡದ ಮಾತಿನೊಳಾ ವಿಕಟಾಕ್ಷರಂಗಳೊಳ್
ತೊಡರದೆ ಸಕ್ಕದಂಗಳ ಪದಂ ಪವಣಾಗಿರೆ ಮೆಲ್ಪುವೆತ್ತು ದಾಂ
ಗುಡಿವಿಡುವಂತೆ ನೀಳ್ದು ನಿಲೆ ಪೇಟ್ವುದು ನೀತಿನಿರಂತರ ಕ್ರಮಂ ೧೪೯

ಸಕಳಾಳಾಪ ಕಳಾಕಳಾಪಕಥಿತವ್ಯಾವೃತ್ತಿಯೊಳ್‌ಕೂಡಿ ಚಿ
ತ್ರಕರಂಬೋಲ್‌ಪರಭಾಗಭಾವವಿಲಸದ್ವರ್ಣಕ್ರಮಾವೃತ್ತಿಯಂ
ಪ್ರಕಟಂ ಮಾಡಿರೆ ಪೇೞ್ದ ಚಿತ್ರಕೃತಿಯಂ ವ್ಯಾವರ್ಣಿಸುತ್ತುಂ ಕವಿ
ಪ್ರಕರಂ ಶ್ರೀವಿಜಯಪ್ರಭೂತಮನಿದಂ ಕೈಕೊಳ್ವುದೀ ಮಾಟ್ಕೆಯಿಂ ೧೫೦

(ಗದ್ಯ)

ಇದು ಪರಮ ಶ್ರೀನೃಪತುಂಗದೇವಾನುಮತಮಪ್ಪ ಕವಿರಾಜಮಾರ್ಗದೊಳ್
ದೋಷಾಟಿದೋಷಾನುವರ್ಣನ ನಿರ್ಣಯಂ
ಪ್ರಥಮ ಪರಿಚ್ಛೇದಂ

* * * *

## ದ್ವಿತೀಯ ಪರಿಚ್ಛೇದಂ

ಪರಮ ಶ್ರೀಕೃತಿವಧುವಾ
ಶರೀರಶೋಭಾಕರಂಗಳಪ್ಪ ಗುಣಂಗಳ್
ನಿರತಿಶಯಾಲಂಕಾರ
ಪ್ರರೂಪಿತಂಗಳ್ ಪುರಾಣ ಕವಿ ವಿದಿತಂಗಳ್ ೧

ಚಾರು ಶ್ರೀ ನೃಪತುಂಗ ವಿ
ಚಾರ ಕ್ರಮ ಮಾರ್ಗಗಣನೆಯೊಳ್ ಪರಮಾಲಂ
ಕಾರವಿಭಾಗಂ ವಿವಿಧಾ
ಕಾರಂ ಶಬ್ದಾರ್ಥಭೇದದಿಂದೆರಡಕ್ಕುಂ ೨

ಅನ್ನೆಗಮದಱೊಳಗೆ ಸಮು
ತ್ಪನ್ನ ಪ್ರಾಧಾನ್ಯಮನ್ಯಮರ್ಥಾಧಾರಂ
ಮುನ್ನಂ ಶಬ್ದಾಲಂಕಾ
ರನ್ನಿಶ್ಚಿತಮಕ್ಕೆ ಪೇೞ್ವ ಮಾಟ್ಕೆಯೊಳೆನ್ನಾ ೩

ಇಲ್ಲಿಗಿದು ತಕ್ಕುದಿಲ್ಲಿಗೆ
ಪೊಲ್ಲದಿದೆಂದಱಿದು ಸಮಱೆ ಬಲ್ಲಂತೆಲ್ಲಂ
ನೆಲ್ಲುಂ ಮೊಸರುಂ ಗುಡಿದಂ
ತಲ್ಲದೆ ತಲ್ಲಣಿಸದಲಸದಿಡು ಮೃದುಪದಮಂ ೪

ಗಟೆಯಿಸಿದರ್ಥಂ ಸಲೆ ಪಾಂ
ಗಟೆಯದೆಯುಂ ಶಬ್ದಮೊಂದದಿರ್ದೊಡೆ ಮುತ್ತುಂ
ಮೆಟಿಸುಂ ಕೋದಂತಿರ್ಕುಂ
ಕಟಿಲ್ಚಿ ಕಳೆಗೊಂದಿ ಮುಂದೆ ಬಾರದ ಪದಮಂ ೫

ನಿಲಿಸಿ ಲಘುಪದಮನದನ
ಗ್ಗಲಿಸಿರೆ ಮತ್ತೊತ್ತಿ ಬರ್ಪ ಪದಮಂ ತುದಿಯೊಳ್
ನಿಲೆ ಪೇೞ್ದಾಗಳ್ ಕೂಸಿನ
ತಲೆಯೊಳ್ ಬಿಣ್ಪೊಱೆಯನಿಟ್ಟವೋಲಸುಖಕರಂ ೬

ಬರಿಸಿ ಕ್ಷಿತಿಪತಿಯಂ ಸ
ಯ್ತಿರಿಸಿ ಪ್ರಿಯ ಕುಶಲವಾರ್ತೆಯಂ ಬೆಸಗೊಂಡು
ಸ್ಥಿರಮಿರ್ದು ಪ್ರಭು ನುಡಿಯೆ
ಪ್ರರೂಢಮುದನಾದನಾತನೆಂಬುದು ದೂಷ್ಯಂ ೭

ಕ್ಷಿತಿಪತಿಯಂ ಬರಿಸಿ ಜಗ
ನ್ನುತನಂ ಸಂತೈಸಿ ಕುಶಲವಾರ್ತಾಂತರಮಂ
ಮಿತವಚನಂ ಬೆಸಗೊಂಡತಿ
ವಿತೀರ್ಣಮುದನಾದನಾತನೆಂಬುದು ಮಾರ್ಗಂ ೮

ಒಂದಂ ಕ್ರಿಯಾವಿಶೇಷಣ
ಮಂ ದೊರೆಕೊಳೆ ಸಯ್ತು ಪೇ [ೞ್ದಿಮ] ಱದಱೊಳೆ ಪೆಱತಂ
ಸಂದಿಸಿ ಪೇೞ್ದೊಡೆ ಕೃತಿಯೊಳ
ಗೊಂದಿರದೆರಡಕ್ಕೆ ಬಿಟ್ಟ ಕಱುವಂ ಪೋಲ್ಗುಂ ೯

ಪರಿವಾರ ವಾರವನಿತಾ
ಪರಿವೃತನರಮನೆಯೊಳರಸನಂಬರತಳದೊಳ್
ವರ ತಾರಾಪರಿಗತ ಶಶ
ಧರನಂತೊಪ್ಪಿರೆ ವಿನೋದದಿಂದುರುಮುದದಿಂ ೧೦

ಪದನಱಿದೊಂದಂ ಕ್ರಿಯೆಯೊಳ್
ಪುದಿದುಱೆದುದನೊಂದಿ ಬರೆ ವಿಶೇಷ್ಯದೊಳೊಂದಂ
ಸದಭಿಮತಮಾಗಿ ನಿಲೆ ಪೇ
ೞ್ವುದು ಮಾರ್ಗಂ ನಿತ್ಯಮಲ್ಲವಲ್ಲಭಮತದಿಂ ೧೧

ಪರಿವಾರ ವಾರವನಿತಾ
ಪರಿವೃತನರಮನೆಯೊಳರಸನಂಬರತಳದೊಳ್
ವರ ತಾರಾಪರಿಗತ ಶಶ
ಧರನಂತೊಪ್ಪಿರೆ ವಿನೋದದಿಂ ಜನಿತಮುದಂ ೧೨

ಇಂನಂತೆ ಮತ್ತೆ ಬಟಿ ಮಿಗೆ
ಮುಂ ನಿಲೆ ತಾಂ ಮೇಣ್ಪೆಱಿಂ ಗಡಂ ಗಳಮಾದಂ
ಕೆಂನಂ ನಿಲ್ಲೆಂದಿವನೆಂ
ದುಂ ನಿಱಿಸಲ್ಕಲ್ಲದೆಡೆಗಳೊಳ್ ಕಲ್ಲದಿರಿಂ ೧೩

ನೃಪಕನ್ಯಕಾ ಸ್ವಯಂವರ
ವಿಪುಳ ಮಹೋತ್ಸವ ವಿವಾಹದೊಳ್ ಬಂದಿರ್ಮು
ನ್ನಪವಾದವಾದುದೆನಗೇಂ
ಚಪಲಾಧ್ವಜನೋಕ್ತಿಯಿಂದಮಿಂ ಬಾರದಿರಿಂ ೧೪

ಘನವಮೆರಡನೆಯದಱೊಳಮಾ
ಱನೆಯ ವಿಭಕ್ತಿಯೊಳಮೊಳವು ಗುರುಲಘುಭೇದಂ
ಅನಿಯತ ವೃತ್ತಿಯನಱಿದಿದ
ನನುಮಾರ್ಗಕ್ರಮದೆ ಸಯ್ತು ಮಾಡುಗೆ ನಿಪುಣಂ ೧೫

ಆದಿಸ್ವರಪದಮಂತದೊ
ಳಾದೆಡೆಯೊಳ್ ದೀರ್ಘಮಕ್ಕುಮೆರಡನೆಯ ವಿಭ
ಕ್ತ್ಯಾದಾನಪದಂ ದೀರ್ಘಂ
ಪಾದಂತದೊಳುಟಿದ ತಾಣದೊಳ್ ಸ್ವಚ್ಛಂದಂ ೧೬

ನೃಪನನಭಿಮಾನಧನನನ
ನುಪಮನನತಿಶಯ ವಿಶಾಲ ಕೀರ್ತಿಧ್ವಜನಾ
ನುಪಚಿತಗುಣನಾನುಚಿತನ
ನಪೇತದೋಷನನುದಾರಚರಿತೋದಯನಂ ೧೭

ನೃಪನಾನಭಿನುತಮನನಾ
ನುಪಮೇತರನಾನಪಾರಕೀರ್ತಿ ಧ್ವಜನಂ
ವಿಪುಲಗುಣಜ್ಞನನುಚಿತನ
ನಪಗತದೋಷನನುದಾರಚರಿತೋದಯನಂ ೧೮

ಎಂದಿಂತು ಪೇೞ್ದ ಮಾೞ್ಕೆಯೊ
ಳೊಂದುವುದುಮನೊಂದಿ ಬಾರದುದುಮಂ ಪೀನಂ
ಸಂದೆಯಮಿಲ್ಲದೆ ಸಲೆ ತಱಿ
ಸಂದೋಸ[ರಿ]ಸುವುದು ಕಾವ್ಯರಚನಾಕ್ರಮದೊಳ್ ೧೯

ಪಲವುಮನೊಡಗೂಡಿರೆ ಸ
ಯ್ತಲಸದೆ ಪೇೞ್ವೆಡೆಯೊಳಂ ಸ್ವಪಾದಾಂತದೊಳಂ
ಪಲವಾಱಿನೆಯ ವಿಭಕ್ತಿಯೊ
ಳಲಘೂಚ್ಚಾರಣೆ ಯಥೇಷ್ಟಮುಟಿದೆಡೆಗಳೊಳಂ ೨೦

ನೃಪನಾ ನೃಪನಂದನನಾ
ನೃಪವಧುವರ್ ನೆರೆದು ಸುಖದೊಳಿರೆ ಕೈಕೊಂಡ
ತ್ತಪರಿಮಿತರಾಗಮೆರ್ದೆಯಂ
ನೃಪಬಾಂಧವರಾ ಸುಮಿತ್ರರಾ ಪರಿಜನದಾ ೨೧

ನೃಪನ ನರಪಾಲತನಯನ
ನೃಪವಧುವರ್ ನೆರೆದು ಸುಖದಿನಿರೆ ಕೈಕೊಂಡ
ತ್ತಪರಿಮಿತರಾಗಮೆರ್ದೆಯಂ
ನೃಪತಿ ಸನಾಭಿಗಳ ಬಂಧುಜನದಾ ಕೆಳೆಯಾ ೨೨

ಸಂಬೋಧನೆ ದೀರ್ಘೋಕ್ತಿಯೊ
ಳಿಂಬಾಗಿರೆ ಬರ್ಕುಮದನೆ ಪಲವೆಡೆಗಳೊಳೆಂ
ದುಂ ಬಲ್ಲವರಿಡದಿರ್ಕಾ
ದಂ ಬಾಯಟಿದೊಳ್ವವೋಲ್ಕರಂ ವಿರಸತರಂ ೨೩

ನೃಪತೀ ಪರೋಪಕಾರೀ
ವಿಪುಳಗುಣೀ ವಿಶದ ಶಶಧರಾಯತಕೀರ್ತೀ
ವ್ಯಪಗತಭಯಾ ದಯಾಲೂ
ರಿಪುವರ್ಗಮನಲೆದು ಗೆಲ್ವೆಯಾಗಾಹವದೊಳ್ ೨೪

ಅಱಿಪಿದವರುಂ ವಿಭೀತರು
ಮಱಲ್ದರುಂ ಸಲೆ ವಿಯೋಗದಿಂ ನಿಜ ಜನದಿಂ
ಕಱೆಯೆ ಪರಾರ್ಥಿಗಳುಂ ಬಾ
ಯಱೆದೊಳ್ದಿಂತಿದನೆ ಯುಕ್ತಪುನರುಕ್ತಿಕಮಂ ೨೫

ಪುಲಿಪುಲಿ ಪರಿಪರಿ ಪೋಪೋ
ಗೆಲೆಯೆಲೆ ಪೆಱಪಿಂಗುಪಿಂಗು ನಿಲ್‌ನಿಲ್‌ಬಾಬಾ
ಬಲಿ ಮನಮನಂಜದಂಜದೆ
ತೊಲತೊಲಗೀ ಮೆಳೆಗೆ ಪುಲಿಯದೆಂಬುದು ಮಾರ್ಗಂ ೨೬

ರೂಪಕದೊಳಂ ವಿಶೇಷಾ
ಳಾಪೋದ್ದೇಶದೊಳಮಲ್ಲದುಱಿದೆಡೆಗಳೊಳಂ
ಚಾಪಳಮತಿಗಳ್ ವಿರಸ ಸ
ಮೀಪಮನಿಡದಿರ್ಕೆ ಬಹು ವಿಶೇಷಣಗಣಮಂ ೨೭

ಸುಭಟರ್ಕಳ್ ಕವಿಗಳ್ ಸು
ಪ್ರಭುಗಳ್ ಚೆಲ್ವರ್ಕಳಭಿಜನರ್ಕಳ್ ಗುಣಿಗಳ್
ಅಭಿಮಾನಿಗಳತ್ಯುಗ್ರರ್
ಗಭೀರಚಿತ್ತರ್ ವಿವೇಕಿಗಳ್ ನಾಡವರ್ಗಳ್ ೨೮

ಅಂತಧಿಕ ವಿಶೇಷಣ ಗಣ
ಮಂ ತಡೆಯದೆ ಪೇಱ್ವೊಡಂಕಚಾರಣೆಗಳೊಳಂ
ಸಂತಂ ಪೇಱ್ಗುಱಿದಾವೆಡೆ
ಯಂತರದೊಳಮಾಗದೆಂದನತಿಶಯಧವಳಂ ೨೯

ನುತ ಶಬ್ದಾಲಂಕಾರದೊ
ಳತಿಶಯಮೀ ಕನ್ನಡಕ್ಕೆ ಸತತಂ ಪ್ರಾಸಂ
ಕೃತಕೃತ್ಯಮಲ್ಲವಲ್ಲಭ
ಮತದಿಂದದ [ಱಾ] ಪ್ರಪಂಚಮೀತೆಱನಕ್ಕುಂ ೩೦

ವಿನುತ ಪ್ರಾಸಂ ಶಾಂತೋ
ಪನತಂ ವರ್ಗೋದಿತಂ ಸಮೀಪಗತಂ ಮ
ತ್ತನುಗತಮಂತಗತಂ ಸಂ
ಜನಿತ ವಿಭೇದೋಕ್ತಿಯಿಂದಮಿಂತಾಱು ತೆಱಂ ೩೧

ಪಾದದೊಳೆರಡನೆಯಕ್ಕರ
ಮಾದರದಿಂದಾದುದಾವುದದನಱೆ ದನಿತಂ
ಪಾದದೊಳಿಡುವುದದಕ್ಕುಂ
ಭೇದೋಕ್ತಿಕ್ರಮ ವಿಚಾರಿತೋರು ಪ್ರಾಸಂ ೩೨

ಮನೆಗಿಂದು ಬರ್ಕುಮೆಂದಾ
ನನೇಕತರವಸ್ತುವಾಹನಾದಿಯನೊಸೆದಿಂ
ಬನೆ ಪಸರಿಸಿ ಕುಡಲಿರ್ದೆಂ
ಜನೇಶನಿಂತೇಕೆ ಕಟಿೞು ಪೋದನೊ ಪೇೞ್ ೩೩

ಎಂಬುದು ವಿನುತ ಪ್ರಾಸಂ
ಸಂಬಂಧಾಕ್ಷರದೊಳೆಲ್ಲ ಮಾತ್ರೆಗಳುಂ ತ
ಳ್ತಿಂಬಾಗಿ ಬೆರಸಿ ಶೋಭಾ
ಡಂಬರಮಂ ಪಡೆಗುಮುಚಿತ ಕಾವ್ಯೋಕ್ತಿಗಳೊಳ್ ೩೪

ಬೆರಸಿರೆ ಮುಂ ಸಂಯೋಗಾ
ಕ್ಷರಂಗಳೇಕಸ್ವರಂಗಳಿಂ ಸುಪ್ರಾಸಂ
ನೆರೆದು ವಿಪರ್ಯಾಸಕ್ರಮ
ಮಿರೆ ಸತತಂ ಶಾಂತಪೂರ್ವಮಕ್ಕುಂ ಪ್ರಾಸಂ ೩೫

ಪತ್ತೀ ಪ್ರಮಾದಫಲಕಮು
ನತ್ಯುಗ್ರಗ್ರಾಹನಿವಹ ಸಂಕ್ಷೋಭಿತದೊಳ್
ಮತ್ತೀ ರತ್ನಾಕರದೊಳ್
ಪುತ್ರಿಕೆಯೆನೆ ಬಟ್ಟಿಳಿಂತು ಬಾಟ್ಟುದೆ ಚೋದ್ಯಂ ೩೬

ಶಾಂತಪ್ರಾಸದ ಭೇದಮ
ದಿಂತಕ್ಕುಂ ವರ್ಗದಕ್ಕರಂಗಳ್ ನಾಲ್ಕುಂ
ಸಂತಮಿರೆ ಪೇಟ್ದ ತಾಣದೊ
ಳಂತಕ್ಕುಂ ಪ್ರಾಕ್ತನೋಕ್ತ ವರ್ಗ ಪ್ರಾಸಂ ೩೭

ಸಕಲಜನವಿನುತನಂ ಶತ
ಮಖ ಸದೃಶ ವಿಶಾಲ ವಿವಿಧ ವಿಭವೋದಯನಂ
ಪ್ರಗತ ಗುಣಗಣನನರಿಬಲ
ವಿಘಟನನಂ ಕಂಡನಣುವನಾ ರಾಘನಂ ೩೮

ಇದು ದಲ್‌ವರ್ಗಪ್ರಾಸ
ಕ್ಕುದಾಹೃತಂ ಕುರಿತು ಶಷಸ ವರ್ಣತ್ರಯಮುಂ
ವಿದಿತ ಪ್ರಾಸವಿವಿಕ್ತಾ
ಸ್ಪದದೊಳ್‌ನಿಲೆ ಪೇಟಿಳ್ದೊಡದು ಸಮೀಪ ಪ್ರಾಸಂ ೩೯

ಶಶಧರಬಿಂಬಾನನೆಯಂ
ಝಷಕೇತನ ಕೇತನಾಭತನುತನುವಂ ತಾಂ
ಬಿಸವಿಶದ ವರ್ಣೆಯಂ ಕಂ
ಡೊಸೆದಂ ಬಸದೊಳಗೆ ಜನಕತನಯಳನಣುವಂ ೪೦

ಎಂದಿಂತು ಸಮೀಪ ಪ್ರಾ
ಸಂ ದರ್ಶಿತ ಭೇದಮಾಯ್ತನುಪ್ರಾಸಮುಮಂ
ಸಂಧಿಸಿದೆಣೆಯಕ್ಕರಮೊ
ದೊಂದಟಿಳೊಳಳವಡಿಸಿ ಬಂದೊಡನುಗತಮಕ್ಕುಂ ೪೧

ಜನವಿನುತನನಘನನುಪಮ
ನನುನಯಪರನರಸನಿನಿಸು ನೆನೆನೆನೆದು ಮನೋ
ಜನಿತಮುದನನಿಲತನಯನ
ನನನೃತ ವಚನ ಪ್ರಪಂಚನಿಂತಿರೆ ನುಡಿದಂ ೪೨

ಇಂದಿದನುಪ್ರಾಸಂ ಪಾ
ದಾಂತದೊಳೊಂದಾವುದಾನುಮಿಟ್ಟಕ್ಕರಮಂ
ಮುಂತಣ ಪಾದಾಂತಂಗಳೊ
ಳುಂ ತಡೆಯದೆ ಪೇೞ್ದೊಡಂತದಂತ ಪ್ರಾಸಂ ೪೩

ಅತಿವಿಶದ ಯಶೋವೃತ್ತಂ
ನತಸಕಳಾರಾತಿಜನವಿತಾನಂ ಮತ್ತಂ
ವಿತತ ಶ್ರೀಸಂಪತ್ತಂ
ಶತಮಖ ಸದೃಶಾನುಭಾವನೊಲವಿಂ ಪೆತ್ತಂ ೪೪

ಪ್ರಾಸಾನುಪ್ರಾಸಾಂತ
ಪ್ರಾಸಂಗಳ್ ಮೂಱುಮತಿಶಯಂಗಳ್ಪ್ರಾಸಾ
ಭಾಸಂಗಳುೞಿರಿದ ಮೂಱುಂ
ಭಾಸುರ ನೃಪತುಂಗದೇವ ವಿದಿತ ಕ್ರಮದಿಂ ೪೫

(ಗೀತಿಕೆ)

ಅಱಿದು ಪೀನಂ ಮಾರ್ಗಗತಿಯಂ
ತಱಿ [ಸಲಲಾ]ಗದಾರ್ಗಂ ಬಹು ವಿಕಲ್ಪದೊಳ್
ಕುಱಿತು ಪೂರ್ವಶಾಸ್ತ್ರಪದವಿಧಿಯಂ
ತೆಱ್ತಿದಿರೆ ಪೇೞ್ವೆನಿನಿಸಂ ಕನ್ನಡದೊಳ್ ೪೬

(ಕಂದ)

ಕರ ಚರಣ ಶರೀರ ಶಿರೋ
ದರ ವದನಾದ್ಯವಯವಂಗಳಿವು ತಂತಮ್ಮೊಳ್
ದೊರೆಕೊಂಡೆಡೆಗಳೊಳೊಳವಾ
ಗಿರೆಯುಂ ನರರೊರ್ವರೊರ್ವರಂ ಪೋಲದವೋಲ್ ೪೭

ವರ ಶಬ್ದಾಲಂಕಾರದ
ವಿರಚನೆಗಳ್ ನೋೞ್ಪೊಡೊಂದೆ ತೋರ್ಕೆಗಳಿಂತುಂ
ಪೊರೆದಿರಲೊಂದೊಂದಱೊಳಾ
ಪರಮ ಕವೀಶ ಪ್ರಯೋಗಗತಮಾರ್ಗಂಗಳ್ ೪೮

ಕವಿಗಳುಮನಾದಿಲೋಕೋ
ದ್ಭವರಪ್ಪುದಱಿಂದನಂತ ಗಣನಾನುಗತಂ
ಸವಿಶೇಷೋಕ್ತಿಗಳುಮನಂ
ತ ವಿಧಂಗಳನಂತ ಭೇದವದಱಿಂ ಮಾರ್ಗಂ ೪೯

ಜನಿತ ವಿಭಾಗಂಗಳ್ ವಾ
ಙ್ಮನಸಾತೀತಂಗಳಿಂತು ಮಾರ್ಗೋಕ್ತಿಗಳೊಳ್
ನೆನೆದಱಿ ಪಲಾರ್ಪರಾರದ
ನನಿಶ್ಚಿತ ಕ್ರಮ ವಿಶೇಷ ಗುಣಯುಕ್ತಕಮಂ ೫೦

ಅಂತುಂ ಭೇದಮನಿನಿಸಾ
ರ್ಪಂತುತ್ತರ ದಕ್ಷಿಣೋರು ಮಾರ್ಗದ್ವಯದಾ
ಚಿಂತಿತ ಪುರಾಣ ಕವಿ ವಿದಿ
ತ್ನಾಂತರಮಂ ಪೇೞ್ವೆನಱಿವಮಾಳ್ಕೆಯೊಳೆನ್ನಾ ೫೧

ನಿಗದಿತ ಕಾವ್ಯೋಕ್ತಿಗಳೊಳ್
ನೆಗೞ್ದುವು ಮಾರ್ಗಂಗಳಿಂತುಮೆರುಡುಕ್ತಿಗಳುಂ
ಬಗೆವಾಗಳೆರಡು ಮಾೞ್ಕೆಯೊ
ಳೊಗೆದುವು ವಕ್ರ ಸ್ವಭಾವ ನಿಯತಿಕ್ರಮದಿಂ ೫೨

ಸತತಂ ದಕ್ಷಿಣ ಮಾರ್ಗೋ
ದಿತೋಕ್ತಿಭೇದಕ ಗುಣಂ ಸ್ವಭಾವಾಖ್ಯಾನಂ
ವಿ[ತ]ತೋತ್ತರ ಮಾರ್ಗಗತಂ
ಪ್ರತೀತ ವಕ್ರೋಕ್ತಿಕೃತಮನಲ್ಪವಿಕಲ್ಪಂ ೫೩

ಸಮ ಮಧುರ ನಿಬಿಡ ಕಾಂತ ಸು
ಕುಮಾರ ಸುಸಮಾಹಿತ ಪ್ರಸನ್ನೋದಾರ
ಪ್ರಮಿತ ಗ್ರಾಮ್ಯೋಜಸ್ವಿ
ಕ್ರಮದಿಂ ದಶಭೇದಮಲ್ಲಿ ದಕ್ಷಿಣ ಮಾರ್ಗಂ ೫೪

ಅವಱ ವಿಪರ್ಯಯವೃತ್ತಿ
ಪ್ರವಿಭಕ್ತ ವಿಕಲ್ಪಮಕ್ಕುಮುತ್ತರ ಮಾರ್ಗಂ
ಸವಿಶೇಷ ಗುಣಮನತಿಶಯ
ಧವಳೋಕ್ತಿಕ್ರಮದಿನಱಿಪುವೆಂ ತದ್ಭವದೊಳ್ ೫೫

ಸಮಬಂಧಮೆಂಬುದಕ್ಕುಂ
ಸಮನಿಸಿಸಿ ಕವಿಗೆಡಱ್ ಬಾರ [ದಂದಂಬಟ್ಟಿಂ]
ಸಮೆದ ಪದಪದಾ ವಿಭೇದ
ಕ್ರಮಮೆರಡಕ್ಕುಂ ಮೃದುಸ್ಫುಟೋಕ್ತಿಯಿನದಱಿಂ ೫೬

ಮೃದುತರ ವರ್ಣಾನುಗಮಾ
ಸ್ಪದ ವಿರಚನೆಯೊಳಗೆ ತೋರ್ಪುದದು ಮೃದುಬಂಧಂ
ವಿದಿತ ಸ್ಫುಟಾಕ್ಷರಾಧಿಕ
ಪದವಿರಚಿತಮಪ್ಪುದಕ್ಕುಮಾ ಸ್ಫುಟಬಂಧಂ ೫೭

ದೊರೆಕೊಳೆ ನೋಡಿದನಾಯತ
ಕರುಣಾಪಾಂಗದೊಳೆ ಲೋಲಲೋಚನಯುಗೆಯಂ
ಗುರು ಜಘನ ಪಯೋಧರ ಯುಗ
ಭರ ವಿಧುರೆಯನಾ ಧರಾಧಿಪತಿ ವಿಧುಮುಖಿಯಂ ೫೮

ಇಂತಿದು ಸಮಬಂಧ ದ್ವಿತ
ಯಾಂತರಮಾ ವಿಷಮಬಂಧಮಿನ್ನಿಂತಕ್ಕುಂ
ಚಿಂತೈಕಸುಖಾಕ್ರಾಂತರ್
ಸಂತುಷ್ಟೈಕಾಗ್ರಚಿತ್ತರಾದರ್ ತಮ್ಮೊಳ್ ೫೯

ಸವಿವೊಡೆ ಮಧುರರಸಂಬೋಲ್
ಕವಿಗಿನಿದಾಗಿರ್ಪ ವಚನವಿರಚನೆ ಮಧುರಂ
ಸವಿಳಾಸಾಳಾಪದಿನವ
ರ ವಿಶೇಷ ವಿಶೇಷ್ಯಮಿಂತು ಮಾರ್ಗದ್ವಯದೊಳ್ ೬೦

ದೆಸೆಗಳ್ ವಿಶಾಲಮಾದುವು
ಕೆಸಱಿಂ ಪಿಂಗಿತ್ತು ಧರಣಿ ತಿಳಿದುವು ಕೊಳಗಳ್
ಶ್ವಸನಪಥಮಮಳಮಾಯ್ತಿಂ
ದೊಸೆಗೆಗಳಂ ಬೀಱುವಂತೆ ಶರದಾಗಮದೊಳ್ ೬೧

ಇದು ದಕ್ಷಿಣಮಾರ್ಗವಿಭೇ
ದದ ಮಧುರರಸಪ್ರಯೋಗಮಾಚಾರ್ಯಮನೋ
ಮುದಿತವಿತಾನಂ ವಿದಿತಾ
ಸ್ವದಮುತ್ತರಮಾರ್ಗವರ್ಗಮಧುರಾಳಾಪಂ ೬೨

ಧವಳ ಜಳಧರ ಕುಳಾಕುಳ
ಮವಿಕಳಮಂಬರತಳಂ ವಿನೀಳಚ್ಛಾಯಂ
ಕುವಳಯಕೀರ್ತಿಗೆ ಶಾರದ
ಮವಧಾರಿತಮಾಯ್ತದೆಂಬುದುತ್ತರಮಾರ್ಗಂ ೬೩

ಮಿಗೆ ನಿಬಿಡಬಂಧಮೆಂಬುದು
ತಗುಳ್ವುವು ವರ್ಣಂಗಳಗಲದಿರೆ ಮತ್ತಕ್ಕುಂ
ನೆಗಟ್ದಿಲ್ಪಪ್ರಾಣಾಕ್ಷರ
ನಿಗದಿತಮೇತದ್ವಿಪರ್ಯಯೋಕ್ತಂ ಶಿಥಿಲಂ ೬೪

ಅರವಿಂದೋತ್ಪಲಪುಷ್ಪೋ
ತ್ಕರಂಗಳೊಳ್ ಪಾಯ್ಗುಮುದ್ಭ್ರಮದ್ಭ್ರಮರಂಗಳ್
ವಿರತಮುದವಾದುವುರುಮದ
ವಿರಾಮವನಕರಿಕಪೋಲಫಲಕದೊಳಾಗಳ್ ೬೫

ಇದು ನಿಬಿಡ ಶಿಥಿಲಬಂಧಾ
ಸ್ಪದ ಮಾರ್ಗದ್ವಿತಯಗದಿತ ಲಕ್ಷ್ಯವಿಭಾಗಂ
ಸದಭಿಕಮನೀಯಗುಣಮ
ಪ್ಪುದು ನಿಯತಂ ಕಾಂತಮೆಂಬುದಭಿಗೀತಾರ್ಥಂ ೬೬

ದಿನಕರ ಕರನಿಕರಂಗಳ್
ಘನವಿವರ ಪ್ರಸರಮಾಗಿಯುಂ ತಮ್ಮಂ ಕಂ
ಡನಿತಱೊಳೆ ತೆರಳ್ದನ್ನಾ
ಮನೋಗತಧ್ವಾಂತಬಂಧಮಳಱಿತ್ತೆಲ್ಲಂ ೬೭

ಇಂತಿದು ದಕ್ಷಿಣ ಮಾರ್ಗದ
ಕಾಂತಮಸಂಭಾವಿತಾರ್ಥಮುದ್ದಾಮೋಕ್ತಂ
ಸಂತತಮುತ್ತರ ಮಾರ್ಗಗ
ತಾಂತರಮದನಿಂತು ಕುಱುತು ತಱಿಸಲ್ಗೆ ಬುಧರ್ ೬೮

ವಿಲಸಿತ ಭವದಭ್ಯಾಗಮ
ಜಲಧಾರೆಗಳೇನುಮುಟಿಯದಂತು ಮದಂತ
ರ್ಮಲಮಂ ಕರ್ಚಿದೊಡಾನೀ
ನೆಲಕೆಲ್ಲಂ ಪಾವನೀಯ ಚರಿತನೆನಾದೆಂ ೬೯

ಸುಕುಮಾರತರಾಕ್ಷರಪದ
ನಿಕರ ವಿಶಿಷ್ಟಪ್ರಯೋಗಗತಮಪ್ಪುದದಾ
ಸುಕುಮಾರಮೆಂಬುದಕ್ಕುಂ
ಪ್ರಕಟಿತಮದಱಾ ಪ್ರಯೋಗಮೀ ತೆಱನಕ್ಕುಂ ೭೦

ತೊಳಪೆಳವೆಱೆಯಂ ಮೊರೆವಳಿ
ಕುಳಂಗಳುಂ ಮೆಲ್ಲನೆನಪ ಮಳಯಾನಿಳನುಂ
ಮುಳಿಸಂ ಕಟಿಲ್ಚಿ ಕಳೆದುವು
ಕಳಿಕಾಂಕುರ ಚೂತತತಿಗಳುಂ ಕಾಮಿಗಳಾ ೭೧

ಇದಱ ವಿಪರ್ಯಯ ವಿವಿಧಾ
ಸ್ಪದಾಕ್ಷರ ವಿಕಲ್ಪಮಿಂತಿದುತ್ತರ ಮಾರ್ಗಂ
ತ್ರಿದಶಾಧೀಶ್ವರಭೂತ್ಯ
ತ್ಯುದಾರ ವಿವಿಧಾರ್ಥವಿಭವನೀ ಭೂಪೇಂದ್ರಂ ೭೨

ಒಂದಱ ಮಾತುಗಳಂ ಪೆಱ
ತೊಂದಱೊಳಱೆದಿಟ್ಟು ಕೊಡೆ ಪೇೞ್ದೊಡದಕ್ಕುಂ
ಸುಂದರತರಂ ಸಮಾಹಿತ
ಮೆಂದುಂ ಮತ್ತದಱ ಲಕ್ಷ್ಯಮೀ ತೆಱನಕ್ಕುಂ ೭೩

ವಿನಿಮೀಳಿತ ಕುಮುದವನಂ
ಜನಿತೋನ್ಮೀಲಾರವಿಂದವನಲಕ್ಷ್ಮೀಶಂ
ದಿನಕರನುದಯಂಗೆಯ್ದಂ
ವಿನಿಹತತಿಮಿರಂ ವಿಶಿಷ್ಟ ಸಂಧ್ಯಾಶ್ಲೇಷಂ ೭೪

ವಿನಿಮೀಳಾದಿಗಳಿವು ಲೋ
ಚನಾದಿ ಧರ್ಮಂಗಳಿವನೆ ಕುಮುದಾದಿಗಳೊಳ್
ನೆನೆದಿಂತು ಪೇೞ್ದೊಡಕ್ಕುಂ
ವಿನಿಶ್ಚಿತ ಕ್ರಮ ಸಮಾಹಿತಾಲಂಕಾರಂ ೭೫

ವಿನಿಹತ ಸಮಸ್ತರಿಪುಕುಳ
ನನಿಮಿಷಲೋಚನದೆ ನೋಡಿ ನೀಡುಂ ಪ್ರಿಯೆಯಂ
ವಿನಿಮೀಳಿತಲೋಚನೆಯಂ
ಜನಪತಿ ನಿಜಬಾಹುಯುಗದಿನಾಶ್ಲೇಷಿಸಿದಂ ೭೬

ಈ ಕುಱಿಪುಗಳಿಂದಱಿವುದ
ನೇಕ ಸಮಾಹಿತ ಪದ ಪ್ರಯೋಗಾಂತರಮಂ
ಲೋಕಪ್ರತೀತ ಸುಭಗ ವಿ
ವೇಕಾಳಾಪಂ ಪ್ರಸನ್ನಮದುಮಿಂತಕ್ಕುಂ ೭೭

ಶರದಮಲಾಂಬರದೊಳ್ ಹಿಮ
ಕರನೆಸೆದತ್ತೆಂಬುದಾ ಪ್ರಸನ್ನಮಿದಕ್ಕುಂ
ಕರಮೊಪ್ಪಿತ್ತುಷ್ಣೇತರ
ಕಿರಣಂ ವರ್ಷಾಂತಸಮಯ ಜಳಧರಫಥದೊಳ್ ೭೮

ಮಿಗೆ ವಸ್ತುಗತ ಸ್ಥಿತಿಯಂ
ಬಗೆದಗ್ಗಳಮಾಗೆ ಪೇೞ್ದೊಡಕ್ಕುಮುದಾರಂ
ಬಗೆವೊಡೆ ಕಾವ್ಯದ ಪದವಿಯ
ನೆಗೞ್ತೆಗದು ಮೂಲಮದಱ ಪಾಂಗಿಂತಕ್ಕುಂ ೭೯

ಪುರುಷೋತ್ತಮರಾರ್ ನಿನ್ನ
ನ್ನರುದಾ[ರರ] ರಾತಿಸಮಿತಿಯಂ ಕೊಂದಿರ್ದುಂ
ಸುರಸುಂದರಿ ಲೀಲಾಲಸ
ಪರಿರಂಭಾರಂಭ ಸುರತ ಸುಖದೊಳ್ನಿಱಿಪರ್ ೮೦

ಇದು ದಾಕ್ಷಿಣಾತ್ಯ ಕವಿಮಾ
ರ್ಗದುದಾರಮುದೀಚ್ಯರುರು ವಿಶೇಷಣಯುತಮ
ಪ್ಪುದನೊಲ್ವರಿಂತು ಹೇಮಾಂ
ಗದ ಲೀಲಾಂಬುಜ ವಿಚಿತ್ರ ಚಿತ್ರಾಧಿಕಮಂ ೮೧

ಗೋಪಾಳ ಬಾಳ ಲಲನಾ
ಚಾಪಳ ವಾಚಾಳ ಕಿತವ ಬಾಹ್ಲೀಕಾದಿ
ವ್ಯಾಪಾರಂಗಳ್ ಗ್ರಾಮ್ಯಾ
ಳಾಪಂಗಳ್ ಮಾರ್ಗಯುಗಳ ಪರಿಹಾರ್ಯಂಗಳ್ ೮೨

ನೆನೆದಿರುಳುಂ ಪಗಲುಂ ನಿ
ನ್ನನೆ ಪೀನಮೊಱಲ್ದು ಮಱುಗಿ ಕಾತರಿಸುತ್ತುಂ
ಮನದೊಳ್ ಸ್ಯೆರಿಸಲಾಱೆಂ
ನಿನಗೆನಸುಂ ಕರುಣಮಿಲ್ಲ ಮರವಾನಿಸನಯ್ ೮೩

ಎಂದಿಂತೀ ಗ್ರಾಮ್ಯೋಕ್ತಿಯೊ
ಳೊಂದಾಗಿಸದದನೆ ಪೇೞ್ವುದಿಂತೀಸ್ಥಿತಿಯೊಳ್
ಕಂದರ್ಪಂ ಚಲದೆನ್ನೊಳ್
ನಿಂದಂ ಮುನಿಸಿಲ್ಲ ನಿನ್ನೊಳಾತಂಗಿನಿಸುಂ ೮೪

ಸಮಱುಸಮಾಸ ಪದಂಗಳ
ನಮರ್ದಿರೆ ಸಯ್ತಾಗಿ ಬಗೆದು ಪೇೞ್ದೊಡದಕ್ಕುಂ
ಕ್ರಮದೋಜೋಲಕ್ಷಣಮು
ತ್ತಮಮಿದು ಗದ್ಯಕ್ಕಲಂಕ್ರಿಯಾನುಸಮೇತಂ ೮೫

ಮಿಗೆ ಪದ್ಯದೊಳಂ ಗುಣಮಂ
ತಗುಳ್ಚುಗುಂ ಸಮಹಿತ ಪ್ರಯೋಗಾನುಗತಂ
ಸೊಗಯಿಸುವಂತಿರೆ ಬಗೆದಿದ
ನಗಾಧಮನರಿಡುಗೆ ಕೃತಿಯೊಳೋಜೋಗುಣಮಂ ೮೬

ಕಾರಕಮಂ ಕ್ರಿಯೆಯುಮನಜೆ
ದೋರಂತಿರೆ ಮುಂ ತಗುಳ್ಚಿ ಮುಕ್ತಕ ಪದದೊಳ್
ಸಾರಂ ಸಮಾಸಪದದು
ಚ್ಚಾರಣೆಯಂ ನೀಳ್ದು ನಿಲೆ ತಗುಳ್ಚುಗೆ ಕೃತಿಯೊಳ್ ೮೭

ಮೊದಲೊಳ್ ಸಮಾಸಪದಮುಮ
ನೊದವಿಸಿ ಪೇೞ್ದದಱ ತುದಿಯೊಳಸಮಾಸ ಪದಾ
ಸ್ಪದಮಾಗಿ ನಿಜೆಸೆ ಕರ್ವ್ವಿನ
ತುದಿಯಂತಿರೆ ವಿರಸಮಕ್ಕುಮದು ತೊದಳುಂಟೇ ೮೮

ಪರಮಾನುಭಾವ ಭಾಸುರ
ಸುರರಾಜೋಪಮಿತ ವಿವಿಧ ವಿಭವೋದಯನಂ
ನರಪತಿಯಂ ಕಪಿಪೃತನಾ
ಪರಿವೃತನಂ ಜಲಧಿತಟದೊಳಣುವಂ ಕಂಡಂ ೮೯

ಎಂದಿಂತು ಪೇೞ್ದ ಮಾಟ್ಕೆಯೊ
ಳೊಂದುವುದೋಜಸ್ವಿತಾ ಗುಣಂ ಕೈಕೊಳೆಯುಂ
ಸುಂದರಮಾಗದು ಕವಿಪದ
ಮೆಂದುಂ ವ್ಯತ್ಯಯದಿನಿಡುವೊಡದು ಸುಕರತರಂ ೯೦

ನರಪತಿಯಂ ಕಪಿಪೃತನಾ
ಪರಿವೃತನಂ ಜಳಧಿತಟದೊಳಣುವಂ ಕಂಡಂ
ಪರಮಾನುಭಾವ ಭಾಸುರ
ಸುರರಾಜೋಪಮಿತ ವಿವಿಧ ವಿಭವೋದಯನಂ ೯೧

ಬೆರಸಿರೆ ಸಮಾಸದೊಳ್ ಬಂ
ಧುರಮಾಗದು ಕಾವ್ಯಬಂಧಮೆಂದುಂ ಕೃತಿಯೊಳ್
ದೊರೆಕೊಳ್ವ ಪದವಿಶೇಷ್ಯಾಂ
ತರಮದಱಿಂ ವ್ಯಸ್ತಮಾಗಿ ಪೇೞ್ಗಿದನೆಂದುಂ ೯೨

ಪರಿದೆಯ್ದಿ ತಾಗಿದಂ ಬಾ
ಸುರತರ ರಘುಕುಲಲಲಾಮ ಲಕ್ಷ್ಮೀಧರನೊಳ್
ಪರಿಕೋಪವಿಧೃತ ವಿಸ್ಫುರ
ದುರುರಕ್ತ ಕಠೋರ ನಯನಯುತ ದಶವದನಂ ೯೩

ಇಂತು ವಿಶೇಷ್ಯಂ ಕ್ರಿಯೆಯಂ
ಸಂತಂ ನೋೞ್ಪುದಱಿನಕ್ಕುಮದು ಸಾಪೇಕ್ಷಂ
ಚಿಂತಿಸೆ ಸಮಾಸಮಂ ಪೇ
ೞ್ವಂತಪ್ಪ ಪದಂ ಸಮರ್ಥಮಲ್ತಪ್ಪುದಱಿಂ ೯೪

ಸಮನಿಸೆ ಸಾಪೇಕ್ಷಮುಮಾ
ಸಮಾಸಮುಂ ಪೆಱುಗುಮೆಲ್ಲಿಯಾನುಂ ಗಮಕಂ
ಕ್ರಮಮದಱೊಳೆಲ್ಲಮೆನಲಿನಿ
ತು ಮಾರ್ಗದೊಳ್ ಸಮಱುಗಿಂತು ಕವಿವೃಷಭರ್ಕಳ್ ೯೫

ಪರಿದೆಯ್ದಿ ತಾಗಿದಂ ಭಾ
ಸುರತರ ರಘುಕುಲಲಲಾಮನೊಳ್ ಲಕ್ಷ್ಮಣನೊಳ್
ಪರಿಕೋಪವಶಭ್ರಮಣೋ
ದ್ಧುರ ರಕ್ತಕಠೋರಲೋಚನಂ ದಶವದನಂ ೯೬

ಇಂತಿರೆ ಮಾರ್ಗದ್ವಿತಯಗ
ತಾಂತರಮಂ ಪೇೞ್ದೆನೆಲ್ಲಿಯುಂ ಕ್ಷೀರಗುಡಾ
ದ್ಯಂತರರಸಾಂತರಂ ಜಾ
ತ್ಯಂತರಮಪ್ಪಂತನಂತಮಂತರ್ಭೇದಂ ೯೭

(ಗೀತಿಕೆ)

ಬಗೆದು ಮಾರ್ಗದ್ವಿತಯಗತಿಗಳಂ
ಪ್ರಗುಣಗುಣಗಣೋದಯರ್ಕಳ್ ವಿತರ್ಕದಿಂ
ಸೊಗಯಿಸುವಂತು ವಚನರಚನೆಯಿಂ
ನೆಗೞ್ದಿರೆ ಬೆರಸಿ ಪೇೞ್ಗೆ ರಸವಿಶೇಷದೊಳ್ ೯೮

(ವೃತ್ತ)

ವೀರರಸಂ ಸ್ಫುಟೋಕ್ತಿಯಿನುದಾರತಮಂ ಕರುಣಾರಸಂ ಮೃದೂ
ಚ್ಚಾರಣೆಯಿಂದಮದ್ಭುತರಸಂ ನಿಬಿಡೋಕ್ತಿಗಳಿಂದಮಲ್ತೆ ಶೃಂ
ಗಾರರಸಂ ಸಮಂತು ಸುಕುಮಾರತರೋಕ್ತಿಗಳಿಂ ಪ್ರಸನ್ನಗಂ
ಭೀರತರೋಕ್ತಿಯಿಂ ಪ್ರಕಟಮಕ್ಕೆ ರಸಂ ಸತತಂ ಪ್ರಶಾಂತ[ದಾ]ಂ ೯೯

ಉತ್ಸವದಿಂದೆ ಹಾಸ್ಯರಸಮಾ ಮಧುರೋಕ್ತಿಗಳಿಂದಮಲ್ತೆ ಭೀ
ಭತ್ಸರಸಾಂತರಂ ಶಿಥಿಲಬಂಧನದಿಂ ಸತತಂ ಭಯಾನಕೋ
ದ್ಯತ್ಸುರಸಂ ಕರಂ ವಿಷಮಬಂಧನದಿಂ ನೃಪತುಂಗದೇವ ಮಾ
ರ್ಗೋತ್ಸವಮೂರ್ಜಿತೋಕ್ತಿಗಳಿನಕ್ಕತಿರೌದ್ರರಸಂ ರಸಾವಹಂ ೧೦೦

ಮಾತುಗಳಾವುವಾನುಮುಪವರ್ಣಿತ ಮಾರ್ಗಯುತಪ್ರಯೋಗ ಸಂ
ಜಾತವಿಭಾಗದಿಂ ನೆಗೞ್ದಿ ಕನ್ನಡದೊಳ್ ಗುಣಮಂ ತಗುಳ್ಚುಗುಂ
ನೀತಿನಿರಂತರಾನುಗತ ವೃತ್ತಿವಿಕಲ್ಪಿತಮಂ ತದೀಯ ನಿ
ರ್ಣೀತಿಯನೀತೆಱತ್ತು ತಱಿಸಲ್ಗೆ ಬುಧೋತ್ತಮರುಕ್ತಿಪೂರ್ವಕಂ ೧೦೧

ನೋಡುವೆನಾ ಮಹೀಪತಿಯನರ್ಥಿಗಣಾರ್ಥಿತ ಕಲ್ಪವೃಕ್ಷನಂ
ಬೇಡುವೆನರ್ಥಸಂಚಯಮನೆಂಬುದಿದುತ್ತರ ಮಾರ್ಗವಾಚಕಂ
ನೀಡುಮುದಾತ್ತಚಾರುಗುಣನಂ ಮನದೊಳ್ ನೆಱೆನೋಟ್ಪೆನಟ್ಟಿಯೊಳ್
ಕೂಡಿರವೇಟ್ಪೆನೆಂಬುದಿದು ದಕ್ಷಿಣಮಾರ್ಗವಿಚಕ್ಷಣೋದಿತಂ ೧೦೨

ಸೂಡುವೆನೆಂಬುದಲ್ಲದಣಮಾಗದು ಸೂಟ್ಪೆನಮೋಘಮೆಂಬುದುಂ
ಕೂಡುವೆನೆಂ [ಗ] ಬುದಲ್ಲದಿನಿಸಾವುದುಮಾಗದು ಕೂಟ್ಪೆನೆಂಬುದುಂ
ಕಾಡುವೆನೆಂಬುದಲ್ಲದೆ ಸುಮಾರ್ಗದೊಳಾಗದು ಕಾಟ್ಪೆನೆಂಬುದುಂ
ತೋಡುವೆನೆಂಬುದಲ್ಲದಿಡಲಾಗದು ನಿಕ್ಕುವ ತೋಟ್ಪೆನೆಂಬುದಂ ೧೦೩

ಬರಿಸುವೆನಿಂದು ನಂದನವನಾಂತರದಲ್ಲಿಗೆ ಕಾಂತನಂ ಸಮಂ
ತಿರಿಸುವೆನಂತನಂ[ಗ] ಸುಖಸಂಗತ ಮಂಗಳಕಾರಣಂಗಳಂ
ತರಿಸುವೆನಾಂ ಮನೋನಯನವಲ್ಲಭನೊಳ್ ಮನದೊಂದಲಂಪಿನಿಂ
ನೆರೆವೆನಮೋಘಮೆಂಬುದಿದು ದಕ್ಷಿಣಮಾರ್ಗವಿಶೇಷಭಾಷಿತಂ ೧೦೪

ಬರಿಪೆನಮೋಘಮಿಂದುಪವನಾಂತರದಲ್ಲಿಗೆ ನಲ್ಲನಂ ತಗು
ಳ್ದಿರಿಪೆನನಾರತಂ ಸುರತರಾಗನಿರೂಪಣ ಕಾರಣಂಗಳಂ
ತರಿಪೆನನಾಕುಳಂ ಮನದಲಂಪಿನೊಳಾ ಮದನೋಪಮಾನನೊಳ್
ನೆರೆವೆನಭಂಗದೆಂಬ ವಚನಂಗಳಿವುತ್ತರಮಾರ್ಗವರ್ತಿಗಳ್ ೧೦೫

ಅನುಪಮನಂ ಬರಿಪ್ಪೆನನುರಾಗದೆ ನಲ್ಲನನಿಂದು ಮಿಕ್ಕ ನಂ
ದನವನದಲ್ಲಿಗಲ್ಲಿಗೆ ತರಿಪ್ಪೆನನಂಗ ಸುಖೋಚಿತಂಗಳಾ
ನನುನಯದಿಂದಿರಿಪ್ಪೆನಿನಿತುಂ ಸುರತಾಸವಸೇವನಾ ಸನಾ
ತನಸುಖದಿಂದಿರಿಪ್ಪೆನನುರಾಗದಿನೆಂಬುದಿದುತ್ತರೋತ್ತರಂ ೧೦೬

ಪರಸುವೆನೆನ್ನದಾಂ ಪರಪೆನೆಂಬುದಿದಾಗದು ಚಿತ್ತನಾಥನೊಳ್
ಬೆರಸುವನೆನ್ನದಾಂ ಬೆರಪೆನೆಂಬುದಿದಾಗದು ಮಾರ್ಗಯುಗ್ಮದೊಳ್
ನಿರತಿಶಯಾನುಭಾವಭವನಪ್ಪ ಮಹಾನೃಪತುಂಗ ದೇವನಾ
ದರದೊಳೆ ಪೇಟ್ದಿ ಮಾರ್ಗಗತಿಯಿಂ ತಱಿಸಲ್ಗಿದನಿಂತೆ ಕಬ್ಬಿಗರ್ ೧೦೭

ಮನದೊಳಗಾಗಳುಂ ನಿಜೆಸದಾ ಮುಳಿಸಂ ಗತರಾಗ ಮೋಹನೊ
ಯ್ಯನೆ ಮುನಿನಾಥನೆಂಬ ವಚನಾಂತರಮಿಂತಿದು ದಾಕ್ಷಿಣಾತ್ಯಕಂ
ಮನದೊಳಗಾಗಳುಂ ನಿಜೆಸದೊಯ್ಯನೆ ಮೋಹಮನಂತೆ ರಾಗಮಂ
ಮುನಿಸುಮನೊಲ್ಲದಂ ಮುನಿಪನೆಂಬುದಿದಕ್ಕುಮುದೀಚ್ಯವಾಚಕಂ ೧೦೮

ತ್ರಿದಶಗಣೇಶಮೌಳಿಮಣಿಪೀಠನಿಷೇವಿಗಳೊಳ್ ಮುನೀಂದ್ರನಾ
ಪದಯುಗಳಂಗಳೊಳ್ ಮುದದೆ ಬಾಗುವೆನೆಂಬುದು ದಕ್ಷಿಣಾಯನಂ
ವಿದಿತಸುರಾಧಿರಾಜಮಕುಟಾಗ್ರ ಸಮರ್ಪಿತದೊಳ್ ಮುನೀಂದ್ರನಾ
ಪದಯುಗದೊಳ್ ಮನೋಮುದದೆ ಬಾಗುನೆನೆಂಬುದಿದುತ್ತರಾಯಣಂ ೧೦೯

ವಿಳಸಿತ ಸಸ್ಯಸಂಪದಭಿರಾಮಗುಣೋದಯೆ ತಾಳ್ದಿದಳ್ ಧರಾ
ಲಳನೆ ವಿಶಾಲಲಕ್ಷ್ಮಿಯನನಾರತಮೆಂಬುದು ದಕ್ಷಿಣಾಪಥಂ
ಜಳನಿಧಿಮೇಖಲಾವಲಯಿತಾಂಗಿ ಕರಂ ಸೊಗಯಿಪ್ಪುದಾಯ್ತು ಭೂ
ಲಳನೆ ವಿಶಾಲಲಕ್ಷ್ಮಿಯನನಾಕುಳಮೆಂಬುದಿದುತ್ತರಾಪಥಂ ೧೧೦

(ಗೀತಿಕೆ)

ನಿಕ್ಕುವಮಿಂತು ಮಾರ್ಗಯುಗದೊಳ್
ತಕ್ಕುದನಱಿಯೆ ಪೇೞ್ದೆನಿನಿಸೊಂದುದ್ದೇಶಮಂ
ಮಿಕ್ಕ ಗುಣೋದಯರ್ ಕಳೆಯದೆಂತು ಸ
ಯ್ತುಕ್ಕುಮಂತಾಗೆ ಬಗೆದು ಪೇೞ್ಗೆ ಕಬ್ಬದೊಳ್ ೧೧೧

(ಶ್ಲೋಕ)

(ಗೋಮೂತ್ರಿಕಂ) ಸಯಮಕಂ ಪ್ರೇಮದಿಂ ಗೋಪಿತಕ್ರಿಯಂ
ಶ್ರೀಮದರ್ಧಭ್ರಮಂ ಚಕ್ರನಾಮಂ ಮುರಜಬಂಧಕಂ ೧೧೨

ಇವು ದುಷ್ಕರ ಕಾವ್ಯಂಗಳ್ ಸವಿಶೇಷವರ್ತಿಗಳ್
ಸುವಿಚಾರಿತಮೀ ತೋರ್ಪೆ[ನಿ]ವಱ ಲಕ್ಷ್ಯಭೇದಮಂ ೧೧೩

ಪದಪಾದ ಸಮಸ್ತಾರ್ಧ [ಗತ]ಭೇದ ಚತುಷ್ಟಯಂ
ವಿದಿತಾಳಂಕ್ರಿಯಾಧಾರಂ ಮೊದಲ್ ಪೇ[ೞ್ವೆಡೆ]ದುಷ್ಕರಂ ೧೧೪

ಮುನ್ನಂ ತನ್ನಂ ತಾನೆ ತಾನೇಕೆನ್ನಂ ಕೆನ್ನಂ ನಿರಂತರಂ
ಭಿನ್ನಂ ಬಂದಿಪ್ಪನಂತಿನ್ನುಂ ತನ್ನಿಂ ತನಗಮೇವಳೊ ೧೧೫

ಪೀನಂ ಕಾಡು ಮದಕ್ಕೇಂ ಕೇಳನಮಾನಳಿನಂ ಮದಾ
ತಾನಿಂತಳಿಜನಂ ಕನಾ...ನದೆಸನೆದೇನನಾ ೧೧೬

ನಾದಭೇದನನಾದಾನಾ ನಾದಾನಾಮದನೋದನಾ
ನಾದನೋದಮನಾದಾನಾ ನಾದಾನಾನದಭೇದನಾ ೧೧೭

ನಾನಮಾನಮಸೇನಾಸೇ ಸೇನಾಸೇಮನ [ಮಾನನಾ]
ದೀನಮಾನ ಮನಾನಾದೀ ದೀನಾನಾಮನಮಾನದೀ ೧೧೮

ಗತಪ್ರತ್ಯಾಗತೋಪಾತ್ತ ಚತುಷ್ಟಯವಿಕಲ್ಪಮೀ
ಪ್ರತೀತಿ ತೋರ್ಪೆನಾ ಗೂಢಚತುರ್ಥಂಗಳ ಲಕ್ಷ್ಯಮಂ ೧೧೯

ಘನಸ್ತನಿತಮುಂ ಕೇಕಿಸ್ವನಮುಂ ನೀರಧಾರೆಯುಂ
ಮನಂ ಬೆರ್ಚಿರ್ಕುಮಿಂತೆತ್ತಂ ಘನಮಿಂತು ಘನಸ್ತನಿ
(ಗೂಢಚತುರ್ಥಂ) ೧೨೦

ನಿನ್ನಿಂ ನಿಂನ್ನನೆನೆಂನಿನಾ ನಾನಾನನನಂ ನನನಂ
ನೀನೆಂನನ್ನಂನನಾನಾ ನಿಂನೆನೆನನನೂನನಂ ೧೨೧

ಮಾನಿನಿ ಮುನ್ನಮಾಂ ನೀನೆ ನೀನಾನಿನ್ನನುಮಾನಮೇಂ
ಮಾನಮಾನಾನೆ ಮುಂ ನಂನ್ನೈಮಾನಮಾನನಮುಂ ನಿಂನಾ
(ಇವು ಏಕಾಕ್ಷರದ್ವ್ಯಕ್ಷರಂಗಳ್) ೧೨೨

ಕಿಡಿಪಂ ಬಾರಗೇಮೆಯ್ಯಂ ಕಿಡಿಪಂ ಕಿಡಿಪಂತೆ ಮುಂ
ಕಿಡಪಂ ಪೋಕುಮೇ ತಾಮುಂ ಕಿಡಿಸಲ್ಳುಡಿಸೋಲಮೇ ೧೨೩

ಮಾರುತೀ ಪರಮೋದಾರದಾರನೊಳ್ ಕೂಡು ನಲ್ಲನೊಳ್
ಸಾರ ಕಾದಂಬಿನೀನಾಥನಾರೂಢ ಗುಣಧಾಮನೊಳ್
(ಅತಾಲವ್ಯಂ) ೧೨೪

ನರನಾಯಕನಂ ನಿಂದಾನಿರದೀಗಳೆ ಕಾಂತನಂ
ನೆರೆದೇನದಱಿಂದಿಲ್ಲಾ ನೆರೆದಿರ್ದಾಗೆನಾಗೆನೆ
(ನಿರೋಷ್ಠ್ಯಂ) ೧೨೫

ದೀನಾದೀನಾನಾದಿನಾದೀನಾನಿಂನಾನೇನೆನಾನಿನಾ
ದೀನಾದಾನಿದಾನಾದೀನಾನೆನಿಂನನನಿಂನನಾ
(ಸರ್ವತೋಭದ್ರ) ೧೨೬

ಪೆಱ(ನಾ)ವಂ ಧರಾಚಕ್ರಕ್ಕೆಱೆಯಂ ಕೆಳೆಯಪ್ಪವಂ
ನೆಱಿಯಾರೆಣೆಯೆಂಬನ್ನಂ ಕುಱಿತಬ್ಧಿಗೆ ಬನ್ನಮಂ
(ನಿರುತ್ತರಂ) ೧೨೭

ಜಲದಾಗಮದಿಂ ಚಿತ್ತಸ್ಖಲಿತಂ ಕೇಕಿನರ್ತನಂ
ಜಲದಾಗಮದಿಂ ಚಿತ್ತಸ್ಖಲಿತಂ ಕೇಳನಲ್ಲನಂ
(ಗೋಮೂತ್ರಿಕೆ) ೧೨೮

ಯಮಕಂ [ಪಾದ]ಪಾದಾರ್ಧ ಸಮಶ್ಲೋಕ[ಸು]ಗೋಚರಂ
ಪ್ರಮಿತಾದ್ಯಂತ[ಮಧ್ಯೋ] ಪಕ್ರಮಾನೇಕ ಪ್ರಕಲ್ಪಿತಂ ೧೨೯

ತಾರಾ ಜಾನಕಿಯಂ ಪೋಗಿ ತಾರಾ ತರಳನೇತ್ರೆಯಂ
ತಾರಾಧಿಪತಿತೇಜಸ್ವಿ ತಾರಾದಿವಿಜಯೋದಯಾ ೧೩೦

ಕಱೆ ಪಂ ತಂದು ನಿಂಕಮಿಂ ಕಱಿಇಪಂ ಕಳಿವಂ ಚಲ
ಕಱಿಪಂ ಕಂಜನೇತ್ರ....ಕಱೆ ಪಂ ಬಱಿಕಾತನಂ ೧೩೧

ದಾರುದಾರುಣನಂ ದಾನವಾರಿವಾರಿತಲೋಕನಂ
ಬಾರ ಬಾ ರಣಮಂ ನೋಡಾ ಸಾರಸಾರಾಂಬುದಾಭಮಂ ೧೩೨

ಸಾರಾಸಾರಸನಾದಾಮಸಾರಸಾರಾ ನಿತಂಬೆಯಂ
ತಾರಾತಾರಾತರಂಗಾಭಾಕಾರತಾ ರಮಣೀಯೆಯಂ ೧೩೩

ಅಜೇಯಂ ಪೋಲ್ಕುಮಾ ಮತ್ತಗಜಂ ವಾರಿಜನಾಭನಂ
ತ್ರಿಜಗ[ನ್ಮ]ದನಂ ಮತ್ತಂ ನಿಜನೀಳಘನಾಭನಂ ೧೩೪

ಲೋಕವೈದಿಕ ಸಾಮ್ಯೈಕ ಲೋಕನಾಕಾರಕಾರಕಾ
ನಾಕಿ ನೂತಪದವ್ಯಕ್ತಿ ಶ್ರೀಕಾಂತಾ ಮಮಕಾಮದಾ ೧೩೫

ವಾರಿ ವಾರಿಯೊಳಾದಾನಂ ವಾರಿವಾರಿ ವಿತರ್ಕಮಂ
ವಾರಿವಾರಿ ಜವೋದಾನಂ ವಾರಿವಾರಿಜನಾಭನೋಳ್ ೧೩೬

(ಗೀತಿಕೆ)

ವರವಾರನಾರಿನೊಳ್ ನೆರೆದೆನಾನೆಲ್ಲಿ ನೆ[ರೆ]ದೆ
ಪರವಾರನಾರಿಯೊಳ್ ನೆರೆದೆನಾನೆಲ್ಲಿ ನೀಂ
ಪರದ[ರಂ]ತರಿಸುವರಿಂತರಿಯ ನೆಲ್ಲಂ
ಪುರಿದು ಮಾಱದೆ ಕಾಣದಂತಿರಿಸಂಗಡಿಯೊಳ್
(ಯಮಕಂ) ೧೩೭

ತಿಳಿಗೊಳನಂ ಪೂಗೊಳನನದಂ ನೆಗೞ್
ಮುಳಿದುಕೊಳ್ವ ಬಳಸೆ ನಾನದಂ ನೆ
ಗಳೆ ತಾನೆಡೆಮನಂಗಜನೆದಪ್ಪಲಾ
ಗಳೆ ನಂಬವನದೊಪ್ಪುವಂ ವನೇಚರಮದಾ ೧೩೮
(ಶ್ಲೋಕ)

ನರದಾನಪರೊನೆಂನೆ ನರದಾ ಕೆನರಾಕಮಾ
ಅರಿದೈತಂದಾದರಿಕ್ಕುಂ ಪರಿದಾನ ಪರಾದಿಯೆ ?
(ಅರ್ಧಭ್ರಮಣಂ) ೧೩೯

ವರದಾನ ಪರಾದನ್ಯಂ ಪರದಾನಪರಾದಮಂ
ನೆರದಾವದಿರಾಜನ್ಯಂ ಪರಿಜನಪರಾದಮಂ
(ಮುರಜಬಂಧಂ) ೧೪೦

ಅರಸಿಯ ದಿವ್ಯಸೇ [ವಾ]ದರದಿರದೀಗಡೆ ನಿ
ನ್ನರಸಿಯನೆಯ್ದುವಿನಂ ಪರಿಜನಮಂ ಕಳಿಪಿಂ
(ಕ್ರಿಯಾಗೋಪಕ) ೧೪೧

(ವೃತ್ತ)

ಸಂತಂ ಬಾಳ್ವುದು ಮೀಱಿದಾ ನರಪನೊಳ್ ಸೌಜನ್ಯಲಕ್ಷ್ಮೀಮದಾಂ
ಧಂ ತನ್ನಿಶ್ಚಯ ಮೆಚ್ಚಿನೀಂ ಪರಗುಣೌದಾರ್ಯಾಭಿಮಾನಂಗಳಿಂ
ಪಿಂತಂ ನೋಡದೆ ಪಾಟಿಗೆಟ್ಟಟಿ ಬಾಟ್ವಂತೆ ಬಾಟ್ದಿಯ್ಯನಾ
ಸಂತಂ ತಾಂ ಪಸತಂದನಟ್ಟಿಪೆಟಿಗುಂ ದಾನಂಗಳಂ ಭೂಪನಾ ॥
(ಚಕ್ರಶ್ಲೋಕ) ೧೪೨

(ಗೀತಿಕೆ)

ಅನುಗತಂ ಪೂರ್ವಕವಿಗಳ್
ನೆನೆದಿನ್ನುಂ ಪೇಟ್ದಿಂ ದುಷ್ಕರೋಕ್ತಿಯ–
ನ್ನನುಗತಕ್ರಮದೆ ಬಗೆದು ಹೇಳಿಕೆಯೊಳ್
ಜನಿತವಿಭೇದಮುಮಂ ಪೇಟ್ವೆಂ ಕಿಱಿದಂ ೧೪೩

ಭಾವೆಯಂ ನುಸುಳುಮಸ್ಪಷ್ಟಾಕ್ಷರಮು
ಮಾವರ್ಣವ್ಯತ್ಯಯಮಂ ಬಿಂದುಚ್ಯುತಿಯಂ
ಭಾವಿಸಿದೊರ್ನುಡಿಯಂ ವರ್ಣಚ್ಯುತಮಂ
ಕೇವಳಮವಱ ಭೇದಮಂ ಸುಸಮಸ್ತಕಮಂ ೧೪೪

ಸವಿಹಿತಮಪ್ಪ ಕರ್ಣಪೂರೋತ್ಪಳಮಂ
ಧವಳ ವಿಲೋಚನೆಯ ಗುಣ ಸುಂದರಮಂ
ಕಿವಿವರಂ ನೀಳ್ದ ನಯನಯುಗದೊಳೊ
ಪ್ಪುವವಳಾನವಯವದೇಕೆ ಕಳೆಯವೇಟ್ದಿಂಪ್ರಿಯೆಯಂ
(ಭಾವೆ) ೧೪೫

ತಿರಿವುದದೊಂದು ಚಕ್ರದೊಳೆ ನಿಂದು ದಿವಾ
ಕರನೆ ಮತ್ತ[ರಿ]ದು ಕಳೆವೊಡಂತದನಾವೆಡೆಯಿಂ
ದರಮೆಯಾಗಿ ನೆಲಸಿ ಕೆಲಕಾಲದಿಂ
ಪೊರೆದಿರದಟಿೀದಬಟಿೀಕ ತಾ ನೆಲದೊಳ್ ೧೪೬
(ನುಸುಳು)

ನೆಟ್ಟನೆ ತಾಂ ಸವಿಯೊಳೊಂದಿರೆ ಭೋಜನಮಾ
ನಟ್ಟು ಬಡಿಸು ನಾಮಜಿಯದೆನಸುಂ ಸವಿಯಂ
ಪುಟ್ಟಿದಾರುಮಜಿಯದದಱ ಪೆಸರೊ
ಳಟ್ಟುದಂ ಪೇಟಿ ಕೇಳ್ದೆನೆಂದಜಿಯೆಂ
(ಅಸ್ಪಷ್ಟಾಕ್ಷರಂ) ೧೪೭

ಅವನಾಮಕತ್ವಕ್ಷುಚಯಂ
ಕ್ರವನೊಚರಾಮಯದಷ್ಟಪಾಯದೆಗಳೊಳ್
ಸೆವಿಸೆವಮಲಹೈವಸುಮುಕ್ತಿಮಹಾ
ದೆವ ನಿನ್ನನ್ನನಪ್ಪೊನಸಹಾಯಗುಣಂ
(ವರ್ಣವ್ಯತ್ಯಯಂ) ೧೪೮

ಸೊಗಯಿಸುಗುಮಿಂದ್ರನೀಲಮಣಿ ಸನ್ನಿಭದೊಳ್
ಮಿಗೆ ಜಳನಿಧಿಯೊಳಗುದಿತದಿಂದಿರದವೊಲ್
ನೆಗೆದತಿಧವಳಮೂರ್ತಿಗೆ ಘನವಳಯ ಸದಗ್ಧ
ಗಗನದೊಳುಟಿದುಟಿದು ವಿಶಾಳಿತಾಶಾವಳಯಂ
(ಬಿಂದುಚ್ಯುತಕಂ) ೧೪೯

ಆವುದು ಬಾಗಿದುದುಮಧಿಕಂ ಬಸನಂ
ಕೇವಳಮಾಗೆ ನೆಗೆವುದುಚಿತಾವಯವಂ
ದೀವದಿಂ ನಿಂತು ಸಿತಗನಂ ನುಡಿವುದು
ಭಾವಿಸಿ ಬಗೆಗೊಳ್ವೊಡಾರಕೊರ್ನದಿಯಂ
(ಒರ್ನುಡಿ) ೧೫೦

ತಳಮಳ[ಗೊ]ತ್ತುಂ ಜನಿತನಿಜಭೀತಿ ಮನಂ
ಗೊಳೆ ಕಳವಳಿಸಿ ಚಲಿತ ನಿಲಲಣ್ಮದೆ [ಮೊ]
ಕ್ಕಳ [ಮೊ]ಳಗೆ ಸುಟಿದರರಸಂ ಮನದೊಳ್
ಮುಳಿದಸಿಯನೆ ನೋ[ಡೆ] ಪರಿವಾರದವರ್
(ವರ್ಣಚ್ಯುತಕಂ) ೧೫೧

ವಿಗಳಿತರಾಗನಾವೊಂ ನಿನ್ನಾವುದಱ
ಸೊಗಯಿಸುಗುಂ ಕಟಕತ್ವಮಂ ಸಮರ್ಥಬಲಂ
ಬಗೆದೆನಗೊಯ್ಯನೆಸಗೆಯಿದುವೊದಾ
ಲಗಲಲಾಟಿಸುಗುಮದೆಪೇಟ್ದಿಂ ಬನದೊಳ್
(ಸಮಂತಿ) ೧೫೨

ಅತಿಶಯಧವಳೋ [ರ್ವಿ]ಪನೀತಿಮಾರ್ಗೋ
ಚಿತಗತಿಭಾವಿತಮಾ[ಗಾ]ಳಂಕ್ರಿಯಾರ್ಥಂ
ಚತುರವಿಜನಾನುಯಾತ ಸಾರ
ಸ್ವತಗುಣದೊಳ್ ಬಗೆದಂತೆ ಕೂಡಲಾರ್ಕುಂ ೧೫೩

(ವೃತ್ತ)
ಬುಧಗುಣಗಣನಾತೀತಾಂತರಂ ಶಬ್ದತತ್ತ್ವಾಂ
ಬುಧಿವಿವಿಧವಿಧಾನಾಲಂಕ್ರಿಯಾವೀ [ಚಿಮಾಲಾ]
ವಿಧುರಗತಿ ವಿಲೋಡ್ಯಂ ತಳ್ತು ನಿಲ್ತಪ್ಪ ದಾವಾ
ಗಧಿಪವಚನಮಾಲಾಪಾವನೀಯಂ ಗ[ಭೀರಂ] ೧೫೪

ಭಾವಿಸಿ ಶಬ್ದತತ್ತ್ವ ಸಮಯಸ್ಥಿತಿಯಂ ಕುಱಿತೊಂದಶೇಷಭಾ
ಷಾವಿಷಯೋಕ್ತಿಯಂ ಬಗೆದುನೋಡಿ ಪುರಾಣಕವಿಪ್ರಭುಪ್ರಯೋ
ಗಾವಿಳ ಸದ್ಗುಣೋದಯಮನಾಯ್ದುವಱಿಂ ಸಮೆದೊಂದು ಕಾವ್ಯದಿಂ
ಶ್ರೀವಿಜಯಪ್ರಭೂತಮುದಮಂ ತನಗಾಗಿಸಿದೊಂ ಕವೀಶ್ವರಂ ೧೫೫

(ಗದ್ಯ)

ಇದು ಶ್ರೀ ನೃಪತುಂಗ ದೇವಾನುಮತಮಪ್ಪ ಕವಿರಾಜಮಾರ್ಗದೊಳ್
ಶಬ್ದಾಲಂಕಾರ ವರ್ಣನಾನಿರ್ಣಯಂ
ದ್ವಿತೀಯ ಪರಿಚ್ಛೇದಂ

* * * *

# ತೃತೀಯ ಪರಿಚ್ಛೇದಂ

ಶ್ರೀ ವಿದಿತಾರ್ಥಾಲಂಕಾ
ರಾವಳಿಯಂ ವಿವಿಧಭೇಧ ವಿಭವಾಸ್ಪದಮಂ
ಭಾವಿಸಿ ಬೆಸಸಿದನಖಿಳ ಧ
ರಾವಲ್ಲಭನಿಂತಮೋಘವರ್ಷ ನೃಪೇಂದ್ರಂ ೧

ವರಜಾತಿ ರೂಪಕಾರ್ಥಾಂ
ತರವಿನ್ಯಾಸಾತಿರೇಕ ಯಾಥಾಸಂಖ್ಯಾ
ಸ್ಥಿರದೀಪಕೋಪಮಾ ಬಂ
ಧುರಾತಿಶಯ ಸದೃಶಯೋಗಿತಾಕ್ಷೇಪಂಗಳ್ ೨

ಶ್ಲೇಷೋತ್ಪ್ರೇಕ್ಷಾ ಸೂಕ್ಷ್ಮ ವಿ
ಶೇಷ ಸಮಾಹಿತ ಸಮಾಸ ಪರ್ಯಾಯೋಕ್ತಾ
ನ್ವೇಷ ವಿರೋಧಾಪ್ರಸ್ತುತ
ಶೇಷನಿದರ್ಶನ ಸಹೋಕ್ತಿ ಸಂಕೀರ್ಣಂಗಳ್ ೩

ನುತಪರಿವೃತ್ತಿ ವ್ಯಾಜ
ಸ್ತುತಿ ಹೇತು ವಿಭಾವನಾ ಲವೋದಾತ್ತಾಪ
ಹ್ನುತಿ ರಸವದೂರ್ಜಿತ ವ್ಯಾ
ವೃತಿ ಪ್ರಿಯತರಾಶಿಗಳ್ ಕ್ರಮಾದ್ಯುಕ್ತಂಗಳ್ ೪

ವಿದಿತಾರ್ಥಾಲಂಕಾರಾ
ಸ್ಪದ ಭೇದಂಗಳ್ ಪುರಾಣ ಶಾಸ್ತ್ರೋಕ್ತಂಗಳ್
ತದನುಮತಲಕ್ಷ್ಯಲಕ್ಷಣ
ನಿದರ್ಶನಂಗಳನನುಕ್ರಮೋಕ್ತಿಯೆ ಪೇೞ್ವೆಂ ೫

(೧– ಜಾತಿ)

ಭಾವಿಸಿ ಸಮಸ್ತವಸ್ತುವಿ
ಭಾವಿತ ಜಾತಿಕ್ರಿಯಾಗುಣದ್ರವ್ಯಸ್ವಾ
ಭಾವಿಕ ಗುಣಮಂ ಪೇೞ್ವುದು
ಕೇವಲಮಾ ಜಾತಿಯೆಂಬ ಸದಳಂಕಾರಂ ೬

ಧವಳಾಪಾಂಗಂ ಕೇಕಾ
ರವಮುಖರಂ ಹರಿತಶಾಬಲಾಂಕ ಕಳಾಪಂ
ನವಿಲಾದಂ ಸೊಗಯಿಸುಗುಂ
ಸುವಿನೀಲಾಯತಗಳಂ ಪಯೋದಾಗಮದೊಳ್
(ಜಾತಿಸ್ವಭಾವಾಖ್ಯಾನಂ) ೭

ಅರೆಮುಚ್ಚಿ ಕಣ್ಗಳಂ ವನ
ಕರಿ ಮೆಲ್ಲದೆ ಲಲಿತ ಸಲ್ಲಕೀಪಲ್ಲವಮಂ
ಸ್ಮರವಶದಿಂದಿರ್ದುದು ನಿಜ
ಕರೇಣುಪೇಚಕನಿರೂಪಿತಾಯತಹಸ್ತಂ
(ಕ್ರಿಯಾಸ್ವಭಾವಾಖ್ಯಾನಂ) ೮

ಆಮೀಳನಮಂ ಕಣ್ಗಳೊ
ಳಾ ಮನದೊಳಗೊಸಗೆಯಂ ಶರೀರದೊಳೆತ್ತಂ
ರೋಮಾಂಚಕಂಚುವಂ ಮದಿ
ರಾಮದವಾಗಿಸೆ ತೆಗೞ್ವಿನಾಕೆಯ ನುಡಿಯೊಳ್
(ಗುಣಸ್ವಭಾವಾಖ್ಯಾನಂ) ೯

ತಳಮಿತಮಧ್ಯೆಯನಾಯತ
ವಿಳೋಳಲೋಚನೆಯನುನ್ನತಸ್ತನಯುಗೆಯಂ
ಲಳಿತವಿಲಾಸಿನಿಯಂ ಕೋ
ಮಳಾಂಗಿಯಂ ಪೃಥುನಿತಂಬಬಿಂಬೆಯನುಟಿದಂ
(ದ್ರವ್ಯಸ್ವಭಾವಾಖ್ಯಾನಂ) ೧೦

ಅತಿಶಯಧವಳಧರಾದಿಪ
ಮತದಿಂದಂ ಜಾತಿಯೆಂಬಳಂಕಾರಮನಿಂ
ತತಿನಿಪುಣರಜೆಗೆ ತೋರ್ಪೆಂ
ಶ್ರುತಿಸುಭಗಮೆನಿಪ್ಪ ರೂಪಕಾಲಂಕೃತಿಯಂ ೧೧

(೨ – ರೂಪಕಂ)

ರೂಪಕಮೆಂಬುದು ಪೆಜವಜ
ರೂಪಾದಿಗುಣಂಗಳಾನಭೇದೋಕ್ತಿಗಳಿಂ
ರೂಪಿಸುವುದಿಂತು ಬಾಹುಲ
ತಾ ಪಾದಾಂಬುಜ ಮುಖೇಂದು ನಯನಾಳಿಗಳಿಂ ೧೨

ಸ್ಮಿತಕುಸುಮಮಧರಪಲ್ಲವ
ಮತಿಶಯನಯನಾಳಿ ಬಾಹುಶಾಖಂ ಕಾಂತಾ
ಲತೆಯೆಂದಿಂತು ಸಮಸ್ತಾ
ಶ್ರಿತಂ ಸಮಸ್ತಂ ಸಮಸ್ತರೂಪಕಮಕ್ಕುಂ
(ಸಮಸ್ತರೂಪಕಂ) ೧೩

ಕುಸುಮಂ ಸ್ಮಿತಮಳಿ ನಯನಂ
ಕಿಸಲಯಮಧರಂ ಬುಜದ್ವಯಂ ವಿಟಪಂ ಮ
ತ್ತಸುವಲ್ಲಭೆ ಲತೆಯೆಂಬುದಿ
ದಸಮಸ್ತಂ ವ್ಯಸ್ತರೂಪಕಕ್ರಮಮಖಿಲಂ
(ವ್ಯಸ್ತರೂಪಕಂ) ೧೪

ಸ್ಫುರಿತಾಧರಪಲ್ಲವೆ ಬಂ
ಧುರಲೋಚನಕುಸುಮೆ ಲೋಲಭುಜಶಾಖೆ ಮನೋ
ಹರೆ ಕಾಂತೆಯೆಂಬುದವಯವ
ನಿರೂಪಣಕ್ರಮದಿನವಯವಂ ರೂಪಕದೊಳ್
(ಸಾವಯವ ರೂಪಕಂ) ೧೫

ತರಳತರಲೋಚನಂ ನಿ
ರ್ಭರರಾಗರಸಂ ಮುಖಾರವಿಂದಂ ನಿನ್ನಾ
ದೊರೆಕೊಳಿಸಿದೊಸಗೆಯೇಂ ಬಂ
ಧುರಮೆಂಬುದಿದವಯವಿ ಕ್ರಮಂ ರೂಪಕದೊಳ್
(ಅವಯವಿ ರೂಪಕಂ) ೧೬

ಮೃದುತರಕಪೋಲಫಳಕಂ
ವದನಾಂಬುಜಮಾಯತೋನ್ನತ ಭ್ರೂ ಚಾಪಂ
ಮುದಮಂ ಪಡೆದತ್ತೆನಗೆಂ
ಬುದು ವಿಷಮಿತರೂಪವಿಷಮರೂಪಕಮಕ್ಕುಂ
(ವಿಷಮ ರೂಪಕಂ) ೧೭

ಜಿನಚರಣನಖಾದರ್ಶಂ
ವಿನತಾಮರರಾಜರಾಜವದನಪ್ರತಿಮಂ
ಮನದೊಳ್ಸಲೆ ನಿಲ್ಕೆಂಬುದು
ವಿನಿಶ್ಚಿತ ವಿಶೇಷಣೋರು ರೂಪಕಮಕ್ಕುಂ
(ವಿಶೇಷಣ ರೂಪಕಂ) ೧೮

ಕಮಲಾಕರದೊಳ್ ಸಂಕೋ
ಚಮನಟಿಲಂ ಚಕ್ರವಾಕದೊಳ್ ಮಾಡದು ನಿ
ನ್ನ ಮುಖೇಂದುಬಿಂಬಮಿಂದುಗೆ
ಸಮನೆಂಬುದು ಮಿಗೆ ವಿರುದ್ಧರೂಪಕಮಕ್ಕುಂ
(ವಿರುದ್ಧ ರೂಪಕಂ) ೧೯

ಕುಲಗಿರಿಯಯ್ ಗೌರವದಿಂ
ನೆಲನಯ್ ಸೈರಣೆಯಿನಿಂದುವಯ್ ಶಾಂತಿಯಿನಾ
ಜಲನಿಧಿಯಯ್ ಗುಣ್ಪಿಂದೆಂ
ದಲಸದೆ ಪೇೞ್ಗೆಂತು ಹೇತುರೂಪಕ ವಿಧಿಯಂ
(ಹೇತುರೂಪಕಂ) ೨೦

ಕುಮುದಾನಂದನಕರವತಿ
ಕಮಲಾಕರರಾಗಹರಮುದಾರಂ ನಿನ್ನಾ
ವಿಮಳಯಶೋವಿಧುವೆಂಬುದು
ಕಮನೀಯಂ ಶ್ಲೇಷರೂಪಕಾಲಂಕಾರಂ
(ಶ್ಲೇಷರೂಪಕಂ) ೨೧

ಪರಿಚಿತಸನಾಭಿರಾಗಾಂ
ಕುರಜಲಸೇಚಂ ವಿರೋಧಿತರುದವದಹನಂ
ಪರಮೋದಯರವಿಗಗನಂ
ಪರಾಕ್ರಮವದೆನೆ ವಿಭಿನ್ನರೂಪಕಮಕ್ಕುಂ
(ವಿಭಿನ್ನರೂಪಕಂ) ೨೨

ವದನಾಂಬುಜರಂಗದೊಳೀ
ಮದಾಲಸಭ್ರೂಲತಾವಿಲಾಸಿನಿ ಲೀಲಾ
ಸ್ಪದ ನೃತ್ಯಮನಾಗಿಸಿದ
ಪ್ಪುದಿದೆಂಬುದು ರೂಪಕೋರುರೂಪಕಮಕ್ಕುಂ
(ರೂಪಕ ರೂಪಕಂ) ೨೩

ವದನಮಿದಲ್ತಂಬುರುಹಂ
ಮದಲೋಲವಿಲೋಚನಂಗಳಲ್ಲಮಿವಳಿಗಳ್
ಮುದಮಲ್ಲಿದು ವಿಕಸನಮೆಂ
ಬಿದನಿಂ [ಬೆ]ನೆ ಬಗೆಗೆ ರೂಪಕಾಪಹ್ನುತಿಯಂ
(ರೂಪಕಾಪಹ್ನುತಿ) ೨೪

ಮೊಗಮೆಂಬಂಬುಜದಲರಾ
ನಗೆಯೆಂಬ ವಿಕಾಸಮೊಪ್ಪುವದಱಿಕೊಳ್ಸುಟಿಗುಂ
ಮಿಗೆ ಕಣ್ಗಳೆಂಬ ತುಂಬಿಗ
ಳೊಗೆದೊಸೆಗೆಯಿನೆನೆ ಸುಯುಕ್ತರೂಪಕಮಕ್ಕುಂ
(ಯುಕ್ತರೂಪಕಂ) ೨೫

ನಗೆಯೆಂಬ ನೆವದೆ ಬೆಳಗೀ
ಮೊಗಮೆಂಬೀ ನೆವದೆ ತಿಂಗಳೊಳಗೆಸೆದಾದಂ
ಸೊಗಯಿಸಿ ತೋರ್ಕುಂ ಲೋಚನ
ಯುಗಮೆಂಬೀ ನೆವದೆ ಲಕ್ಷ್ಮಮೆನೆ ತದ್ವ್ಯಾಜಂ
(ವ್ಯಾಜರೂಪಕಂ) ೨೬

ವರ ರೂಪಕ ಭೇದಮನಿಂ
ತಿರೆ ಪೇೞ್ದಿಂ ಕಿಱಿದನುಱಿದುದಂ ಲಕ್ಷ್ಯದೊಳಾ
ದರದಱಿಗೆ ತೋರ್ಪೆನರ್ಥಾಂ
ತರವಿನ್ಯಾಸಕ್ಕೆ ಲಕ್ಷ್ಯಲಕ್ಷಣ ಯುಗಮಂ ೨೭

(೩ – ಅರ್ಥಾಂತರನ್ಯಾಸಂ)

ದೊರೆಕೊಳೆ ಪೇೞ್ದರ್ಥಮನಾ
ದರದಿಂ ಸಾಧಿಸಲೆವೇಡಿ ಪೆರತೊಂದರ್ಥಾಂ
ತರಮಂ ಪೇೞ್ವುದದರ್ಥಾಂ
ತರವಿನ್ಯಾಸಾಖ್ಯಮದಱದೀ ಭೇದಂಗಳ್ ೨೮

ಸಕಲವ್ಯಾಪಿ ವಿಶೇಷ
ಪ್ರಕಾಶಕಂ ಯುಕ್ತಕಾರಿ ಯುಕ್ತಾಯುಕ್ತಂ
ಪ್ರಕಟಶ್ಲೇಷವಿರುದ್ಧಾ
ತ್ಮಕಂ ವಿರುದ್ಧ ವಿಪರ್ಯಯಂ ಯುಕ್ತಾರ್ಥಂ ೨೯

ಸತತೋದಯನಪ್ರತಿಹತ
ಗತಿತೀವ್ರಂ ತದ್ದಿನಾಧಿನಾಥನುಮಸ್ತಂ
ಗತನಾದನಂತೆ ನಿಯತ
ಪ್ರತೀತಿಯಂ ಕಳೆಯಲಕ್ಕುಮೇ ವ್ಯಾಪಕಮಂ
(ಸಕಲವ್ಯಾಪಿ) ೩೦

ಸರಸಿಜಬಾಂಧವನಸ್ತಾಂ
ತರಗತನಾಗಿರೆ ಸರೋಜಿನೀವನಮಾದಂ
ಕೊರಗುತ್ತೆ ಮುಗಿಗುಮೀಶ್ವರ
ವಿರಹದೆ ಶೋಕಾಕುಲಂ ವಿಶೇಷಾಪ್ತಜನಂ
(ವಿಶೇಷಪ್ರಕಾಶಕಂ) ೩೧

ಮಲಯಾನಿಲನುಂ ಮಲಯಜ
ಜಲಮುಂ ಶಶಿಕಿರಣಮುಂ ವಿಯೋಗಿಗಳೆರ್ದೆಯೊಳ್
ನೆಲಸಿರ್ದುವಟಲೆ ಪಾಪದ
ಫಲಮಾದುವು ಯುಕ್ತಕಾರಿ ಕಾಮುಕ ಜನದಾ
(ಯುಕ್ತಕಾರಿ) ೩೨

ಹರಿಣಧರಂ ಸೊಗಯಿಸಿದಂ
ತಿರೆ ಕುಸುಮಿತಚೂತವಿತತಿ ಸೊಗಯಿಸಿತೆನಸುಂ
ಸುರಭಿಸುಮನಸ್ವಿ ದೋಷಾ
ಕರವಿಲಸಿತಮಪ್ಪೊಡಿಂತು ಯುಕ್ತಾಯುಕ್ತಂ
(ಯುಕ್ತಾ ಯುಕ್ತಂ) ೩೩

ದಿನನಾಯಕನಪರದಿಗಂ
ಗನೆಯೊಳ್ ನೆರೆದುದಿತರಾಗನಾದಂ ಪೀನಂ
ಜನಿಯಿಸುಗುಮಧಿಕರಾಗಮ
ನೆನಸುಮಪಕ್ರಮದೆ ವಾರುಣೀ ಸಂಶ್ಲೇಷಂ
(ಪ್ರಕಟಶ್ಲೇಷಂ) ೩೪

ಸರಿದಧಿಪತಿಯಂ ದೋಷಾ
ಕರನಂತರ್ಮಲಿನನಾಗಿಯುಂ ಪೆರ್ಚಿಸುಗುಂ
ಪರಿಣತ ಕಲಾಕಲಾಪಂ
ಪರಿವರ್ಧ[ಕ]ನಕ್ಕುಮತಿ ವಿರುದ್ಧಾತ್ಮಕ[ನಂ]
(ವಿರುದ್ಧಾತ್ಮಕಂ) ೩೫

ಪರಿತಾಪಮನೆನಗೆ ನಿಶಾ
ಕರನಾಗಿಸುಗುಂ ವಸಂತಸಮಯಾನುಗತಂ
ಸುರಭಿಸಮಯೋದಿತಂ ಹಿಮ
ಕರನರಿಲಂ ಪಡೆವನೆಂಬುದಿದು ವಿಪರೀತಂ
(ವಿಪರೀತಂ: ವಿಪರ್ಯಯಂ) ೩೬

ಉರುಪಿತ್ತಶೋಕಪಲ್ಲವ
ವಿರಚಿತಶಯನೀಯಮೆನ್ನ ಮೆಯ್ಯಂ ಪೀನಂ
ಸ್ಫುರದನಲಪ್ರತಿನಿಧಿ ತ
ತ್ಸ್ವರೂಪಗುಣಮಕ್ಕುಮೆಂಬುದೆಂದುಂ ಯುಕ್ತಂ
(ಯುಕ್ತಾರ್ಥಂ) ೩೭

ಸಂತತವಿಂತೆಸೆವಪ್ಪ
ರ್ಥಾಂತರ ವಿನ್ಯಾಸಭೇದಮಂ ಬಗೆಗೆ ಬುಧರ್
ಮುಂತಣ ಲಕ್ಷಣಲಕ್ಷ್ಯಯು
ಗಾಂತರ್ಗತಭೇದಮಕ್ಕುಮಾ ವ್ಯತಿರೇಕಂ ೩೮

(೪–ವ್ಯತಿರೇಕಂ)

ಆದಿಪ್ರತೀತಿ[ಯಿ]ಂಶ
ಬ್ದಾದರದಿಂ ಸದೃಶಮಾದ ವಸ್ತುದ್ವಯದೊಳ್
ಭೇದಮನಱಿಪುವುದುಚಿತ ಗು
ಣೋದಯ ಕೃತವಾಕ್ಯವಿಸ್ತರಂ ವ್ಯತಿರೇಕಂ ೩೯

ಶ್ರೀವನಿತಾಪ್ರಸವದಿನಾ
ಲಾವಣ್ಯದಿನತಿಗಭೀರಭಾವದೆ ನೀನಿಂ
ತಾ ವಾರಿಧಿಯಂ ಪೋಲ್ತಯ್
ಕೇವಲಭೇದಂ ದ್ವಿತೀಯ ಲಲಿತಾಕಾರಂ
(ಏಕವ್ಯತಿರೇಕಂ) ೪೦

ಪರಮೋದಯರಿರ್ ಕಮಲಾ
ಕರಬೋಧಕರಿರ್ ದಿನೇಶನುಂ ನೀನುಂ ಭಾ
ಸ್ಕರನನಿಯತ ವೃತ್ತಕ್ರಮ
ನರಸಾ ನಿನ್ನಂತೆ ನಿಯತವೃತ್ತಸ್ಥಿತ [ನೇಂ]
(ಉಭಯ ವ್ಯತಿರೇಕಂ) ೪೧

ಪರಿಣತಗುಣರಿರ್ ಕಾಂತೋ
ತ್ಕರರಿರ್ ನಿಜಸೌಖ್ಯರಿರ್ ನಿಶಾನಾಯಕನುಂ
ನರಪಾ ನೀನುಂ ದೋಷಾ
ಕರನಾ ಶಶಿ ನೀನುದಾರಗುಣಸಮುದಯನಯ್ ೪೨

ಅಲಘು ಭುಜನಾಗಿಯುಂ ನಿ
ಶ್ಚಲನಾಗಿಯುಮಖಿಳ ಭೂಭೃದುತ್ತುಂಗತೆಯೊಳ್
ನೆಲಸಿಯುಮೆಯ್ದದು ನಿನ್ನಾ
ವಿಲಸಿತಮಂ ಮೇರು ಕಠಿನಭೋಗಾಧಾರಂ ೪೩

ಪಾರ್ಥಿವ ಗುಣಯುತಮಾಗಿಯು
ಮರ್ಥಿತಫಲದಾಯಿಯಾಗಿಯುಂ ನಿನ್ನೊಳ್ ತಾಂ
ವ್ಯರ್ಥತೆಯಂ ಪಡೆಗುಂ ಪರ
ಮಾರ್ಥವಚೇತನತೆಯಿಂದೆ ಕಲ್ಪಕುಜಾತಂ ೪೪

ಮದಮುದಿತಾಳಿ ಕದಂಬಂ
ಮೃದುವಿಳಸಿತ ಸರಸಕೇಸರಂ ಸರಸಿರುಹಂ
ವದನಮಿದು ಲೋಲಲೋಚನ
ಮುದಿತಂ ಸ್ಮಿತದಶನವಸನ ರಾಗೋಪಚಿತಂ ೪೫

ಶರದಂಬರಮುಂ ಮತ್ತೀ
ಸರವರಮುಂ ವಿಳಸದತನುಧವಳಚ್ಛವಿಗಳ್
ಹರಿಣಾಂಕಾಲಂಕೃತಮಂ
ಬರಮೀ ಕೊಳಮುಚಿತರಾಜಹಂಸೋತ್ತಂಸಂ ೪೬

ಅಮದಾಲಸ ಲೋಚನಲೀ
ಲಮಪಾಸ್ತಭ್ರೂಲತಾವಿಲಾಸ ವಿಶೇಷಂ
ಕಮಲಮದು ಪೋಲದೀ ನಿ
ನ್ನ ಮುಖಮನಿಂತೆತ್ತಮುಕ್ತಗುಣಭೂಷಣಮಂ ೪೭

ಅನಲನಸಾಧ್ಯಾಕಳಂಕ
ಮನನಿಳತಪನೀಯ ಧೂಳಿಯಾನಜಲಕ್ಷಾ
ಲನಮನನಾಕಲಶೋಷ್ಯಮ
ನನಿಯತಕರ್ದಮಮನಯಶಮಂ ತೊಱಿಗಱಿವಂ ೪೮

(೫ – ಯಾಥಾಸಂಖ್ಯ)

ವ್ಯತಿರೇಕ ವಿಕಲ್ಪಮನನು
ಗತಕ್ರಮ ವಿಶೇಷಗುಣಕೃತಾಂತಮನಱಿಗೀ
ಮತದಿಂ ಯಾಥಾಸಂಖ್ಯಾ
ಪ್ರತಿತೀಯಂ ತೋರ್ಪೆನನ್ವಿತಾನನ್ವಿತಮಂ ೪೯

ಅಳಕಾನನ ನಯನಂಗಳಿ
ನಳಿನಳಿನೋತ್ಪಲವಿಳಾಸಮಂ ಗೆಲ್ದುದಱಿಂ
ಕಳಹಂಸಲೀಲಗಮನೇ
ಕೊಳನಂ ನೀಂ ಪೋಲ್ವೆಯೆಂಬುದನುಗತಮಕ್ಕುಂ
(ಅನುಗತ ಯಾಥಾಸಂಖ್ಯ) ೫೦

ನಳಿನೋತ್ಪಳಾಳಿರುಚಿಗಳ
ನಳಕವಿಲೋಚನಮುಖಂಗಳೀಟ್ಟುಳಿಗೊಳೆ ನೀಂ
ತಿಳಿಗೊಳನನೆ ಪೋಲ್ತಿರ್ದುಂ
ತಿಳಿಯದುದೇಕೆಂಬುದಿಂತನನ್ವಯಮದಱೊಳ್
(ಅನನ್ವಿತ ಯಾಥಾಸಂಖ್ಯ) ೫೧

ನಿಗದಿತ ಯಾಥಾಸಂಖ್ಯಾ
ನುಗತವ್ಯತಿರೇಕಯುಗಳ ಲಕ್ಷ್ಯಮಿವಕ್ಕುಂ
ಬಗೆಗಾ ದೀಪಕದ ವಿಭಾ
ಗ ಗತಿಯನೀ ಭೇದಲಕ್ಷಣಯುಗದಿಂ ೫೨

(೬ – ದೀಪಕ)

ಜಾತಿಕ್ರಿಯಾಗುಣದ್ರ
ವ್ಯಾತಿಶಯ ವಿಶೇಷಿಯಪ್ಪ ಪದಮೊ [ರ್ಬಟೆ]ನಿಂ
ದೀ ತೆಱದಿನುಟೆದ [ವಾಕ್ಯ]ಸ
ಮೇತಿಗಮುಪಕಾರಯೋಗ್ಯದೀಪಕಮಕ್ಕುಂ ೫೩

ಮಲಯಾನಿಲನೊಯ್ಯನೆ ಪ
ಣ್ತೆಲೆಯಂ ನೆಲೆಯಿಂ ಕೞಲ್ಚುಗುಂ ವಿಟಪಿಗಳೊಳ್
ವಿಲಸಿತ ಕಳಿಕಾಕುಳಕೋ
ಮಲಾಂಕುರಮನಂತೆ ಪಡೆಗುಮವಱೆಡೆಯೆಡೆಯೊಳ್
(ಜಾತ್ಯನುಗತ ಆದಿದೀಪಕಂ) ೫೪

ತಿರಿತರ್ಕುಮಮಳ ಜಳನಿಧಿ
ಪರಿಖಾವೃತಭೂಮಿಭಾಗಮಂ [ಭ] ರದೆ ಜಳಾ
ಕರವಿಕ್ಷೇಪಕ ಕಕುದಂ
ತರಮಂ ಸವಿಶೇಷರುಚಿರ ಸಂಭವ [ನಿ]ಧಿಯಂ
(ಕ್ರಿಯಾನುಗತ ಆದಿದೀಪಕಂ) ೫೫

ವಿಶದತರಮಾಯ್ತು ಗುಣಮಣಿ
ವಿಶೇಷ ಭೂಷಣದಿನೀ ತ್ವದೀಯಾಕಾರಂ
ಶಶಧರಕಿರಣಾಭಭವ
ದ್ಯಶೋವಿತಾನದಿನಶೇಷಮಾಶಾವಳಯಂ
(ಗುಣಾನುಗತ ಆದಿದೀಪಕಂ) ೫೬

ದಿವಸಕರನುದಯಗಿರಿಶಿಖ
ರವಿಶೇಷ ವಿಭೂಷಣಂ ತಮೋರಿಪುಬಳಮಂ
ಪ್ರವಿಲೀನಂ ಮಾಡಿದನವ
ಯವದೊಳ್ ತಾರಾವಿತಾನತೇಜಮನಟಿದಂ
(ದ್ರವ್ಯಾನುಗತ ಆದಿದೀಪಕಂ) ೫೭

ದೀಪಕಮಾಜಾತ್ಯಾದಿನಿ
ರೂಪಕಮಿಂತಕ್ಕುಮಾದಿಯೊಳ್ ಮಧ್ಯಾಂತ
ವ್ಯಾಪಕಮನದಂ ತಜಿಸ
ಲ್ಗೀಪೇಟ್ದ ವಿಕಲ್ಪ ಲಕ್ಷ್ಯದೊಳ್ ಕವಿ ಮುಖ್ಯರ್ ೫೮

(೭ – ಉಪಮಾ)

ನಾನಾ ವಸ್ತುವಿಭೇದಮ
ನೇನಾನುಂ ತೆಱದೆ ಪೋಲ್ಕೆ ಮಾಡುವುದುಪಮಾ
ಮಾನಿತ ಸದಳಂಕಾರಮ
ನೂನ ವಿಕಲ್ಪಪ್ರಪಂಚಮೀ ತೆಱನದಱಾ ೫೯

ವನರುಹದಂತೆ ಮುಖಂ ಲೋ
ಚನಮೆಸೆವುತ್ಪಳದವೋಲ್ ತಳಂ ತಳಿರೆಂತೆಂ
ದನುರೂಪಮಾಗಿ ಪೇಟಿಟ್ವೊಡ
ದೆನಸುಂ ವಸ್ತೂಪಮಾನಮೆಂಬುದು ಪೆಸರಿಂ
(ವಸ್ತೂಪಮೆ) ೬೦

ತಳಿರ್ಗಳವೋಲ್ ಮೆಲ್ಲಿದುವೀ
ತಳಂಗಳಳಿಕುಳದವೋಲ್ ವಿನೀಳಂಗಳ್ ನಿ
ನ್ನಳಕಾಳಿಗಳೆಂಬುದನಾ
ಕುಳಮಿಲ್ಲದೆ ವಿಬುಧರಟಿಗೆ ಧರ್ಮೋಪಮೆಯಂ
(ಧರ್ಮೋಪಮೆ) ೬೧

ನಿನ್ನ ಮುಖದಂತೆ ಕಮಳಮಿ
ದುನ್ನಿದ್ರಂ ನಿನ್ನ ತಳದವೋಲಾರಕ್ತಂ
[ನನ್ನಿಯಿನೀ] ಪಲ್ಲವಮೆನೆ
ಸನ್ನುತರೂಪಿಂ ವಿಪರ್ಯಯೋಪಮಮಕ್ಕುಂ
(ವಿಪರ್ಯಯೋಪಮೆ) ೬೨

ಕಮಳಮಿದು ನಿನ್ನ ಮುಖದಂ
ತೆ ಮುಖಮುಮೀ ಕಮಳದಂತೆ ನಿಕ್ಕುವಮೆಂದಿಂ
ತಮರ್ದಿರೆ ಪೇಟ್ವುದನಱಿಗು
ತ್ತಮರನ್ಯೋನ್ಯೋಪಮಾನ ನಾಮಾಂಕಿತಮಂ
(ಅನ್ಯೋನ್ಯೋಪಮೆ) ೬೩

ಸರಸಿಜದೊಳ್ ನಿನ್ನ ಮುಖಂ
ತರುಣೀ ಸದೃಶಂ ಸಮಂತು ಪೋಲದು ಪೆಱತಂ
ನಿರುತಮಿದೆಂಬುದು ನಿಯಮಾಂ
ತರಿತಂ ನಿಯಮೋಪಮಾವಿಕಲ್ಪಿತಭಾಗಂ
(ನಿಯಮೋಪಮೆ) ೬೪

ಕಮಳಮಿದನ್ನೆಗಮೀ ನಿ
ನ್ನ ಮುಖದೊಳೋರಂತೆ ಪೆಱದುಮಿದಱೊಳ್ ಸದೃಶಂ
ಸಮವಾಯಮುಳ್ಳೊಡೆಲ್ಲಂ
ಸಮನಿಸುಗಂತೆಂಬುದನಿಯಮೋಪಮೆಯಕ್ಕುಂ
(ಅನಿಯಮೋಪಮೆ) ೬೫

ವದನಂ ಮದೀಯಲೋಚನ
ಮುದಾವಹಂ ಕಮಳಮಳಿಕುಳೋತ್ಸವಜನಕಂ
ವಿದಿತ ವಿಭೇದಕ್ರಮ ಮಿಂ
ತಿದಲ್ಲದಿಲ್ಲೆಂಬುದತಿಶಯೋಪಮೆ ಸತತಂ
(ಅತಿಶಯೋಪಮೆ) ೬೬

ಈಕೆಯವದನಾಕಾರಮ
ನೇಕಾಂತಂ ಪೋಲ್ವೆನೆಂಬುದರ್ಕಾಗಿ ಕನ
ತ್ಕೋಕನದಕ್ಕಿಂದುಗಮುಂ
ಟಾಕಾಂಕ್ಷಣಮದಱೊಳೆಂಬುದುಪಮೋತ್ಪ್ರೇಕ್ಷಂ
(ಉಪಮೋತ್ಪ್ರೇಕ್ಷೆ) ೬೭

ಕಮಳಂ ಲಲಿತಭ್ರೂವಿ
ಭ್ರಮಮಂ ವಿಸ್ಮಿತವಿಲೋಲಲೋಚನಯುಗಮಂ
ಸಮವಾಯಮಳ್ಗೊಡದು ನಿ
ನ್ನ ಮೊಗಕ್ಕೆಣೆಯೆಂಬುದದ್ಭುತೋಪಮೆ ನಿಯತಂ
(ಅದ್ಭುತೋಪಮೆ) ೬೮

ಕಮಳವಿಮೋಹದಿನೀ ನಿ
ನ್ನ ಮೊಗಕ್ಕೆಱಗುವುದು ತೊಱೆವುದಾ ಸರಸಿಜಮಂ
ಭ್ರಮರಂ ವದನಮಿದಲ್ತೆಂ
ದು ಮೋಹದಿಂದೆಂಬುದಿದುವೆ ಮೋಹೋಪಮಿತಂ
(ಮೋಹೋಪಮೆ) ೬೯

ಸರಸಿಜಮೋ ಮೊಗಮೋ ಮೇಣ್
ದ್ವಿರೇಫಮೋ ಲೋಲನಯನಯುಗಮೋ ಮನದೊಳ್
ಪಿರಿದುಂ ಸಂಶಯಮೆಂಬುದು
ನಿರಂತರಂ ಸಂಶಯೋಪಮಾಲಂಕಾರಂ
(ಸಂಶಯೋಪಮೆ) ೭೦

ಸರಸಿರುಹಮಿಂದುದೀಧಿತಿ
ಪರಾಜಿತಶ್ರೀವಿಲಾಸಮೀ ನಿನ್ನ ಮುಖಂ
ಹರಿಣಧರವಿಜಯಶೋಭಾ
ಕರಮೆಂಬುದಿದೂರ್ಜಿತೋಪಮಾನ ವಿಭಾಗಂ
(ಊರ್ಜಿತೋಪಮೆ) ೭೧

ಪರಮಶ್ರೀನಿಳಯಂ ಶಶ
ಧರಕಾಂತಿವಿರೋಧಿರೋಚಿ ವದನಂ ನಿನ್ನಾ
ಸರಸಿರುಹದವೋಲೆಂಬುದು
ನಿರುತಂ ಶ್ಲೇಷೋಪಮಾವಿಕಲ್ಪವಿಶೇಷಂ
(ಶ್ಲೇಷೋಪಮೆ) ೭೨

ಸರಸೀಜಂ ಸರಜಂ ಶಶ
ಧರ ಬಿಂಬಮದತಿ ಕಳಂಕಿತಂ ನಿನ್ನ ಮೊಗಂ
ನಿರುಪಮಮಾಗಿಯುಮವಱೊಳ್
ದೊರೆಯೆಂಬುದನಱಿದುಕೊಳ್ಗೆ ನಿಂದೋಪಮೆಯಂ
(ನಿಂದೋಪಮೆ) ೭೩

ಅಮೃತಭವಂ ಶಿಶಿರಕರಂ
ಕಮಳಂ ಜಗದೇಕಪಾವನೀಯ ಶ್ರೀಕಂ
ಸಮನವಱೊಳ್ ನಿನ್ನ ಮೊಗಂ
ಕ್ರಮದೆಂಬುದನಱಿವುದಾ ಪ್ರಶಂಸೋಪಮೆಯಂ
(ಪ್ರಶಂಸೋಪಮೆ) ೭೪

ಶರದುದಿತ ಶಿಶಿರಕರನುಂ
ಸರಸಿರುಹಮುಮೀ ತ್ವದೀಯ ವದನಮುಮಿನಿತುಂ
ದೊರೆಕೊಳಿಸುವೊಡೆ ಪರಸ್ಪರ
ವಿರೋಧಿಗಳ್ನಿರುತಮೆನೆ ವಿರೋಧೋಪಮಿತಂ
(ವಿರೋಧೋಪಮೆ) ೭೫

ಅಳಿಗಳಿವು ಕಣ್ಗಳಲ್ಲಿವು
ನಳಿನಮಿದೀ ವದನಮಲ್ತು ನಿಜಕಾಮಿನಿಯಾ
ತಿಳಿದಿಂತು ಪೇೞ್ವೊಡಿದು ಮೊ
ಕ್ಕಳಮುಪಮಾಖ್ಯಾತಮಪ್ಪ ತತ್ತ್ವಾಖ್ಯಾನಂ
(ತತ್ತ್ವಾಖ್ಯಾನೋಪಮೆ) ೭೬

ಹರಿಣಧರ ಸರಸಿಜಂಗಳ್
ದೊರೆಯಲ್ಲಿವು ತನಗೆ ತಾನೆ ದೊರೆ ನಿನ್ನ ಮೊಗಂ
ನಿರುಪಮಮೆಂಬುದನಱಿವುದು
ನಿರುತಮಸಾಧಾರಣೋಪಮೋದಯಂ ವಿಧಿಯಂ
(ಅಸಾಧಾರಣೋಪಮೆ) ೭೭

ನುತ ಶಿಶಿರಕಿರಣಕಾಂತಿ
ಪ್ರತತಿಯನೊಡಗೂಡಿ ಮಾಡಿದವೊಲಾಯಿತ್ತಿಂ
ತತಿಶಯಮೀ ನಿನ್ನ ಮುಖಂ
ನಿತಾಂತಮೆಂಬಾಗಳಱಿಗಭೂತೋಪಮೆಯಂ
(ಅಭೂತೋಪಮೆ) ೭೮

ಹರಿಣಧರನೊಳ್ ವಿಷಂ ಮಲ
ಯರುಹದೊಳನಲಾರ್ಚಿ ನಿನ್ನ ವದನೋದರದೊಳ್
ಪರುಷತರವಚನಮಪ್ಪುದು
ದುರವಾಪಮಿದಿಂತಸಂಭವೋಪಮಮಕ್ಕುಂ
(ಅಸಂಭವೋಪಮೆ) ೭೯

ಮಲಯರುಹ ಶಿಶಿರಕರ ಶ್ರೀ
ತಲಿಕಾ ಕರಕೇಂದುಕಾಂತಜಲಶೀತಳಮೀ
ಲಲನಾಲಿಂಗನ ಸುಖಕರ
ವಿಲಾಸಮೆಂಬುದು ಬಹೂಪಮಾನವಿಕಲ್ಪಂ
(ಬಹೂಪಮೆ) ೮೦

ಜನಿತ ಪ್ರಗಲ್ಭದೊಳ್ [ಮಾ
ನನ]ದೊಳ್ ಮಾಹಾತ್ಮ್ಯದೊಳ್ ನಿಜೋದಾರತೆಯೊಳ್
ಅನುಪಮಗುಣಧೊಳ್ಶ್ರೀಶಂ
ಘನಮೆನೆ ಮಾಲೋಪಮಾನ ಭೇದಮಿದಕ್ಕುಂ
(ಮಾಲೋಪಮೆ) ೮೧

ಭವದೀಯ ವದನಮಾ ಲೋ
ಲವಿಲೋಚನಮುದಿತರಾಗಮಣಿವಿಳಸಿತ [ಮುಂ]
ಪ್ರವಿಕಸಿತಾಂಬುಜವನಮಂ
ಸವಿಶೇಷಂ ಪೋಲ್ಗುಮೆನ್ಗೆ ವಾಕ್ಯೋಪಮೆಯಂ
(ವಾಕ್ಯೋಪಮೆ) ೮೨

ವಿಪರೀತಂ ತರುತತಿಯ ವೊ
ಲಪರಾಗಂ ಶುದ್ಧಭೂಮಿವೋಲ್ ಪದ್ಮಿನಿವೋ
ಲುಪಗತವಿಭ್ರಮ ರಹಿತಂ
ಕುಪಿತಾಕೃತಿಯೆಂಬುದುಪಮೆ ಸಂಧಾನಾಂಕಂ
(ಸಂಧಾನೋಪಮೆ) ೮೩

ಪ್ರತಿವಸ್ತೂಪಮಿತಾಲಂ
ಕೃತಮಿಂತಕ್ಕುಂ ಧರಾಧಿಪಾ ನಿನ್ನನ್ನಂ
ವಿತತಯಶನಿಲಯ ತಾರಾ
ಪತಿ ದಿನಕರ ಸದೃಶತೇಜನೆಂಬುದುಮುಂಟೇ
(ಪ್ರತಿವಸ್ತೂಪಮೆ) ೮೪

ಸುರಗಿರಿವೋಲ್ ಧೈರ್ಯದಿನಂ
ಬರಮಣಿವೋಲ್ ತೇಜದಿಂ ಶಶಾಂಕಂಬೋಲ್ ಬಂ
ಧುರ ಕಾಂತಿಗುಣದಿನೆಂದಿಂ
ತಿರೆ ಪೇಳ್ವುದನಱಿದುಕೊಳ್ಗೆ ಹೇತೂಪಮೆಯಂ
(ಹೇತೂಪಮೆ) ೮೫

(ಉಪಮಾ ಗುಣದೋಷಂಗಳ್)

ಹೀನಾಧಿಕಗುಣದೋಷ ವಿ
ತಾನಮುಮಂ ಲಿಂಗವಚನ ಭೇದಂಗಳುಮಂ
ಮಾನಧನರಱಿದು ಪೇಳ್ಗನು
ಮಾನಕ್ಕವಿರುದ್ಧಮಾಗೆ ಲಕ್ಷ್ಯಾಗಮದೊಳ್ ೮೬

ನಿನ್ನಂತೆ ಸುರೇಶ್ವರನು
ತ್ಪನ್ನಮಹೈಶ್ವರ್ಯನೆಂಬುದುಂ ಜಲನಿಧಿ ತಾಂ
ಸನ್ನುತ ಗಭೀರನೆಂಬುದು
ಮಿನ್ನದು ಹೀನಾಧಿಕಪ್ರಶಂಸಾನುಗುಣಂ ೮೭

ಕೊಳದಂತಂಬರಮತಿನಿ
ರ್ಮಳಮೀತಂ ಸ್ವಾಮಿಭಕ್ತನೆಂದುಂ ನಾಯ್ವೋ
ಲಿಳೆ[ಯೊಳ್]ಕರಮೆಂಬುದಿದ
ಗ್ಗಳಮಾ ಹೀನಾಧಿಕಪ್ರಶಂಸಾದೋಷಂ ೮೮

ಪುರುಷಂಬೋಲೀಕೆ ಕರಂ
ಪುರುಷಾಕೃತಿಯೆಂಬುದಿಂತು ನಾನಾ ಲಿಂಗಂ
ನಿರುತಂ ಪ್ರಾಣಂಗಳವೋಲ್
[ನ]ರಪಂ ಪ್ರಿಯನೆಂಬುದಿಂತು ನಾನಾ ವಚನಂ ೮೯

ಇಂತುಪಮಾಕ್ರಮಮನಪ
ಯಂತಂ ಗುಣಗಣಮನಱಿದು ಪೇೞ್ಗೆ ಕವೀಶರ್
ಸಂತತಮಿಂತಕ್ಕು ಕಾಂ
ತಾಂತಿಕಮತಿಶಯದ ಲಕ್ಷ್ಯಲಕ್ಷಣಯುಗದಿಂ ೯೦

(೮–ಅತಿಶಯೋಕ್ತಿ)

ಮೇರೆಗಳೆದಿರೆ ವಿಶೇಷ ವಿ
ಚಾರಮನಧಿಕೋಕ್ತಿಯೊಳ್ ತಗಳ್ಚುವುದಕ್ಕುಂ
ಸಾರತರಮತಿಶಯಾಲಂ
ಕಾರಂ ಮತ್ತದಱ ಲಕ್ಷ್ಯಮೀ ತೆಱನಕ್ಕುಂ ೯೧

ಗೈರಿಕರಸಾರ್ದ್ರಮಂ ಸಿಂ
ಧೂರದೆ ತಲೆವ[ಱೆ]ದುದಂ ಕರಂ ಕಂಡಾಂ ಸಂ
ಧ್ಯಾರಾಗದೊಳಱಿಯದೆ ಮದ
ವಾರಣಮಂ ಸೋಂಕಿ ಕೆಲದೊಳೊಯ್ಯನೆ ಪೋದೆಂ ೯೨

ಮಲಯಜಚರ್ಚಿತೆಯಂ ಕೇ
ವಲ ಧವಳಾಭರಣೆಯಂ ದುಕೂಲಾಂಬರೆಯಂ
ಕೆಲದೊಳ್ ನಿಲೆಯುಂ ಜ್ಯೋತ್ಸ್ನಾ
ವಿಲಾಸದೊಳ್ ಬಗೆದೆನಿಲ್ಲ ನಲ್ಲಳನಿನಿಸಂ ೯೩

ಆಶಾವಳಯಿತಲೋಕಾ
ಕಾಶಮಿದೇನತಿವಿಶಾಲಮೋ ನಿನ್ನ ಯಶೋ
ರಾಶಿಯನಿಂದುದ್ಯುತಿಯ ನಿ
ಕಾಶಮನೊಳಕೊಳ್ಗುಮಳವಿಗಟೆ ದಿರ್ದುದುಮಂ ೯೪

(೯–ಸದೃಶಯೋಗಿತಾ)

ಸ್ತುತಿನಿಂದೆಗಳಿಂ ಸವಿವ
ಕ್ಷಿತ ಗುಣದೊಳ್ ಸದೃಶಮಾಗಿ ಪೇೞ್ವುದು ಪೆಱತಂ
ನುತ ಸದೃಶಯೋಗಿತಾಲಂ
ಕೃತಿಲಕ್ಷಣಮಕ್ಕುಮಿಂತು ತದುದಾಹರಣಂ ೯೫

ಅಮರಾಧಿರಾಜ ಹುತವಹ
ಯಮ ನೈಋತ ವರುಣ ವಾಯು ಯಕ್ಷೇಶಾನ
ಕ್ರಮದಿನವರೆಣ್ಬರಂತು
ತ್ತಮನಯ್ನೀಂ ನವಮಲೋಕಪಾಳನೆ ಅವರೊಳ್ ೯೬

ಜಲದದ ನೆೞಲುಂ ಪರಪುಂ
ವಿಲಾಸಮುಂ ಬೆಳಗುವುದಿತ ವಿದ್ಯುಲ್ಲತೆಯುಂ
ನೆಲಸವು ಚಲಂಗಳಾದಂ
ವಿಲಾಸಿನೀಜನದ ನಲ್ಮೆಯುಂ ಸಂಗಮಮುಂ ೯೭

ಉಪಮಿತ ಭೇದೋಕ್ತಿಕ್ರಮ
ಮಪರಿಮಿತಾಖ್ಯಾಕೃತಿ ಪ್ರಯೋಗಾನುಗತಂ
ನೃಪತುಂಗ ದೇವಮತದಿಂ
ದುಪಮಾ ಭೇದಂಗಳಿಂದೆ ತಱಿಸಲ್ಗಱಿವಂ ೯೮

(೧೦ – ಆಕ್ಷೇಪ)

ವಿದಿತಾರ್ಥವಿಪರ್ಯಾಸಾ
ಸ್ಪದಮೆ ದಲಾಕ್ಷೇಪಮೆಂಬಳಂಕಾರಂ ಮ
ತ್ತದಱ ವಿಶೇಷ ವಿಭಾಗಮ
ನುದಾಹರಣ ಮಾರ್ಗದಿಂ ಪ್ರಯೋಗಿಸಿ ತೋರ್ಪೆಂ ೯೯

ಮೃದುತರಮಾರ್ಗದೆ ಕೆನ್ನಂ
ಮದನಶರಾನೀಕಮೊಯ್ಯನೊಲವಂ ಪಡೆಗುಂ
ಹೃದಯಮನ[ದವಟಲಿ]ಂದುಱ
ವಿದಾರಿಸುವುದಿಂತು ಕುಸುಮಮಯಮಲ್ತದಱಂ
(ವೃತ್ತಾಕ್ಷೇಪ) ೧೦೦

ಧನಮಂ ನೆರಪದೆ ವಿದ್ಯಾ
ಧನಮಂ ಮಾಡದೆ ತಗುಳ್ದು ನೆಗಟಿರದೆ ತಪದೊಳ್
ಮನುಜತ್ವಮಫಲಮಾಯ್ತೆಂ
ತೆನಗೆಂಬುದನಱವುದನುಶಯಾಕ್ಷೇಪಕಮಂ
(ಅನುಶಯಾಕ್ಷೇಪ) ೧೦೧

ಸರಸಿಜವಿರೋಧಿ ಕಾಂತ್ಯಾ
ಕರಮಮೃತಮಯಂ ತ್ವದೀಯ ಮುಖಶಶಿಯುಂಟಾ
ಗಿರೆ ಶಶಿಯದೇವುದೆಂಬುದು
ನಿರುತಂ ಶ್ಲೇಷಾನುವಿದ್ಧಮಪ್ಪಾಕ್ಷೇಪಂ
(ಶ್ಲೇಷಾಕ್ಷೇಪ) ೧೦೨

ವರ ಹಂಸಕದಂಬಕಮದು
ಶರದಂಬುದಮಲ್ತು ಮುಖರನೂಪುರ ಸಂವಾ
ದಿರವಂ ನೆಗಟ್ದಿಪ್ಪುದು ಬಂ
ಧುರಮದಱಂದಿದಱೊಳೆಂಬುದುಪಮಾಕ್ಷೇಪಂ
(ಉಪಮಾಕ್ಷೇಪ) ೧೦೩

ಮದಕರಿಯೋ ಘನಸಮಯಾಂ
ಬುದಮೋ ಘನಮಲ್ತು ನೆಗೞ್ದುದದಱಿೊಳ್ ಸಪ್ತ
ಚ್ಛದಗಂಧಸುರಭಿ ಪದುಳಂ
ಮದಕರಿಯೆನೆ ನೆನೆಗೆ ಸಂಶಯಾಕ್ಷೇಪಮಕಂ
(ಸಂಶಯಾಕ್ಷೇಪ) ೧೦೪

ಮಾನಧನಾ ಪೊಗೞಿಸಲೇಂ
ದಾನಿಯೆ ನೀನುಂತೆ ನಿನ್ನ ಕಸವರಮೆಂದುಂ
ದೀನಾನಾಥರ ಕೆಯ್ಯದು
ದಾನಿಯದೆಂತೆಂಬುದಿಂತು ಹೇತ್ವಾಕೇಪಂ
(ಹೇತ್ವಾಕ್ಷೇಪ) ೧೦೫

ವ್ಯತಿರೇಕವಿಕಲ್ಪಮಿದೆಂ
ದತಿಶಯಧವಳೋಪದೇಶಮಾರ್ಗಕ್ರಮದಿಂ
ದತಿನಿಪುಣರಱಿದುಕೊಳ್ಗನು
[ಮಿ]ತಿಯಿಂದಾಕ್ಷೇಪಮೆಂಬಳಂಕಾರಮುಮಂ ೧೦೬

(ಗೀತಿಕೆ)
ಪ್ರತಿಪದಾರ್ಥತತ್ತ್ವಭೇದದೊಳ್
ಪ್ರತಿಷೇಧಮಂ ನೆಗೞ್ಗುಮನಿತೆ ಮಾೞ್ಕೆಯಿಂ
ದತಿಶಯಾಕ್ಷೇಪಗಣನಾವ್ಯತಿ
ಗತಿ ನೃಪತುಂಗದೇವಮಾರ್ಗದೊಳ್ ೧೦೭

(೧೧–ಶ್ಲೇಷೆ)
(ಕಂದ)
ನಾನಾರ್ಥಮೇಕರೂಪಾ
ಧೀನವಚೋರಚಿತಮಪ್ಪೊಡಕ್ಕುಂ ಶ್ಲೇಷಂ
ಮಾನಿತಮಳಂಕ್ರಿಯಾನುವಿ
ಧಾನಂ ಮತ್ತಿಂತು ತದುಪಲಕ್ಷ್ಯವಿಕಲ್ಪಂ ೧೦೮

ಉದಯಾರೂಢಂ ಕಾಂತ್ಯಾ
ಸ್ಪದನನುರಕ್ತಾತ್ಮಮಂಡಳಂ ಕುಮುದಕರಂ
ಮೃದುತರಕರಂಗಳಿಂದತಿ
ಮುದಮಂ ಲೋಕಕ್ಕೆ ಪಡೆಗುಮಿಂತೀ ರಾಜಂ ೧೦೯

ವಿಪುಳತರಕಟಕನುದ್ಯದ್
ದ್ವಿಪಹ[ರಿ]ಮಹಿಷೀನಿಷೇವ್ಯನುನ್ನತಪಾದಂ
ವ್ಯಪನೀತಶ್ರೀಫಲದಂ
ವಿಪರೀತಕನಪ್ಪನಂತು ಭೂಭೃನ್ನಾಥಂ ೧೧೦

ನೆರೆದ ವಿಸಂವಾದಂ ಪಂ
ಜರಶುಕತತಿಯೊಳ್ ಕುಲಾಲಗೇಹಂಗಳೊಳಂ
ಪರಚಕ್ರಭ್ರಾಂತಿಗಳ
ಧ್ವರದೊಳೆ ನೆಗಟ್ಟುಂ ಮಹಾಹವಧ್ವನಿನಿಯತಂ ೧೧೧

ಅರಿಗೋತ್ರಭೇದಿ ವಿಬುಧೇ
ಶ್ವರನಲ್ಲಂ ಧೃತಕಳಾಕಳಾಪಂ ದೋಷಾ
ಕರನಲ್ಲಂ ವಿದಿತೋಮಾ
ವರನಾತ್ತ ಭುಜಂಗನಲ್ಲನೀ ಭೂಪಾಳಂ ೧೧೨

ವರರೂಪಕಾದ್ಯಳಂಕಾ
ರರಚನೆಯೊಳ್ ಮುನ್ನೆ ಪೇೞ್ದು ಬಂದೆಂ ಕೆಲವಂ
ದೊರೆಕೊಳೆ ಬಗೆಗೀ ತೆಱದಿಂ
ನಿರಂತರವಿರುದ್ಧನಿಯಮಿತ ಶ್ಲೇಷೆಗಳಂ ೧೧೩

(೧೨ – ಉತ್ಪ್ರೇಕ್ಷೆ)

ತಱಿಸಂದು ಪಲವು ತೆಱದಿಂ
ತೆಱೆದಿರೆ ನಿಗಟ್ಟಿರ್ದುದೊಂದು ವಸ್ತುಸ್ಥಿತಿಯಂ
ಮಱಿಸಿ ಪೆಱತೊಂದು ಮಾಳ್ಕೆಯಿ
ನಱಿಪುವುದುತ್ಪ್ರೇಕ್ಷೆಯೆಂಬುದಿಂತದಱ ತೆಱಂ ೧೧೪

ನಡುವಗಲ ಬಿಸಿಲ್ ತನ್ನಂ
ಸುಡೆ ವನಕರಿ ಕಮಳಬಂಧುವೊಳ್ ದಿನಕರನೊಳ್
ಕಡುಗಾಯ್ಪೆನೆ ಸರಸಿಜಮಂ
ಕಿಡಿಸಲ್ ತಾಂ ಪೊಕ್ಕುದಾಗ ಬಗೆ[ದಾ]ಕೊಳನಂ ೧೧೫

ನೆಲಸಿ ಕಿವಿಯೊಳ್ ಮದಾಯತ
ವಿಲೋಕದೊಳ್ ಪೊಳೆವುದೊಳ್ಪಿನೆಂದೀ ಕರ್ಣೋ
ತ್ಪಲಮುಮನಾಕ್ರಮಿಸುವುದಿದು
ವಿಲಾಸಿನೀ ನಿನ್ನ ಲೋಲಲೋಚನಯುಗಳಂ ೧೧೬

(೧೩ – ಸೂಕ್ಷ್ಮ)

ಬಗೆದಿಂಗಿತಚೇಷ್ಟಾಕಾ
ರಗತಂಗಳಿನಂತರಂಗದೊಳ್ ಮರೆಸಿದುದಂ
ಮಿಗೆ ಸೂಚಿಸುವುದು ಸೂಕ್ಷ್ಮಾ
ನುಗತಾಳಂಕಾರಮಿಂತು ತದುದಾಹರಣಂ ೧೧೭

ತಿಳಿಪಲಡಿಗೆಱಗಿದೋಪನ
ತಳಂಗಳಾ ತೀಟದಿಂ ಪದಂಗಳೊಳೊಗೆದಾ
ಪುಳಕಚಯಂಗಳ್ ಕಳೆದುವು
ಮುಳಿಸಂ ನಲ್ಲಳ್ಗೆ ಬೆಳ್ಮೊಗಂಗೆಯ್ದಿರೆಯುಂ ೧೧೮

ಪರುಷಾಳಾಪಮುಮತಿ ನಿ
ಷ್ಠುರ ವೀಕ್ಷಣಮುಖವಿಕಾರಮುಂ ಮಱಸಿರೆಯುಂ
ತರಳಾಪಾಂಗಮುಮಾಕೆಯ
ದರಹಸಿತಮುಮಱಿಯೆ ಪೇೞ್ದುಮೆಱಕಮನೆರ್ದೆಯೊಳ್ ೧೧೯

(೧೪ – ವಿಶೇಷ)

ಗುಣಜಾತ್ಯಾದಿಗಳೊಳಗನು
ಗುಣಮಾಗಿರೆ ಪೇೞದವಱ ವಿಕಳತೆಯಂ ಸ
ಯ್ತೆಣಿಸಿ ವಿಶೇಷಮನಱಿಪುವ
ಗಣನೆ ವಿಶೇಷಾನುಭಾವ ಸದಳಂಕಾರಂ ೧೨೦

ಅಲರಂಬು ಕರ್ಬುವಿಲ್ ಕೋ
ಮಲ ಸರಸಿಜನಾಳತಂತುತಿರು ಮತ್ತಿವಱಾ
ಬಲದಿನಗಲ್ದರನೆಚ್ಚಾ
ತ್ರಿಲೋಕಮಂ ಕಂತು ಬಸಕೆ ಬರಿಸುವನೆಂತುಂ ೧೨೧

ಸ್ಫುರಿಯಿಸದೆ ದಶನವಸನಾಂ
ತರಮಾರಕ್ತಂಗಳಾಗದೆನಸುಂ ಕಣ್ಗಳ್
ಭರಿತ ಭ್ರೂಕುಟಿ ಕಲಮಾ
ಗಿರದೆ ಮುಖಂ ಗೆಲ್ದನಿಂತುವರಿನೃಪಬಲಮಂ ೧೨೨

(೧೫ – ಸಮಾಹಿತ)

ಪರ[ವ]ಸದ ಬಗೆಯೊಳೊಂದಂ
ದೊರೆಕೊಳಿಸುವುದಱಿಗತರ್ಕಿತೋಪಸ್ಥಾನಂ
ನಿರುತಂ ಸಮಾಹಿತಾಳಂ
ಕರಣಾಂತರಮಕ್ಕುಮಿಂತು ತದುದಾಹರಣಂ ೧೨೩

ಮುಳಿದಿರ್ದ ನಲ್ಲಳಲ್ಲಿಗೆ
ತಿಳಿಪಲ್ಪೋಪೆನ್ನ ಬಗೆಗೆ ದೊರೆಕೊಳೆ ಮತ್ತಿಂ
ತೆಳವೆಱೆ ಗಗನಾಂತರದೊಳ್
ಪೊಳೆದತ್ತೆತ್ತಂ ವಸಂತಸಮಯೋತ್ತಂಸಂ ೧೨೪

ತಡೆತಡೆದು ಕಾಂತನಲ್ಲಿಗೆ
ನಡೆಯಲ್ ಬಗೆದೆನಗೆ ಕಾರ ಕಾರಿರುಳೊಳ್ಸ
ಯ್ತಡವಡಿಕೆಗಳಂ ತೊಡೆದ
ತ್ತೆಡೆವಱಿಯದೆ ಪೊಳೆವ ಮಿಂಚು ಮುಗಲೆಡೆಯೆಡೆಯೊಳ್ ೧೨೫

(೧೬ – ಸಮಾಸೋಕ್ತಿ)

ತಱಿಸಂದು ಮನದೊಳೊಂದಂ
ಪೆಱತಂ ಮತ್ತದನೆ ಪೋಲ್ವುದಂ ಕುಱಿಪುಗಳಂ
ಕುಱಿಮಾಡಿ ಮಾಡಿ ಪೇೞ್ವುದು
ನೆಱೆಯೆ ಸಮಾಸೋಕ್ತಿಯೆಂಬುದಿಂತದಱ ತೆಱಂ ೧೨೬

ತಾಮರೆಯರಲೊಳ್ ಸರಸನಿ
ಜಾಮೋದದೊಳೊಂದಿ ನಲಿದು ಮಕರಂದರಜೋ
ವ್ಯಾಮುಗ್ಧದೊಳೀ ಮುಗುಳೊಳ
ಮಾ ಮಾಟ್ಕೆಯನಱಿಸಿ ಸುಟಿವುದಳಿ ಕೆಲಕೆಲದೊಳ್ ೧೨೭

ನೆರೆದತಿವಿದಗ್ಧಗಣಿಕಾ
ಸುರತಾಸವಸೇವನಾಕೃತೋದನನಾಗಿ
ರ್ದಿರದೆ ತರುಣೀರತಾಂತರ
ಸರಾಗಮಂ ಪೇೞ್ವುದಲ್ಲಿ ತುಂಬಿಯ ನೆವದಿಂ ೧೨೮

ದಾನಪರನಂ ನಿಜೋನ್ನತ
ಮಾನನನಾರೂಢವಿಪುಳ ವಂಶನನಂತೊಂ
ದಾನೆಯನಪಾಯಪಂಕದೊ
ಳೇನುಂ ತಳ್ವಿಲ್ಲದಿರ್ದ್ದುದಂ ಕಾಣಿಸಿದಂ ೧೨೯

ತ್ಯಾಗಾದಿಗುಣಗಣೋದಯ
ಭಾಗಿಯನೇನಾನುಮೊಂದುಪಾಯಾಂತರ [ದಿ]ಂ
ನೀಗಲ್ನೆಱೆಯದೆಯನುಪಮ
ನೀ ಗಣಿದದಿನಾನೆ ಮಾಡಿ ನುಡಿದಂ ಬಗೆಯಂ ೧೩೦

(೧೭ – ಪರ್ಯಾಯೋಕ್ತಿ)

ಬಗೆದರ್ಥಮನಱಿಪದೆಮೆ
ಲ್ಲಗೆ ತಿರ್ದುವ ಬಗೆಯನದಱ ನೆವದಿಂ ಪೆಱತಂ
ನಿಗದಿಸುವುದು ಪರ್ಯಾಯೋ
ಕ್ತಗತಾಳಂಕಾರಮದಱ ಪಾಂಗಿಂತಕ್ಕುಂ ೧೩೧

ನೀಮಿರ್ವರುಮನ್ನೆಗಮಿಂ
ತೀ ಮಾಟ್ಕೆಯೊಳಿನಿಸು ಪೊೞ್ತು ನುಡಿವುತ್ತಿರಿಮಾ
ನಾಮೋದ ಕುಸುಮಸಮಿತಿಯ
ನಾ ಮರಗಳೊಳಾಯ್ದು ಕೊಯ್ದುಮಿಲ್ಲಿಗೆ ಬರ್ಪೆಂ ೧೩೨

ಕೆಳದಿಯನಭಿಮತಮುಮನೊ
ರ್ಬುಳಿಗೂಡೆ ವಿದಗ್ದೆ ಸುರತಸೇವನಮಂ ಮೊ
ಕ್ಕಳಮವರ್ಗೆ ಮಾಡಲೆಂದಾ
ಗಳೆ ಪೋಗಲ್ ಬಗೆದು ನುಡಿದಳಿಂತೀ ಮಾತಂ ೧೩೩

(೧೮ – ವಿರೋಧ)

ಒಂದೊಂದಱೊಳೊಂದದುವಂ
ತಂದೊರ್ಬುಳಿಮಾಡಿ ತದ್ವಿಶೇಷಾಂತರಮಂ
ಸಂದೇಹಮಿಲ್ಲದಱಿಪುವು
ದೊಂದೆ ವಿರೋಧಾಬಿಧಾನಮದುಮಿಂತಕ್ಕುಂ ೧೩೪

ಶರದಾಗಮದೊಳ್ಕಳಹಂ
ಸರವಂ ಪೆರ್ಚಿತ್ತು ಕಿವಿಗೆ ಸೊಗಯಿಸಿ ಪೀನಂ
ವಿರಳತರಮಾಯ್ತು ಬರ್ಹಿಣ
ವಿರಾವಮುರುಮುದವಿರಾಮ ವಿರಸ ವಿರಾಗಂ ೧೩೫

ಮಲಯಾನಿಳನೆಸಕದಿನುದಿ
ರ್ವಲರ್ಗಳ ಮಕರಂದಮಾಲೆಗಳ್ ಪರೆದೆತ್ತಂ
ನೆಲದೊಳ್ ಬಿಟ್ಟುಂ ಪಡೆದುವು
ವಿಲೋಚನಾಂಬುಗಳನಗ್ಗಳಂ ವಿರಹಿಗಳಾ ೧೩೬

ದೊರೆಕೊಳ್ವಂತಿರೆ ಮುನ್ನಂ
ವಿರೋಧಿಗತಮಾರ್ಗಭೇದಮಂ ತೋಱಿದೆನಾ
ದರದಿನುಪಮಾದಿಗಳೊಳಂ
ನಿರುತಮನುಕ್ತಮುಮನಱಿಗೆ ಲಕ್ಷ್ಯಾಂತರದೊಳ್ ೧೩೭

(೧೯ – ಅಪ್ರಸ್ತುತ)

ಪ್ರಸ್ತುತಮಲ್ಲದುದನೆ ಮಿಗೆ
ವಿಸ್ತಾರಿಸಿ ನೆಗೞೆ ಪೇೞ್ದೊಡಕ್ಕುಂ ಮತ್ತ
ಪ್ರಸ್ತುತಮೆಂಬುದಳಂಕೃತಿ
ವಿಸ್ತರಮಿಂತಕ್ಕುಮದಱ ಲಕ್ಷ್ಯವಿಭಾಗಂ ೧೩೮

ಮೃಗಗಣಮೆ ಸುಖಂ ಬಾಳ್ಗುಂ
ಸೊಗಯಿಸುವ ವನಾಂತರಾಳದೊಳ್ ಬಹುತೃಣದೊಳ್
ಬಗೆದಳಿಪಿ ಸುಟಿದು ನೋಡದೆ
ಮೊಗಮಂ ವಸುಮದವಿರಾಮ ಕಲುಷಾಯತರಾ ೧೩೯

ಸಂತಂ ಮೃಗಗಣವೃತ್ತಿಯ
ನಿಂತಪ್ರಸ್ತುತಮನಱಿಪಿದಂ ಪರಸೇವಾ
ಚಿಂತಾವಿಷಾದಿತಾಂತ
ಸ್ಸ್ವಾಂತಂ ಸಂತೈಸಲೆಂದು ತನ್ನಂ ತಾನೇ ೧೪೦

(೨೦ – ನಿದರ್ಶನ)

ಗುಣದೋಷಾದಿಗಳಿಂದನು
ಗುಣಮಾಗಿರೆ ಪೇೞ್ದು ತದನುಸದೃಶದಿನೊಂದಂ
ಪ್ರಣಿಹಿತ ನಿದರ್ಶನಕ್ರಮ
ದೆಣಿಸುವುದಕ್ಕುಂ ನಿದರ್ಶನಾಲಂಕಾರಂ ೧೪೧

ಅಮಳಿನ ಗುಣವೃತ್ತಿಗಳಿಂ
ಸಮುಪಸ್ಥಿತ ಸಕಳಜನಗತೋಚಿತಗುಣಮಂ
ಸಮನಾಗಿಸುವರ್ ಕನ್ನಡಿ
ಕಮನೀಯಾಕಾರ ಬಿಂಬಮಂ ತಾಳ್ದುವವೋಲ್ ೧೪೨

ಜನಮಱಿಯದನ್ನೆಗಂ ಮು
ನ್ನಂ ನಯಮಱಿದಱಿಪಲಾರ್ಪೊಡದು ಮಂತ್ರಿಗುಣಂ
ಜನವಾದಂ ನೆಗೞ್ದ ನಗ
ಧ್ವನಿವೋಲನುಕರಣವಾರ್ತೆ ಮಂತ್ರಿಯ ಗುಣಮೇ ೧೪೩

ತಲೆಸೂಡಿ ಮುನ್ನೆ ಕಜ್ಜದ
ಫಲಮಂ ಬೆಸಗೊಂಡುಮೆ[ೞ]ವನಲ್ಲಿಂ ಬೞಿಯಂ
ತಲೆಯಂ ಕಿಱಿಯಿಸಿ ದಿವಸಮ
ನಲಸದೆ ಬೆಸಗೊಳ್ವನಂತು ಗಾವಿಲನಕ್ಕುಂ ೧೪೪

ಪ್ರತಿಕೂಲನಾಗಿ ನಿಲೆ ವಿಧಿ
ಮತನಯಮನುಕೂಲಮಾಗಿ ನಿಲೆಯುಂ ಕಾರ್ಯ
ಸ್ಥಿತಿಯಂ ಸಾಧಿಸಲಾಗದು
ಮೃತಕಕೃತೋಪಕೃತಿಯವೊಲನರ್ಥಾಯಾಸಂ ೧೪೫

ಪದೆದುದಯಿಸಲೆಂದುಂ ಕಾ
ಲದೊಳಲ್ಲದುದಾರತೇಜನರ್ಕನುಮಲ್ಲಂ
ಸದುದಿತ ಗುಣನದಱಿಂ ನಯ
ವಿದನಪ್ಪಂ ಕಾಲಮಂ ನೆರಂ ತೋರ್ಕೆ ನೃಪಂ ೧೪೬

ಪಡೆಯಱಿಯಲಾದೊಡ [ರಿ] ಯಂ
ಕಿಡಿಸುಗುಮಂತಃಕಳಂಕ ನೃಪಮಂಡಲಮಂ
ತಡಯದೆ ತಮಸ್ಸ್ವಭಾವಂ
ಕಿಡಿಸುವವೋಲಱಿದು ರಾಹು ಶಶಿಮಂಡಲಮಂ ೧೪೭

ಕಿಱಿದೆಂದೇಳಿಸಿ ಪಗೆಯಂ
ಪಱಿಪಡೆ ಕಿಡಿಸದೊಡೆ ಪೆತ್ತು ಕಾಲದ ಬಲಮಂ
ನೆಱಿದಿಱಿಗುಂ ನೆ[ರೆ]ದನುವಂ
ಮಱಿಸುವವೊಲ್ದಿವಸಕರನನಂಬುದನಿವಹಂ ೧೪೮

ಒಳಗಿರ್ದ ವೈರಿಗಳ್ ಮೊ
ಕ್ಕಳಮೀಯರ್ ಪೆರ್ಚಲಧಿಕವಿಭವರ್ಕಳುಮಂ
ತಳರದೊಡನಿರ್ದು ಬಡಬಾ
ನಳನೆಂದುಂ ಪೆರ್ಚಲೀಯ [ದಂ] ತಂಬುಧಿಯಂ ೧೪೯

ಪರಪಕ್ಷಮುಳ್ಳಿನಂ ತನ
ಗಿರವುಬ್ಬಸಮದಱಿನ[ಱಿ]ವುದದನೇಗೆಯ್ದುಂ
ಪರೆದ ಪುಡಿಯೆಲ್ಲಮಂ ನೀರ್
ನೆರೆದು ಕೆಸರ್ಮಾಡದನ್ನೆಗಂ ನೆಲಸುಗುಮೇ ೧೫೦

ಕುಱಿಗೊಂಡು ನೆಗಟ್ದನಿಚ್ಛೆಯ
ನಱಿಯದೆ ತನ್ನಿಚ್ಛೆಯಿಂದೆ ಕಜ್ಜಂಬೇೞ್ವಂ
ತಱಿಸಲಿಸಲಾಱನಾರ್ತನ
ತೆಱನಱಿಯದೆ ಮರ್ದುವೇೞ್ವ ಬೆಜ್ಜನ ತೆಱದಿಂ ೧೫೧

ಪರಿಣಾಮಪಥ್ಯಮಂ ಸುಖ
ಪರಿಕರಮಂ ಮೆಚ್ಚದನ್ನರಾರೀ ಮಾತಂ
ನಿರತಿಶಯ ರಸಸಮೇತಮ
ನರೋಚಕಂ ಮೆಚ್ಚದಂತೆ ಸೊಗಯಿಸುವುಣಿಸಂ ೧೫೨

ಇಂತುದಿತ ಭೇದಮಂ ದೃ
ಷ್ಟಾಂತಾಳಂಕಾರಮಾರ್ಗಮಂ ಕನ್ನಡದೊಳ್
ಸಂತತಗುಣಮಂ ಕೈಕೊ
ಳ್ವಂತಾಗಿರೆ ಬಗೆದು ಪೇೞ್ಗೆಪರಮ ಕವೀಶರ್ ೧೫೩

(೨೧ – ಸಹೋಕ್ತಿ)

ಗುಣಜಾತ್ಯಾದಿಗಳಿಂ ದೊರೆ
ಯೆಣಿಸುವುದು ಸಹೋಕ್ತಿಯೆಂಬುದಕ್ಕುಂ ನಾನಾ
ಗಣನಾವಿಶೇಷಮಾಗೀ
ಗಣಿದದಿನಾರ್ಯೆದುಕೊಳ್ಗೆ ಲಕ್ಷ್ಯಮನದಱಾ ೧೫೪

ಅತಿಧವಳಮಾಯ್ತು ಗುಣಸಂ
ತತಿಯೊಡನೆ ಯಶೋವಿತಾನಮಾಶಾಧೀನಂ
ಸತತಂ ಪೆರ್ಚಿತ್ತು ನಿಜಾ
ಯತಿಯೊಡನೆ ಮಹಾವಿಭೂತಿ ಪರಮೋದಯನಾ ೧೫೫

(೨೨ – ಸಂಕೀರ್ಣ)

ಸಂಕೀರ್ಣಮೆಂಬುದಕ್ತಾ
ಳಂಕಾರಸಮೂಹ ಸಂಕರ ಕ್ರಮಮಕ್ಕುಂ
ಶಂಕಾವಿರಹಿತಚಿತ್ತರ
ದಂ ಕಾವ್ಯದೊಳಿಂತು ಪೇೞ್ಗೆ ಕವಿವೃಷಭರ್ಕಳ್ ೧೫೬

ಅಪರಾಗಂ ಮುನಿಪತಿವೋ
ಲಪಗತಗುಣನಾಗಿಯುಂ ನಿಜಾಯತದೋಷಂ
ವಿಪುಳ ಯಶೋಧನಲೋಭಂ
ನೃಪವೃಷಭನರಾತಿನಿಕರತರುದವದಹನಂ ೧೫೭

(೨೩ – ಪರಿವೃತ್ತಿ)

ಪರಿವೃತ್ತಿಯೆಂಬುದಕ್ಕುಂ
ನಿರುಪಮಮರ್ಥಸ್ವರೂಪ ವಿನಿಮಯ ವಚನಂ
ಪರಮಗುಣೋದಯಮದಱಾ
ಸ್ವರೂಪಮಂ ಬಗೆದುಕೊಳ್ಗೆ ಮತ್ತೀ ತೆಱದಿಂ ೧೫೮

ಅರಿಗೆ ದುರಾಹವರಂಗಾಂ
ತರದೊಳಭೀತಂ ನಿಜಾರಿಸಮಿತಿಗಳಿಂದಂ
ನೆರೆದ ಜಯಂಗೊಂಡಾಗಡೆ
ಸುರಾಂಗನಾಸುರತವಿಷಯಸುಖಮಂ ಕೊಟ್ಟಂ ೧೫೯

(೨೪ – ವ್ಯಾಜಸ್ತುತಿ)

ಅತಿಶಯಮಾಗಿರೆ ಗುಣಸಂ
ತತಿಯಂ ದೋಷಮನೆ ಪೇೞ್ದವೋಲ್ ಪೇೞ್ವುದು ನಿ
ಶ್ಚಿತ ಶಬ್ದಾರ್ಥಂ ವ್ಯಾಜ
ಸ್ತುತಿಯೆಂಬುದುಮದಱ ಮಾಟ್ಕೆ ಮತ್ತಿಂತಕ್ಕುಂ ೧೬೦

ಜಲರಾಶಿಪ್ರಭವೆಯನವಿ
ಕಲ ಕೃಷ್ಣಗುಣಾನುರಕ್ತೆಯಂ ಮಿಗೆ ಲಕ್ಷ್ಮೀ
ಲಲನೆಯನಾಂತುಂ ವಕ್ಷ
ಸ್ಥಲದೊಳ್ ಪೇೞೆಂತುದಾರ ಚರಿತನೆ ಅಪ್ಪಯ್ ೧೬೧

ಸತತಂ ಭುಜಂಗಭೋಗಾ
ಶ್ರಿತೆ ನಿನ್ನ ಕಳತ್ರಮೀ ಧರಾವಧು ಮತ್ತೆಂ
ತತಿಶಯದೆ ಮಹಾಪುರುಷ
ವ್ರತಮಂ ತಾಳ್ದುವಳುದಾರಚರಿತಕ್ರಮದಿಂ ೧೬೨

(೨೫ – ಹೇತೂಕ್ತಿ)

ಕಾರಣಮಾಗಿರ್ಪುದಳಂ
ಕಾರಂ ಹೇತೂಕ್ತಿಯೆಂಬುದದು ತಾಂ ನಾನಾ
ಕಾರಂ ಜ್ಞಾಪಕ ಸದಳಂ
ಕಾರಸುಮಾರ್ಗ ಪ್ರಯೋಗಮೀ ತೆಱನದಱಾ ೧೬೩

ಇಂದು ಕಿರಣಂಗಳಿಂದಂ
ಚಂದನರಸದಿಂದೆ ಮಾಗಿಯಾ ನೀರಿಂದಂ
ನಂದದು ಪರಿತಾಪಾನಳ
ನಿಂದಱಿದೆಂ ನಿನ್ನ ಮೆಯ್ಯ ಕಾಮಜ್ವರಮಂ ೧೬೪

ಅಱಿವುಳ್ಳವರೊಳ್ಬೆರಸದು
ದಱಿಂದಮಱಿಯದರೊಳಪ್ಪ ಪರಿಚಯದಿಂದಂ
ನೆಱೆಯಿಂದ್ರಿಯಮಂ ಗೆಲ್ಲದು
ದಱಿಂದಮಕ್ಕುಂ ಜನಕ್ಕೆ ಪೀನಂ ಬೆಸನಂ ೧೬೫

ಬೆಳೆದೊಱಗಿದ ಕೞಮೆಗಳುಂ
ತಿಳಿಗೊಳದೊಳಗಲರ್ದ ಸರಸಿಜಪ್ರತತಿಗಳುಂ
ಕಳಹಂಸೆಗಳ್ಗೆ ಕೋಮಳ
ವಿಳಾಸವತಿಗಳ್ಗೆ ಪಡೆಗುಮೊಸಗೆಯನಾಗಳ್ ೧೬೬

ತಿಳಿಗೊಳಗಳುಮಮಳಾಶಾ
ವಳಯಮುಮತಿಧವಳ ಜಳದ ಜಳಧರಪಥಮುಂ
ತೊಳಪೆಳವೆಱಿಯುಂ ಕಳೆದುವು
ಮುಳಿಸಂ ಕಾಮಿಗಳ ಚಿತ್ತದೊಳ್ ನೆಲಸಿದುದಂ ೧೬೭

(೨೬ – ವಿಭಾವನಾ)

ಕಾರಣಮನಱಿ [ಪಿ] ನಿಜ ಸಂ
ಸ್ಕಾರಗುಣಾತಿಶಯದೊಳ್ ತಗುಳ್ಚುವುದಕ್ಕುಂ
ಸಾರ ವಿಭಾವನಾಳಂ
ಕಾರಂ ಮತ್ತದಱ ಲಕ್ಷ್ಯಮೀತೆಱನಕ್ಕುಂ ೧೬೮

ಸಮಱುಗೆಯಿಲ್ಲದ [ಮುಱು]ಕಮು
ಮಮರ್ದಿರೆ ಕೆಯ್ಗೆಯ್ಯದೊಪ್ಪುವಂದಮುಮವಳಾ
ನೆವಮಿಲ್ಲದ ದರಹಸಮುಂ
ಸಮದಾಲಸಲಲಿತಗಮನಮುಂ ಸೊಗಯಿಸುಗುಂ ೧೭೯

(೨೭ – ಲೇಶ)

ಗುಣದೊಳಮಱಿಪುವುದಿನಿಸವ
ಗುಣಮಂ ದೋಷದೊಳಮಿನಿಸು ಗುಣಮಂ ತಂದಿ
ರ್ದಣಿಸುವುದು ಲೇಶಮೆಂಬುದು
ಗಣಿದದಿನಿಂತಕ್ಕುಮದಱ ಲಕ್ಷ್ಯವಿಭಾಗಂ ೧೭೦

ಮಾನಿಯುಮುದಾರಚರಿತನು
ಮಾನತರಿಪುನಿಕರನುಂ ಮನಸ್ವಿಯುಮಂತಾ
ಮಾನಸರನಾರುಮಂ ಮನ
ಕೇನುಂ ಮುಟ್ಟಲ್ಲದಂತು ಬಗೆವುದು ದೋಷಂ ೧೭೧

ಕುಲಜನುಮಲ್ಲಂನಣ್ಪಿನ
ಬಲಮುಂ ತನಗಿಲ್ಲ ಕಣ್ಣಮೇಳಿದನಾರೊಳ್
ನೆಲಸಿರನೆಲ್ಲಿಯುಮ[ವನ]ಂ
ಚಲವೆಂದುಂ ಪತ್ತುವಿಡದದೊಂದುಂಟುಗುಣಂ ೧೭೨

(೨೮ – ಉದಾತ್ತ)

ಮಿಗೆ ಮನದ ಪೆಂಪುಮಂ ಕೈ
ಮಿಗೆ ವಿಭವದ ಪೆಂಪುಮಂ ವಿಶೇಷಿಸಿ ಪೇೞಲ್
ಬಗೆವುದುದಾತ್ತಾಲಂಕಾ
ರ ಗುಣೋದಯಮದಱದಿಂತು ಸದುದಾಹರಣಂ ೧೭೩

ಚಲದೆಡೆಗೆ ಪಿರಿದು ರಜಮುಂ
ನೆಲನುಂ ಪ್ರಿಯದೆಡೆಗೆ ಕಿಱಿದು ಕೊಳ[ಲುಂ] ಕುಡಲುಂ
ಚಲಮುಂ ಪ್ರಿಯಮುಂ ಬೞಿ ಸಮ
ಬಲಮಾಗಿರೆ ನೆಗೞ್ವೆ ಬಗೆಗೆ ಕಿಱಿದೇಂ ಪಿರಿದೇಂ ೧೭೪

ಅಱಿದಱಿಪಿ ಬೞಿಯನುೞಿಯದೆ
ಪೞಿವರುಮಂ ತವಿಸಿ ಕೞಿಯದುೞಿವೞಿನಾದಂ
ಪೞಿಕೆಯ್ದು ತೋಱ್ತುನುೞಿದಂ
ತುೞಿದಮಹಾಪುರುಷರೞಿಯದುೞಿದರೆ ಸಿರಿಯಂ ೧೭೫

ಕಸವರಮೆಂಬುದು ನೆಱೆ ಸೈ
ರಿಸಲಾರ್ಪೊಡೆ ಪರವಿಚಾರಮಂ ಧರ್ಮಮುಮಂ
ಕಸವೇಂ ಕಸವರಮೇನು
ಬ್ಬಸಮಂ ಬಸಮಲ್ಲದಿರ್ದು ಮಾಡುವರೆಲ್ಲಂ ೧೭೬

ಪಾೞಿ ನಿಲೆ ನೆಗೞಿ ಬಾೞ್ವುದು
ಬಾೞೆಂಬುದು ನಿಕ್ಕುವಂ ಗುಣಗ್ರಾಮಣಿಗಳ್
ಪಾೞಾಗೆ ತೆಗೞೆಬಾೞ್ವಾ
ಬಾೞೇನಾಚಂದ್ರತಾರಮೋ ಮಾನಸರಾ ೧೭೭

ಪೊಲ್ಲಮೆಯುಂ ಗುಣಮುಂ ತಮ
ಗಲ್ಲದೆ ಪುದುವಲ್ಲ ಮತ್ತೆ ತನಗುಂ ಪೆಱರ್ಗಂ
ನಿಲ್ಲದೆ ಜನಮುಂತಾಗಿಯು
ಮೆಲ್ಲಂ ಮುನಿಸೊಸಗೆವೆರಸು ಪೞಿಗುಂ ಪೊಗೞ್ಗುಂ ೧೭೮

ಮಿಗೆ ಪೞಿವರೆನ್ನನೆನ್ನದೆ
ಪೊಗೞ್ವರ್ ನೆರೆದೆಲ್ಲರೆನ್ನನೆನ್ನದೆ ತೆನ್ನೊಳ್
ಬಗೆದುಭಯಲೋಕಹಿತದೊಳ್
ನೆಗೞೆ ಜನಂ ಪೞಿಗೆ ಪೊಗೞ್ಗೆ ತನಗೇನದಱೊಳ್ ೧೭೯

ಪ್ರಣತಾರಿ [ಘ]ಟಿತಮುಕ್ತಾ
[ಮಣಿಗಣಮು]ತ್ತಂಸದಿಂ ಕಱಲ್ತುದಿರೆ ಸಭಾಂ
ಗಣಮೊಪ್ಪೆ ವೀರನಾರಾ
ಯಣನಾ ತಾರಕಿತನಭದವೋಲ್ ಸೊಗಯಿಸುಗುಂ ೧೮೦

ಪರಚಕ್ರಭೂಪರಟ್ಟಿದ
ಕರಿಗಳ್ ಬಿಡುತಪ್ಪ ಮದದ ಪೊನಲಿಂದೆತ್ತಂ
ನರಲೋಕಚಂದ್ರನಾ ಮಂ
ದಿರದೊಳಗೊಳಗೆಲ್ಲ ಕಾಲಮುಂ ಕೆಸಱಕ್ಕುಂ ೧೮೧

(೨೯ – ಅಪಹ್ನುತಿ)

ಅತಿಶಯಿತ ವಸ್ತುವಿಷಯ
ಪ್ರತೀತಿಯಂ ಮಱಸಿ ನಿಱಸಿ ಪೇೞ್ವುದು ಪೆಱತಂ
ಸತತಮಪಹ್ನುತಿ ಸದಳಂ
ಕೃತಿ ಮತ್ತಿಂತಕ್ಕುಮದಱ ಲಕ್ಷ್ಯವಿಕಲ್ಪಂ ೧೮೨

ಅಮೃತಮಯಕಿರಣನೆಂಬುದು
ಮಮರದು ಶಿಶಿರಾಂಶುವೆಂಬುದುಂ ಶಶಿಗೆಂದುಂ
ಸಮನಿಸಿ ವಿಷಕಿರಣನುಮನ
ಲಮರೀಚಿಯುಮೆಂದೆನಲ್ಕೆ ಮೋಹಾಪೋಹಂ
(ಮೋಹಾಪೋಹಂ) ೧೮೩

ಕುಸುಮಂಗಳೆಂಬ ಮಾತದು
ಪುಸಿ ದಹನಮಯಂಗಳಂಬುಗಳ್ ಮನಸಿಜನಾ
ಜಸಮಟಿಯೆ ಸುಡುವು[ವೆ]ರ್ದೆಯಂ
ಬಿಸಿಯವಿವೆಂದಿಂತೆ ಪೇೞ್ ಧರ್ಮಾಪೋಹಂ ೧೮೪

ಸ್ಮರನಸ್ತ್ರಮಿತಿಯದು ನಿ
ರ್ಭರಮಂಗಮನುರ್ಚಿ ಪೋಗೆಯುಂ ಪೋಬಟೆಯಂ
ದೊರೆಕೊಳಿಸಲಾಗದದಱಿಂ
ಶರತತಿಯಲ್ತೆಂಬುದಿಂತು ಧರ್ಮಾಪೋಹಂ
(ಧರ್ಮಾಪೋಹಂ) ೧೮೫

ಸ್ಮರನೈದಂಬುಗಳಲ್ಲಿವು
ಶರಕೋಟಿಗಳಿಲ್ಲದಾಗಳಿಂತೀ ಲೋಕಾಂ
ತರವರ್ತಿ ವಿರಹಿಗಣಮಂ
ನಿರುತಂ ಮರ್ದಿ [ಸವವುವೆನೆ] ಸುಗುಣಾಪೋಹಂ
(ಸುಗುಣಾಪೋಹಂ) ೧೮೬

(೩೦ – ರಸವದಲಂಕಾರಂ)

ನವವಿಧರಸಂಗಳಂ ಮನ
ಕೆ ವರೆ ನಿರೂಪಿಸುವ ವಚನವಿರಚನೆ ರಸವ[ದ್
ವಿವಿ] ಧಾಳಂಕಾರಂ ಕುಱಿ
ತು ವಿಕಲ್ಪಿಸಿ ತೋರ್ಪೆನದಱ ಲಕ್ಷ್ಯಕ್ರಮಮಂ ೧೮೭

ವೀರಾದ್ಭುತ ಕರುಣಾ ಶೃಂ
ಗಾರ ಭಯಾನಕ ಸರೌದ್ರ ಭೀಭತ್ಸ ಮಹಾ
ಸಾರತರ ಹಾಸ್ಯ ಶಾಂತಾ
ಧಾರಂ ನವವಿಧವಿಕಲ್ಪಮಾ ರಸಮಾರ್ಗಂ ೧೮೮

ರಾವಣನಂ ಕೊಂದು ಜಯ
ಶ್ರೀವಧುವಂ ತಾಳ್ದಿ ಮುಯ್ವಿನೊಳ್ವರ ಸೀತಾ
ದೇವತೆಯಂ ತರ್ಪನ್ನೆಗ
ಮೋವದೆ ಪುರುಷವ್ರತೋಚಿತಂ ವೀರರಸಂ
(ವೀರ) ೧೮೯

ಜಲನಿಧಿಯಂ ಪಾಯ್ದೊರ್ವನೆ
ನಿಲಿಕಿ ದಶಾನನನ ಪೊಳಲನಾ ಲಂಕೆಯನಾ
ಕುಲಮಿಲ್ಲದಿಱಿದು ನಿಂದಂ
ಕಲಿಯಾ[ದ]ಂ ಬಗೆದು ನೋಟ್ಪೊಡದ್ಭುತಮಾದಂ
(ಅದ್ಭುತ) ೧೯೦

ಕರೆಕರೆದು ಮನೋಧೃತಿಯಂ
ನೆರೆವಾಸೆಯೊಳಿರ್ದಳಲ್ಲದುೞಿದೊಡೆ ನಿನ್ನಾ
ವಿರಹಾನಳನಾ ತಾಪದೆ
ಕರಗುಗುಮಿನ್ನಾಕೆಗಿನಿಸು ಕರುಣಿಸು ಮನದೊಳ್
(ಕರುಣಾ) ೧೯೧

ಪುಳಕಿತ ಕಪೋಳಫಳಕಂ
ವಿಳಸಿತ ಮದಿರಾರುಣೇಕ್ಷಣಂ ಸ್ಫುರಿತೋಷ್ಠಂ
ಕೆಳದೀ ನಿನ್ನ ಮುಖಂ ತಳ
ಮಳಗೊಳಿಸುಗುಮಿಂತು ನಿಭೃತ ಶುಂಗಾರರಸಂ
(ಶೃಂಗಾರ) ೧೯೨

ತಾಳತರುವಿತತಿಯೊಳ್ ಬೇ
ತಾಳಂಗಳ್ ಮೊೞಿದು ತೆೞಿದು ಬಾಯ್ಗಳನಾ ಪಾ
ತಾಳಬಿಲಂಗಳವೋಲ್ ತಳ
ತಾಳಲಯಕ್ರಮದೆ ಕುಣಿಯೆ ಭಯಮಯನಾದೆಂ
(ಭಯಾನಕ) ೧೯೩

ಕೊಂದು ಜಟಾಯುವನಾತಂ
ಮುಂದಿಟ್ಟಾ ಜನಕಸುತೆಯನೊಯ್ದಂ ಮತ್ತಾ
ಪಂದೆಯನಂತಕಮುಖದೊಳ್
ತಂದಿಟ್ಟಂದಲ್ಲದುೞಿಗುಮೇ ರೌದ್ರರಸಂ
(ರೌದ್ರ) ೧೯೪

ನವವಿವರಾವೃತ ಪೂ[ತಿ]
ದ್ರವ ತ್ವಗಾವೃತವಿಮಿಶ್ರಮಾಂಸೋಪಚಿತಮ
ಧ್ರುವಮಸುಚಿತ್ರಭ್ರಮಿ [ತಾ]
[ಸ್ಥಿ]ವಹಂ ಮೆಯ್ ಬಗೆವೊಡಿಂತು ಕಿಸುಗುಳಮಾದಂ
(ಭೀಭತ್ಸ) ೧೯೫

ಪರಪುರಷ ಸೇವನಾಕೃತ
ಸುರತವಿಕಾರಂಗಳೆಲ್ಲಮಂ ನಿಜಪತಿಯೊಳ್
ನೆರೆದಾಗಳೆ ಮಱೆಯಲ್ಬಗೆ
ದಿರವದು ನಗಿಸಿತ್ತು ಪೀನಮಭಿಸಾರಿಕೆಯಾ
(ಹಾಸ್ಯ) ೧೯೬

[ಮಿಗೆ ರ]ಣದೊಳ್ ಪರಿಚಿತ [ಮಾ]
ದ್ವಿಗುಣಮದೋರಂತೆ ಮಟ್ಟಮಿರ್ದುದು ಮತ್ತಂ
ವಿಗತವಿಕಾರಾಕಾರಂ
ಸೊಗಯಿಸುಗುಂ ನಿನ್ನ ರೂಪು ಶಾಂತಾಧಾರಂ
(ಶಾಂತ) ೧೯೭

(೩೧ – ಊರ್ಜಿತ)

ಅರೂಢನಿಜಮನೋಹಂ
ಕಾರೋತ್ಕರ್ಷಪ್ರಕಾಶಮೂರ್ಜಿತ ಸದಳಂ
ಕಾರಂ ತದಿ[ೀ ಯ ವಸ್ತು]ವಿ
ಚಾರಮನೀ ತೆಱದಿನಱೆದುಕೊಳ್ಗೆ ಕವೀಶರ್ ೧೯೮

ಕೊಲ್ಲೆಂ ಬಿಸುಡಾಯುಧಮಂ
ಪುಲ್ಲಂ ಕರ್ಚೀಱು ಪುತ್ತನಡಿಗೆಱೆಗೆನ್ನಾ
ನಿಲ್ಲದೆ ತೊಲಗಿದಿರಿಂದಂ
ತಲ್ಲದೊಡೆಟ್ದಾರ್ದು ಕೈದುಗೆಯ್‌ನೀನೀಗಳ್ ೧೯೯

(೩೨ – ವ್ಯಾವೃತ್ತಿ)

ಮಗುಳ್ದುಂ ಮ [ಗುೞ್ದ]ಮಾತಂ
ನೆಗಳ್ದಿರೆ ಪೇೞ್ದಾಗಳಕ್ಕುಮಾ ವ್ಯಾವೃತ್ತಿ
ಸ್ವಗತಾಳಂಕಾರಂ ಬಗೆ
ಗಗಾಧಮನರದಱ ತೆಱನನೀ ಕುಱೆಪುಗಳಿಂ ೨೦೦

ವಿರಹಂ ಪರಿತಾಪಮನಾ
ಪರಿತಾಪಮಮುಮಳಿಪನಳಿಪು [ಮಾ]ವಲ್ಲಭನೊಳ್
[ನೆರೆ]ದಿರ್ಪ ಬಗೆಯನಾ ನೆರೆ
ದಿರವುಂ ಸುರತಾನುರಾಗಮಮಂ ಪೆರ್ಚಿಸುಗುಂ ೨೦೧

ನುಡಿಯಂ ತಗುಳ್ಚಿ ನೋಟಂ
ನುಡಿ ಪರಿಚಯಮಮಂ ತಗುಳ್ಚಿ ಪರಿಚಯಮಳಿಪಂ
ತಡೆಯದೆ ತಗುಳ್ಚಿ ಮನದಳಿ
ಪೊಡಗೂ[ಡುವು]ದಂ ತಗುಳ್ಚುಗುಂ ಕಾಮಿಗಳಾ ೨೦೨

(೩೩ – ಪ್ರಿಯತರ)

ಪ್ರಿಯಕುಶಲಪೂರ್ವಕೋಚಿತ
ನಯವಿನಯೋದಾರ ರುಚಿರ ವಚನಪ್ರಾಯಂ
ಪ್ರಿಯತರಮೆಂಬುದು ಸಕಳ
ಕ್ರಿಯಾನುಗಮಿತಾರ್ಥಮಿಂತು [ಟಿ]ದುದಾಹರಣಂ ೨೦೩

ಗು[ರುಜನ]ದ ಪರಕೆ[ಯು]ಂ ಬಂ
ಧುರ ಪುಣ್ಯಫಳಾನುಬಂಧ[ಮು]ಂ ನೆರೆದೆನ್ನೊಳ್
ಪರಮಾನುಭಾವಭರ [ಮುಂ]
ದೊರೆಕೊಂ[ಡು]ವ[ವಿ]ದು ಬರವಿನೊಳ್ ನಿಮ್ಮಡಿಯಾ ೨೦೪

(೩೪ – ಆಶೀರಲಂಕಾರಂ)

ದೊರೆಕೊಂಡು ಮನದ ಬಗೆಯಂ
ಪಿದಾಗಿರೆ ಪಿರಿಯರೊಸಗೆಯಂ[ಪೇಟಿಪ್ಪೊಡ]ದುಂ
ಪರಮಾಶೀರಾರ್ಥಾಳಂ
ಕರಣಾಂತರಮದಱ ಲಕ್ಷ್ಯಮೀ ತೆಱನಕ್ಕುಂ ೨೦೫

ಆಯುಂ ಶ್ರೀಯುಂ ವಿಜಯಮು
ಮಾಯತಿಯುಂ ನೃಪತಿ ನಿನಗೆ ನಿಜಸಂತತಿಯುಂ
ನ್ಯಾಯದೆ ಪೆರ್ಚುವುದಕ್ಕೀ
ತೋಯಧಿಧರ[ಣೀಧ]ರಾಧರಸ್ಥಿತಿವರೆಗಂ

(೩೫ – ಭಾವಿಕಾಲಂಕಾರಂ)

(ಗೀತಿಕೆ)

ಭಾವಮೆಂಬುದಕ್ಕುಂ ಕವಿಗಳಾ
ಭಾವಿಸಿ ಮನದ ಬಗೆಯೊಂದಿದರ್ಥಂ
ಕೇವಲಮದಟಿಖೊ[ಳ]ಳಂಕೃತಿ
ಭಾವಿಕಮೆಂಬುದಕ್ಕುಂ ನೃಪತುಂಗದೇವಮತದಿಂ ೨೦೭

ಧ್ವನಿಯೆಂಬುದಳಂಕಾರಂ
ಧ್ವನಿಯಿಸುಗುಂ ಶಬ್ಧದಿಂದಮರ್ಥದೆ ದೂಷ್ಯಂ
ನೆನೆವುದಿದನಿಂತು ಕಮಳದೊ
ಳನಿಮಿಷಯುಗಮೊಪ್ಪಿ ತೋರ್ಪುದಿಂತಿದು ಚೋದ್ಯಂ ೨೦೮

(ವೃತ್ತ)

ಅತಿಶಯಮಿತಿಹಾಸೋಪಾಶ್ರಯಂ ಮೇಣ್ಕಥಾವಿ
ಶ್ರುತಚತುರವಿ[ಕಾ]ಶೋತ್ಪಾದಿತಾರ್ಥೋರ್ತ್ಕರಂ ಮೇ
ಣತಿಕುಶಲ[ಸ]ಲೀಲಾಚಾರಲೋಕೋಪಕಾರೋ
ದಿತ ಪರಮಗುಣ್ಯೈಕೋದಾರಧೀರಾಧಿಕಾರಂ ೨೦೯

ಪರಮಸುಖಪದಶ್ರೀಧರ್ಮಕಾಮಾರ್ಥಮೋಕ್ಷ
ಸ್ಥಿರವಿಷಯ ವಿಶೇಷಾಖ್ಯಾನ ವಿಖ್ಯಾತ ತತ್ತ್ವಂ
ಪುರ ಜನಪದ ಶೈಲಾದಿತ್ಯ ಚಂದ್ರೋದಯಾಸ್ತಾಂ
ತರ ಸಮೃಗಗಣವ್ಯಾವರ್ಣನಾನಿರ್ಣಯಾರ್ಥಂ ೨೧೦

ಸಮುದಿತ ಕುಸುಮಾಮೋದೋದಯೋದ್ಯಾನಲೀಲಾ
ಕ್ರಮವಿಹಿತ ಜಲಕ್ರೀಡಾವಿನೋದಾದಿನೀತಂ
ಪ್ರಮದಮದನಮಾದ್ಯದ್ಯೌವನೋದ್ಯಾನ ರಾಮಂ
ರಮಣರಣಿ[ತ]ಗೋಷ್ಠೀಬಂಧ ಸಂಧಿಪ್ರಬಂಧಂ ೨೧೧

ವಿವಿಧ ವಿಭವ ಶೋಭಾರಂಭ ಲಂಭಪ್ರಲಂಭೋ
ದ್ಭವ ವಿಹಿತ ವಿವಾಹೋತ್ಸಾಹ ಸಾಕಲ್ಯ ಕಲ್ಪಂ
ಪ್ರವರ ನೃಪಕುಮಾರಾತ್ತೋದಯಾ[ದಿ] ಪ್ರಮೋದಾ
ಸವಸಮುದಿತ ಸೇವಾರಾತಿ ವೃತ್ತಾಂತ ವೃತ್ತಂ ೨೧೨

ನಯವಿನಿಮಯ ನಾನಾ ಮಂತ್ರ ದೂತ ಪ್ರಯಾಣಾ
ಕ್ಷಣ ಸಮಯ ವಿಳಾಸೋಲ್ಲಾಸಿ ಸಂಗ್ರಾಮಿ [ಕಾ]ಂಗಂ
ಭಯವಿರಹಿತ ವೀರ್ಯೌದಾರ್ಯ ಗಂಭೀರ ಕಾರ್ಯಾ
ಶ್ರಯ ವಿಶದಗುಣಶ್ರೀನಾಯಕೋತ್ಕರ್ಷವೇದ್ಯಂ ೨೧೩

ವಿಳಸಿತ ಸದಳಂಕಾರಾದಿ ಸಂಸಾಧಿತಾರ್ಥಂ
ಕುಳವಿದಿತಪದೋದ್ಯತ್ಕೋಮಳಾಳಾಪಶೀಲಂ
ಸುಳಲಿತಗುಣ ನಾನಾ ವೃತ್ತ ಜಾತಿಪ್ರವೃತ್ತಾ
ಸ್ಖಳಿತರಸವಿಶೇಷೋಪಾಶ್ರಯ ಶ್ರೀನಿವೇಶಂ ೨೧೪

ನಯವಿದುದಿತಯುಕ್ತಿವ್ಯಕ್ತಿಲೋಕ ಪ್ರತೀತ್ಯಾ
ಶ್ರಯ ಸಕಳಕಳಾಲೀಲಾಕರಾಲ್ಪೋಪಜಲ್ಪಂ
ನಿಯತಸಮಯಸಾರಾಸಾಧನೀಯಾ[ದಿಕಾ]ರಾ
ನ್ವಯಪರಮ ತಪೋನುಷ್ಠಾನನಿಷ್ಠಾರ್ಥಸಿದ್ಧಂ ೨೧೫

ವಿಗತಮಳಮುಪಾತ್ತಾರಾತಿ[ಸಾ]ರ್ಥಾರ್ಥವೀರಂ
ಸ್ಥಗಿತಮಮಿತ ನಾನಾ ಶಬ್ದವೀಚಿ ಪ್ರ[ಪಂ]ಚಂ
ನಿಗದಿತಗುಣರತ್ನೈಕಾಕ [ರಂ]ಸಾಗರಂಬೋಲ್
ಸೊಗಯಿಸಿ ಧರಣೀ[ಚಕ್ರಾಂಬ]ರಾಕ್ರಾಂತಮಕ್ಕುಂ ೨೧೬

(ಗೀತಿಕೆ)

ಇಂತು ಮಿಕ್ಕ ವರ್ಣನೆಗಳ್
ಸಂತತಮೊದಾಗಿ ಪೇೞ್ದ ಕಾವ್ಯಂ ಧರೆಯೊಳ್
ಸಂತತಿ ಕೆಡದೆ ನಿಲ್ಕುಮಾಕ
ಲ್ಪಾಂತಂಬರಮಮೋಘವರ್ಷಯಶಂಬೋಲ್ ೨೧೭

(ವೃತ್ತ)

ಸಕಳ ಲೌಕಿಕ ಸಾಮಯಿಕೋರು ವೈ
ದಿಕ ವಿಶೇಷ ವಿವೇಕ ಪರಾಯಣಂ
ಪ್ರಕಟಿತೋಕ್ತಿ ವಿವಿಕ್ತ ಕಳಾಕಳಾ
ಪಕ[ನು]ಪಾಹಿತ ಸಾಹಿತ್ಯವಿದ್ಯೆಯೊಳ್ ೨೧೮

ಅತಿಶಯ ಪ್ರತಿಭಾವಿಭವಂ ಮಹಾ
ಚತುರವೃತ್ತಿ ನಿತಾಂತಮನಾಕುಳಂ
ಪ್ರತಿವಿತರ್ಕಿತ ಲಕ್ಷಣಲಕ್ಷ್ಯ [ನಾ]
ಶ್ರಿತ ಮಹಾನ್ನೃಪತುಂಗ ಸಭಾಸದಂ ೨೧೯

ಭಾವಿಸಲ್ ಬಗೆದವಂ ಮಿಗೆ ಜಾಣನಶೇಷ ಭಾ
ಷಾವಿಶೇಷವಿಷಯಾತಿಷಯಾಮಳ ಕೌಶಳಂ
ದೇವತಾಗುರುಗುಣೋದಯ ವೃದ್ಧಜನೋಪಸಂ
ಸೇವನಾಪರನಪಾಕೃತವೈಕೃತಚಾಪಳಂ ೨೨೦

ಪರಮಕಾರುಣಿಕನಪ್ಪನಪಾಕೃತದೋಷನಾ
ದರಮನಾಗಿಸುವನಪ್ಪನಶೇಷಜನಂಗಳೊಳ್
ಪರಗುಣಾಸಹನನಲ್ಲದನಾತ್ಮಗುಣೋದಯಾಂ
ತರಸರೂಪನ[ಖಿಲಾಗಮ]ಪಾರಪರಾಯಣಂ ೨೨೧

ಬಗೆದು ಮೇಣ್ ಪರಮ ಧರ್ಮಮನ[ೞ್ತಿ]ಯಿನನ್ವಯ
ಪ್ರಗಣಿತಾಭ್ಯುದಯ ಮೋಕ್ಷ ಸುಖಾಶ್ರಯ ಹೇತುವಂ
ನೆಗೞೆ ಮೇಣುದಿತ ನಿರ್ಮಳಕೀರ್ತಿವಿತಾನಮಂ
ಜಗದಗಾಧ ವಿವರೋದರ ದೀಪವಿಕಲ್ಪಮಂ ೨೨೨

(ಗೀತಿಕೆ)

ಕೊಡೆ ಪೇ[ೞು] ನುತಕಾವ್ಯಮನಿಂತಭಿಮಾನಿ ತಾಂ ನಿರ
ಗೀಡಿತ ಮಹಾಪುರುಷವ್ರತನಿಶ್ಚಿತಂ
ಕೂಡದಂತೆ ಪೆಱರೊಳ್ ಮೆಚ್ಚಿನೊಳೇತೆಱನಪ್ಪೊಡಂ
ನೋಡದಂ ಕುಱಿತಾವನ[ನು]ಮೇನುಮಂ ೨೨೩

(ವೃತ್ತ)

ಅಂತು ಬಿಟ್ಟಿ ತೆಱದಿಂ ವರಗೀತಗುಣೋದಯ್ಯೆ
ಕಾಂತ[ಕಾಂತ]ವಿಷಯಾಶಯರಾಗಿ ನಿರಾಕುಳಂ
ಸಂತತಂ ನುಡಿಗಳೊಳ್ ಬಗೆ ಪೆರ್ಚಿರೆ ಪೇೞ್ದವರ್
ಸಂತಸಂಬಡಿಸುವರ್ ನೃಪತುಂಗಸಭಾ [ಸದರ್] ೨೨೪

(ಗೀತಿಕೆ)

ಪಾರ್ಥಿವಲೋಕನಪ್ಪನೆಂದುಂ ಕವಿ ವರ್ಣಿಕುಂ
[ಸಾ]ರ್ಥಚಯಂ ನುತಸರಸ್ವತೀ
ತೀರ್ಥಾವತಾರಮಾರ್ಗನೆಸಕಂ
[ಸಾರ್ಥಮಪ್ಪಂತು ಚಿಂತಿತಕಾರ್ಯತತ್ಪರಂ] ೨೨೫

(ವೃತ್ತ)

ಕುಲಜಾತಿದೇಶವಿಶದಂ ವಿನಯೋಪಚಾರಂ
ನಿಲಯೈಕವೃತ್ತಿ [ಕೃತಿಬಿಂಬಿತ ಸತ್ತ್ವ ಸಾರಂ]
ವಿಲಸದ್ಗುಣಾಗುಣ ವಿವರ್ತಿ ಗುರೂಪದೇಶಾ
ಮಲಿನಾವಬೋಧ ವಿದಿತಾಖಿಳಚೋದ್ಯ[ವೃಂದಂ] ೨೨೬

ಮದಮಾನಮಾಯಭಯಲೋಭವಿಷಾದಹರ್ಷಾ
ಭ್ಯುದಿತಾಂತರಂಗರಿಪುವರ್ಗ ಜಯಾವತಾರಂ
ವಿದಿತ[ಸ್ವಧೀ]ವಿಭವ ಭಾವಿತ ವಿಶ್ವಲೋಕಂ
ಬುಧರ್ಗೋತು ಕಾವನನುನೀತಗೃಹೀತವಾಕ್ಯಂ ೨೨೭

ಪರಮಾನುಭಾವನಭಿಮಾನಿ ವಿನೋದಶೀಲಂ
ಪರನತ್ಯುದಾರಚರಿತೋದಯನೇಕರೂ[ಪ]ಂ
ಸರಸಾಶ್ರಯಪ್ರವರಮೂರ್ತಿ ಪರೋ [ಪಕಾರ]ಂ
ನಿರತಂ ಗುಣೋದಯನಕಾರಣಧುರ್ಯಮಿತ್ರಂ ೨೨೮

ಅಸಹಾಯಸಾಹಸ ವಿನೋದಿ ವಿವಿಕ್ತಚಿತ್ರ
ಪ್ರಸಹ ಪ್ರಕಾಶಿತ ಮಹೋದಯತತ್ತ್ವಸತ್ತ್ವಂ
ವ್ಯಸನವ್ಯಪೇತ[ನು]ಪನೀತ ಕಲಾಕಲಾಪಂ
ಶಶಿಖಂಡ ನಿರ್ಮಲಯಶೋವಿವಿಧಾವತಂಸಂ ೨೨೯

ಪರಿವೃತ್ತ ನೃಪತುಂಗದೇವಮಾರ್ಗಾಂ
ತರಗತಬೋಧ ವಿಶೇಷಯಾನಪಾತ್ರಂ
ಪರಮಗುಣ ಪರೀತಕಾವ್ಯರತ್ನಾ
ಕರದುರುಪಾರಮನೆಯ್ದುಗುಂ ಮಹಾತ್ಮಂ ೨೩೦

(ವೃತ್ತ)

ನಿರವದ್ಯಾನ್ವಯ [ಮು]ದ್ಧಮುದ್ಧತವ[ಹಾಕ್ಷೀ]ರಾಬ್ಧಿಡಿಂಡೀರ ಪಾಂ
ಡುರಮಾಕ್ರಾಂತ[ಸು]ಶೈಲ ಸಾಗರಧರಾಶಾಚಕ್ರವಾಳಾಂಬರಂ
ಪರಮ ಶ್ರೀವಿಜಯಪ್ರಭೂತಿಜ ಯಶ[ಂ]ಸ್ತ್ರೀಬಾಲವೃದ್ಧಾಹಿತಂ
ಪರಮಾನಂದಿತಲೋಕಮೊಪ್ಪೆ ನೆಲೆಗೊಳ್ಗಾಚಂದ್ರತಾರಂಬರಂ ೨೩೧

ಇದು ಪರಮ ಸರಸ್ವತೀ ತೀರ್ಥಾವತಾರ
ನೃಪತುಂಗದೇವಾನುಮತಮಪ್ಪ ಕವಿರಾಜಮಾರ್ಗದೊಳ್
ಅರ್ಥಾಲಂಕಾರ ಪ್ರಕರಣಂ
ತೃತೀಯ ಪರಿಚ್ಛೇದಂ

ಕವಿರಾಜಮಾರ್ಗಾಲಂಕಾರಂ
ಸಮಾಪ್ತಂ

## ಅನುಬಂಧ

# ಪ್ರಾಸವಿಚಾರ : ಅಧಿಕ ಪಾಠ

(ಕಂದ)

ದ್ವಿಪ್ರಾಸಂ ಸುಭಗ ದ್ವಂ
ದ್ವಪ್ರಾಸಂ ಕಾವ್ಯರಚನೆಗುಚಿತ[ಮೆನಿ]ಪ್ಪಾ
ತ್ರಿಪ್ರಾಸಂ[ಸೆಲೆಯಂತಾ
ದಿಪ್ರಾತಂ]ಬೇಱ ನಾಲ್ಕು ತೆಱನಾಗಿರ್ಕುಂ ೧

ಅರಸರೊಳೆಲೆ ನೀಂ ಸರಸಮ
ನರಸಿಯವೋಲಾಡುತಿರ್ಪೆ ನಿನಗಿದು ಗುಣಮೇ
ಅರಸರ್ ಸರಸಮನಱವರೆ
ಸರಸಮನಾಡರಸರಲ್ಲದವರೊಳ್ ಮಗಳೇ ೨

ಒಂದೊಂದಱ ಸೌಂದರ್ಯಮ
ನೊದೊಂದೀಕ್ಷಿಸಲೊಡರ್ಚೆ ನಾಸಿಕಮಡ್ಡಂ
ಬಂದಂದಮನೀಕ್ಷಿಸಿ ಪೆಱ
ನಿಂ[ದಂ]ದೀಕ್ಷಿಸು [ವು]ವವಳ ನಿಡಿಯೆಸಳ್ಗಣ್ಗಳ್ ೩

ನುಡಿಸಿದನೆನ್ನಂ ನಲ್ಲಂ
ಬಿಡಿಸಿದನೆನ್ನಂತರಂಗದನುತಾಪಮನೊ
ಲ್ದುಡಿಸಿದನೊಳ್ಪುಳ್ಪುಡೆಯಂ
ತುಡಿಸಿದನೆನಗಱಕೆಯಪ್ಪ ಮಣಿಭೂಷಣಮಂ ೪

(ಗೀತಿಕೆ)

ತಾರಾಪತಿವತ್ಕೀರ್ತಿವಿಹಾರಾ
[ಹಾರಾ]ಪ್ರಭಯಾ ನಿಜತನುಪೂರಾ
ಪೂರಾಶ್ರಿತ ಹೃತ್ಕ್ಲೇಶ ವಿದೂರಾ
ದೂ[ರಾವೃ]ತಬಲವಿಸ್ತಾರಾ ೫

ಇವು ಕ್ರಮದಿಂ ದ್ವಿಪ್ರಾಸ ದ್ವಂದ್ವಪ್ರಾಸ ತ್ರಿಪ್ರಾಸ ಅಂತಾದಿ ಪ್ರಾಸ[ಂಗಳ್]
ಈ ನಾಲ್ಕು ಬೇಱೆ ಅನ್ಯಮಾರ್ಗಲಕ್ಷಣಂ.*

---

* ("ಈ ಪ್ರಾಸ ವಿಚಾರವು ಗ್ರಂಥದ ಉಪಸಂಹಾರಸ್ಥಳದಲ್ಲಿ ಉಕ್ತವಾಗಿರುವುದು ಆಸ್ಥಾನದೋಷಕ್ಕೆ ಗುರಿಯಾಗಿರುವುದು. ಆದುದರಿಂದ ಇದನ್ನು ಆಧುನಿಕರು ಸೇರಿಸಿರಬಹುದು. ಹಾಗಿಲ್ಲದಿದ್ದರೆ ಈ ಭಾಗವು ಎರಡನೆಯ ಪರಿಚ್ಛೇದದ ೪೩ನೆಯ ಕಂದದ ಮುಂದಾದರೂ ಇರಬೇಕು" ಎಂದು ಮದ್ರಾಸು ಮುದ್ರಣದ ಸಂಪಾದಕರು ಅಭಿಪ್ರಾಯಪಟ್ಟಿದ್ದಾರೆ. ೨ನೆಯ ಪದ್ಯವು ಶಬ್ದಾನುಶಾಸನದಲ್ಲಿಯೂ ೩ನೆಯದು 'ಲೀಲಾವತಿ'ಯಲ್ಲಿಯೂ ಉದ್ಧೃತವಾಗಿವೆ ಎಂದೂ ಸೂಚಿಸಿದ್ದಾರೆ. ಇದು ವಿಚಾರಣೀಯವಾದ್ದರಿಂದ, ನಾವು ಈ ಪದ್ಯಗಳನ್ನು ಅನುಬಂಧವಾಗಿ ಸೇರಿಸಿಕೊಟ್ಟಿದ್ದೇವೆ. – ಸಂ)

## ಅನುಬಂಧ – ೨

# ಟಿಪ್ಪಣಿಗಳು

## ಪರಿಚ್ಛೇದ ೧

ಪದ್ಯ ೧–೨ : ಈ ಎರಡು ಪದ್ಯಗಳನ್ನೂ ಒಟ್ಟಿಗೆ ಅನ್ವಯಿಸಿಕೊಂಡು ಅರ್ಥ ಮಾಡಿಕೊಳ್ಳಬೇಕು. ಅನ್ವಯಕ್ರಮ : ಶ್ರೀ.... ಕಾಂಡಪಟದಂತಿರೆ, ಸಂಪ್ರೀತಿಯಿಂ, ಆವನನ್, ಆಗಲಳ್, ಆ ನೃಪತುಂಗಂ, ನೀತಿ ನಿರಂತರಂ, ಉದಾರಂ, ಕೃತಕೃತ್ಯಮಲ್ಲಂ, ಅಪ್ರತಿಹತ ವಿಕ್ರಮಂ, ವೀರನಾರಾಯಣನಪ್ಪ ಅತಿಶಯಧವಳಂ, ಒಸೆದು, ನಮಗೆ, ಅತರ್ಕಿತೋಪಸ್ಥಿತ ಪ್ರತಾಪೋದಯಮಂ, ಈಗೆ.

ಈ ಪದ್ಯಗಳಲ್ಲಿ ಕವಿ ನಾರಾಯಣನಿಗೂ ನೃಪತುಂಗನಿಗೂ ಅಭೇದವನ್ನು ಕಲ್ಪಿಸಿ ದೇವತಾಸ್ತೋತ್ರವನ್ನೂ ಪ್ರಭುಪ್ರಶಂಸೆಯನ್ನೂ ಮಾಡಿದ್ದಾನೆ. ರಾಷ್ಟ್ರಕೂಟವಂಶದ ರಾಜರು ವಿಷ್ಣುಭಕ್ತರು, ವೈದಿಕ ಮತಾನುಯಾಯಿಯಾಗಿದ್ದ ನೃಪತುಂಗನು ಜೈನಮತಾವಲಂಬಿಯಾದನೆಂದು ಬಹುಮಂದಿ ವಿದ್ವಾಂಸರ ಅಭಿಪ್ರಾಯ. ಕವಿರಾಜಮಾರ್ಗದ ರಚನೆಯ ಕಾಲದಲ್ಲಿಯಂತೂ ನೃಪತುಂಗನು ಇನ್ನೂ ವೈದಿಕ ಮತಸ್ಥನಾಗಿಯೆ ಇದ್ದನೆಂದು ಈ ಪದ್ಯಗಳಿಂದ ಅನುಮಾನಿಸಬಹುದಾಗಿದೆ.

ಮೇಲೆ ನೃಪತುಂಗನಿಗೆ ಹೇಳಿರುವ ವಿಶೇಷಣಗಳೆಲ್ಲವೂ ಆತನ ಬಿರುದುಗಳು.

ಕಾಂಡಪಟ = ತೆರೆ

ಪದ್ಯ ೩ : ಇದು ದಂಡಿಯ 'ಕಾವ್ಯಾದರ್ಶನ'ದ ಶ್ಲೋಕದ ಭಾವಾನುವಾದ. ಆ ಶ್ಲೋಕ ಹೀಗಿದೆ :

ಚತುರ್ಮುಖ ಮುಖಾಂಭೋಜವನಹಂಸವಧೂರ್ಮಮ ।
ಮಾನಸೇರಮತಾಂ ನಿತ್ಯಂ ಸರ್ವಶುಕ್ಲಾ ಸರಸ್ವತೀ ॥
(ಚತುರ್ಮುಖನಾದ ಬ್ರಹ್ಮನ ಮುಖಕಮಲವನದ ಹೆಣ್ಣು ಹಂಸವೂ ಸರ್ವಧವಳವರ್ಣೆಯೂ ಆದ ಸರಸ್ವತಿ ನನ್ನ ಮನಸ್ಸಿನಲ್ಲಿ ನಿತ್ಯವೂ ನಲಿಯಲಿ)

ಇಲ್ಲಿ, ಕವಿರಾಜಮಾರ್ಗಕಾರನು ಬ್ರಹ್ಮಪರವಾದ ಪದಪುಂಜವನ್ನು ಬಿಟ್ಟುಬಿಟ್ಟಿರುವುದನ್ನು ಗಮನಿಸಬೇಕು. ಮಂಗಲಾಚರಣದ ಮೊದಲ ಪದ್ಯಗಳಲ್ಲಿ ಆಶ್ರಯದಾತನಾದ ನೃಪತುಂಗನ ಪ್ರೀತ್ಯರ್ಥವಾಗಿ ವಿಷ್ಣುಸ್ತುತಿಯನ್ನು ಮಾಡಿದ್ದರೂ, ತಾನು ಜೈನನಾದ್ದರಿಂದ ಸರಸ್ವತೀ ಸ್ವರೂಪವರ್ಣನೆಯಲ್ಲಿ ವೈದಿಕ ಕಲ್ಪನೆಯ ಅಂಶವನ್ನು ಕಳೆದುಹಾಕಿದ್ದಾನೆ.

ಅತರ್ಕಿತ + ಉಪಸ್ಥಿತ + ಪ್ರತಾಪೋದಯಮಂ = ನಿಶ್ಚಿತವಾಗಿ ನೆಲಸಿರುವ ಪ್ರತಾಪದ ಏಳ್ಗೆಯನ್ನು.

ಪದ್ಯ ೪ : ನೆಗಟ್ಟುಂ = (ಧಾ., ನೆಗಟ್ = "ಉದ್ಯೋಗ ಖ್ಯಾತಯೋ"; ಪ್ರಸಿದ್ಧಿ; ಚರಿತ್ರಂ–ಶ. ಮ.ದ. ಉಂಟಾಗು, ರಚನೆಗೊಳ್ಳು) ವದನೋದರ = ಬಾಯಿ

ಪದ್ಯ ೫–೬ : ಈ ಎರಡು ಪದ್ಯಗಳಲ್ಲಿ ಕವಿ ಸ್ವವಿಷಯುವನ್ನು ಹೇಳಿಕೊಂಡಿರುವಂತೆ ತೋರುತ್ತದೆ. ತಾನು ಅತಿಶಯಧವಳನ ಸಭಾಸದರ ಮನ್ನಣೆಗೆ ಪಾತ್ರನಾಗುವ ಯೋಗ್ಯತೆಯುಳ್ಳವನೆಂದೂ, ವ್ಯಾಕರಣ ಕಾವ್ಯ ನಾಟಕಾದಿ 'ಅಲಂಕೃತಿ'ಗಳಲ್ಲಿ ಪ್ರವೀಣನಾಗಿರದಿದ್ದರೆ 'ವಿವೇಕ ಬೃಹಸ್ಪತಿ'ಯ (ಎಂದರೆ ನೃಪತುಂಗನ) ನಗರವನ್ನು (ಮಾನ್ಯಖೇಟವನ್ನು) ಪ್ರವೇಶಿಸುತ್ತಿರಲಿಲ್ಲವೆಂದೂ ಹೇಳಿಕೊಂಡಿದ್ದಾನೆ. ಇದರಿಂದ, ಕವಿಗಳೂ ವಿದ್ಯಾವಂತರೂ ರಾಜಾಶ್ರಯವನ್ನು ಬಯಸಿ ಮಾನ್ಯಖೇಟಕ್ಕೆ ಹೋಗುತ್ತಿದ್ದರೆಂದು ಧ್ವನಿತವಾಗುತ್ತದೆ.

ಶ್ರುತ = ಜ್ಞಾನ ಪಾಂಡಿತ್ಯ. ಲೋಕಕಲೆ = ವ್ಯಾವಹಾರಿಕ ವಿದ್ಯೆ. ಸಮಯ = ಸಿದ್ಧಾಂತತತ್ತ್ವ (ಉದಾ., ಜಿನಸಮಯ), ಅಳಂಕೃತಿ = (ಅಲಂಕೃತಿ : ಇಂಥಲ್ಲೆಲ ಸಾಮಾನ್ಯವಾಗಿ ಮೂಲ ಪ್ರತಿಗಳಲ್ಲಿ ಇರುವಂತೆ 'ಕ್ಷಳ' ಳಕಾರವನ್ನೆ ಬಳಸಲಾಗಿದೆ). ಇಲ್ಲಿ ಕಾವ್ಯದ

‘ಅಲಂಕಾರ’ ಎಂದು ಅರ್ಥವಾಗದು; ‘ಭೂಷಣ ಪ್ರಾಯವಾದದ್ದು’ ಎಂದು ಗ್ರಹಿಸಬೇಕು.

ಪದ್ಯ ೭ : ಶಕುನಿ = ಪಕ್ಷಿ ಅಪ್ರಗಲ್ಭವಚನ ಪ್ರವೃತ್ತಿ = ಪ್ರೌಢವಲ್ಲದ, ಸಂಸ್ಕಾರ ಪಡೆಯದ, ಒಪ್ಪವಿಲ್ಲದ, ಮಾತಿನ ರೀತಿ.

ಪದ್ಯ ೮ : ಗಣಿದ = (ಗಣಿತ) ಗಣನೆ, ಎಣಿಕೆ. ಅಶ್ರುತ ಪ್ರಕೃತಿ ಜನ = ಅವಿದ್ಯಾವಂತರಾದ ಸಾಮಾನ್ಯ ಜನ, ಹೇಗೆ ಹುಟ್ಟಿದರೋ ಹಾಗೆಯೇ ಇರುವವರು, ತೃಣ ಸಸ್ಯ ಘಾಸ: ತೃಣ = ಸಾಮೆ, ನವಣೆ ಮುಂತಾದ ಧಾನ್ಯದ ಹುಲ್ಲು ; ಸಸ್ಯ = ಧಾನ್ಯ, ಕಾಳು; ಘಾಸ = ದನಕರು ಮೇಯುವ ಹುಲ್ಲು ; ಒಟ್ಟಿನಲ್ಲಿ ‘ಕಾಳುಕಡ್ಡಿ ಹುಲ್ಲು’

ದಂಡಿಯ ವಾಕ್ಯ ಹೀಗಿದೆ :

ಗುಣದೋಷಾನಶಾಸ್ತ್ರಜ್ಞಃ ಕಥಂ ವಿಭಜತೇ ಜನಃ ।
ಕಿಮಂಧಸ್ಯಾಧಿಕಾರೋಽಸ್ತಿ ರೂಪಭೇದೋಪಲಬ್ಧಿಷು ॥

(ಅಶಾಸ್ತ್ರಜ್ಞರು ಗುಣದೋಷಗಳನ್ನು ಹೇಗೆ ಬೇರ್ಪಡಿಸಬಲ್ಲರು? ರೂಪಭೇದಗಳನ್ನು ತಿಳಿಯಲು ಕುರುಡನಿಗೆ ಸಾಮರ್ಥ್ಯವೆಲ್ಲಿ?) ಕವಿರಾಜಮಾರ್ಗಕಾರನು ಹೋಲಿಕೆಯಲ್ಲಿ ಮಾಡಿಕೊಂಡಿರುವ ಮಾರ್ಪಾಟು ಹೆಚ್ಚು ಪರಿಣಾಮಕಾರಿಯಾಗಿದೆ.

ಪದ್ಯ ೯ : ಪರಮಾಗಮ = (ಆಗಮ = ಮತಸಂಬಂಧವಾದ ಶಾಸ್ತ್ರ : ಉದಾ., ಶೈವಾಗಮ, ಜೈನಾಗಮ) ಇಲ್ಲಿ, ಶ್ರೇಷ್ಠವಾದ ಕಾವ್ಯಶಾಸ್ತ್ರ, ಕಾವ್ಯಲಕ್ಷಣ ಎಂದೇ ಅರ್ಥ.

ಪದ್ಯ ೧೦ : ಈ ಪದ್ಯದಲ್ಲಿ ಭಾಮಹನ ‘ಕಾವ್ಯಾಲಂಕಾರ’ದ ಉಕ್ತಿಯ ಪ್ರಭಾವವನ್ನು ಕಾಣಬಹುದು :

ಗುರೂಪದೇಶಾದಧ್ಯೇತುಂ ಶಾಸ್ತ್ರಂ ಜಡಧಿಯೋಽಪ್ಯಲಮ್ ।
ಕಾವ್ಯಂತು ಜಾಯತೇ ಜಾತು ಕಸ್ಯಚಿತ್ ಪ್ರತಿಭಾವತಃ ॥

(ಮಂದಬುದ್ಧಿಗಳು ಬೇಕಾದರೂ ಗುರುಗಳ ಉಪದೇಶದಿಂದ ಶಾಸ್ತ್ರವನ್ನು ಅಭ್ಯಾಸಮಾಡಬಹುದು. ಆದರೆ ಕಾವ್ಯ ಹುಟ್ಟುವುದು ಮಾತ್ರ ಯಾವನೋ ಒಬ್ಬ ಪ್ರತಿಭಾವಂತನಿಂದ.)

ಪದ್ಯದಲ್ಲಿರುವ ದೃಷ್ಟಾಂತವಾಕ್ಯ ಮಾತ್ರ. ಗ್ರಂಥಕಾರನ ಸ್ವತಂತ್ರ ರಚನೆಯಾಗಿ ಕಾಣುತ್ತದೆ.

ನುಡಿವಲ್ಮೆ = (ನುಡಿ + ಬಲ್ಮೆ) ಭಾಷಾಜ್ಞಾನ, ಭಾಷಾ ಪ್ರೌಢಿಮೆ. ಓದು = ನುಡಿ; ಹೇಳು ; ವಾಚಿಸು. ಪುರುಳಿ = ಶಾರಿಕೆ, ಮೈನಾಹಕ್ಕಿ (?)

ಪದ್ಯ ೧೧ : ದಂಡಿಯ ಶ್ಲೋಕ :

"ನೈಸರ್ಗಿಕೀ ಚ ಪ್ರತಿಭಾ ಶ್ರುತಂ ಚ ಬಹು ನಿರ್ಮಲಂ ।
ಅಮಂದಶ್ಚಾಭಿಯೋಗೋಽಸ್ಯಾಃ ಕಾರಣಂ ಕಾವ್ಯ ಸಂಪದಃ ॥

(ನೈಸರ್ಗಿಕವಾದ ಪ್ರತಿಭೆ, ಪರಿಶುದ್ಧವಾದ ವಿದ್ಯೆ, ನಿಲುಗಡೆಯಿಲ್ಲದ ಅಭ್ಯಾಸ – ಇವು ಕಾವ್ಯಸಂಪತ್ತಿಗೆ ಕಾರಣ.)

ಇವುಗಳ ಜೊತೆಗೆ 'ಮಾರ್ಗಕಾರನು' ವಿದ್ವಾಂಸರ ಸೇವೆಯನ್ನೂ ಸಹಜ ಚಾತುರ್ಯವನ್ನೂ ಸೇರಿಸಿದ್ದಾನೆ.

ಪದ್ಯ ೧೨ : "ಓದುಗನ ಮನಸ್ಸನ್ನು ತನ್ನ ಕೃತಿಯಲ್ಲಿ ವ್ಯಾಪಿಸಿರುವ ಭಾವದಿಂದ ಹೊಸತಾಗಿಸಲರಿಯುದವನ ರಚನೆಯನ್ನು ಓದುವ 'ವ್ಯಸನ'ವಾದರೂ ಏಕೆ ? ಇಂಥ ಕೃತಿಯನ್ನು ಓದುವ ಕ್ಲೇಶವಾದರೂ ಏಕೆ? ಕವಿಯಲ್ಲದವರನ್ನು ಪುರಸ್ಕರಿಸುವವರೂ ಉಂಟೆ ?' – ಇದಿಷ್ಟು ಪದ್ಯದ ತಾತ್ಪರ್ಯವಾಗಿ ತೋರುತ್ತದೆ. ಬಸನ (ತ್ಭ) = ವ್ಯಸನ, ಕೆಟ್ಟ ಅಭ್ಯಾಸ, ಬೇವಸ = ದುಃಖ, ಚಿಂತೆ, ಕ್ಲೇಶ. ಕವರ್ = (ಬಳಿಗೆ) ಸೆಳೆ, ಆಕರ್ಷಿಸು; ಬರಮಾಡಿಕೊ (?)

ಪದ್ಯ ೧೪ : "ಇತರ ಕವಿಗಳ ಮಾತುಗಳನ್ನೆ ನೆನೆನೆನೆದು ತನ್ನ ಕೃತಿಯಲ್ಲಿ ಇಡುವವನು ಬೆಟ್ಟದ ಗುಹೆಯ ಪ್ರತಿಧ್ವನಿಯ ಹಾಗೆ ವ್ಯರ್ಥವಾದ ಮಾತಿನವನು. (ಅವನ ಸ್ವಂತದ್ದು ಏನೂ ಇಲ್ಲದ್ದರಿಂದ) ತನ್ನದಾದ ತಕ್ಕ ವಾಕ್ಚಾತುರ್ಯವನ್ನು ಪಡೆಯಲರಿಯನು" (ಇಂಥವನು ಅನುಕರಣ ಶೀಲ, ಸ್ವೋಪಜ್ಞನಲ್ಲ ಎಂದು ತಾತ್ಪರ್ಯ.)

ಪದ್ಯ ೧೫–೧೬ : ಮಾತರಿವವನ ನುಡಿಬಲ್ಮೆ ಕವಿವೃಷಭರ ಮಹಾಧ್ವಕೃತಿಯಾಗಿ ಪರಿಣಮಿಸಬೇಕಾದರೆ ಆತನು ಕ್ರಮಿಸಬೇಕಾದ ಪದಪದ್ಧತಿಯ ಸೋಪಾನವನ್ನು 'ಮಾರ್ಗಕಾರನು' ಇಲ್ಲಿ ನಿರೂಪಿಸಿದ್ದಾನೆ. ಈ ಸೊಗಸಾದ ನಿರೂಪಣೆಯೆಲ್ಲ ಆತನ ಸ್ವಂತ ರಚನೆಯಾಗಿ ಕಂಡುಬರುತ್ತದೆ.

ಮಹಾಧ್ವಕೃತಿ = ಪೂರ್ವ ಕವಿಗಳ ಕಾವ್ಯಮಾರ್ಗವನ್ನು ಅನುಸರಿಸಿ

ರಚಿತವಾದ ಕೃತಿ, ಕಾವ್ಯಲಕ್ಷಣಕ್ಕೆ ಅನುಗುಣವಾಗಿ ರಚಿತವಾದ 'ಮಾರ್ಗ' ಕೃತಿ; 'ದೇಸಿ'ಯ ಕಾವ್ಯವಲ್ಲ.

ಪದ್ಯ ೧೮–೨೦ : ಈ ಪದ್ಯಗಳಲ್ಲಿ ಕಾವ್ಯದ ಕಾರ್ಯವನ್ನೂ (Function) ಪ್ರಯೋಜನವನ್ನೂ (Use) ತಿಳಿಸಿದೆ.

ಪದ್ಯ ೨೦–೨೧ : ಇಲ್ಲಿ ಕವಿರಾಜಮಾರ್ಗಕಾರನು ತಿಳಿಸುವ ಕಾವ್ಯಪ್ರಯೋಜನಗಳಾದ ಚತುರ್ವಿಧ ಪುರುಷಾರ್ಥಗಳು 'ಅಖಿಳ ಭುವನ ಹಿತಗಳು', ವಾಚಕನಿಗೆ (ಸಹೃದಯನಿಗೆ) ದೊರೆಯುವ ಪ್ರಯೋಜನಗಳು. ಕವಿಗೆ ಲಭಿಸತಕ್ಕದ್ದು, ಆಕಲ್ಪಾಂತ ಸ್ಥಾಯಿಯಾದ ಕೀರ್ತಿ. ಕಾವ್ಯದ ಪರಮ ಪ್ರಯೋಜನವಾದ ಆನಂದದ (ಅಥವಾ ಪ್ರೀತಿಯ) ಪ್ರಸಕ್ತಿಯಿಲ್ಲ ಇಲ್ಲಿ. ಈ ಪದ್ಯಗಳ ಆಕರವಾದ ಭಾಮಹನ ಶ್ಲೋಕ:

ಧರ್ಮಾರ್ಥ ಕಾ ಮೋಕ್ಷೇಷು ವೈಚಕ್ಷಣ್ಯಂ ಕಲಾಸು ಚ ।
ಪ್ರೀತಿಂ ಕರೋತಿ ಕೀರ್ತಿಂ ಚ ಸಾಧು ಕಾವ್ಯನಿಬಂಧನಂ ॥

ಇದನ್ನು ನಾಗವರ್ಮನ ಹೀಗೆ ಕನ್ನಡಿಸಿದ್ದಾನೆ :

ಪರಮ ಪ್ರೀತಿ ನಿಮಿತ್ತಂ
ನಿರತಿಶಯ ಯಶೋನಿದಾನಮಪ್ಪದಜೆ ನಿಹಂ
ಪರಮೆಂಬೆರಡರ್ಕಂ ಬಂ–
ಧುರ ಕಾವ್ಯನಿಬಂಧದಿಂ ಹಿತಂ ಪೆರತುಂಟೇ

– ಕಾವ್ಯಾವಲೋಕನ II, ೪ (೪೨೬)

ಭಾಮಹನ ಶ್ಲೋಕವನ್ನು ಅನುವಾದಿಸುತ್ತ, ಡಾ॥ ಕೆ. ಕೃಷ್ಣಮೂರ್ತಿಯವರು 'ಪ್ರೀತಿ' ಎನ್ನುವುದಕ್ಕೆ ಸಂದರ್ಭೋಚಿತವಾಗಿ 'ಆನಂದ' ಎಂದು ಅರ್ಥಮಾಡಿದ್ದಾರೆ.[೧] ನಾಗವರ್ಮನು ಪ್ರೀತಿ ಎಂಬ ಮಾತನ್ನು ಹಾಗೆಯೇ ಉಳಿಸಿಕೊಂಡಿದ್ದಾರೆ.

---

೧. "ಭಾಮಹಾದಿ ಪ್ರಾಚೀನರು ಈ ಅರ್ಥದಲ್ಲಿ 'ಪ್ರೀತಿ' ಎಂಬ ಶಬ್ದವನ್ನು ಬಳಸುತ್ತಿದ್ದರೇ ಹೊರತು 'ರಸ' ಎಂಬ ಪದವನ್ನಲ್ಲ. ಈ ಅರ್ಥದಲ್ಲಿ ರಸ ಶಬ್ದದ ರೂಢಿ ಅಭಿನವಗುಪ್ತರ ಕಾಲದಿಂದೀಚೆಗೆ ಪ್ರಚಾರದಲ್ಲಿ ಬಂದಂತೆ ತೋರುತ್ತದೆ. Vide Hirianna : Art Experience". (ಡಾ॥ ಕೆ. ಕೃಷ್ಣಮೂರ್ತಿಯವರ ಕನ್ನಡ ಕಾವ್ಯಾಲಂಕಾರ : ಪೀಠಿಕೆ, ಪು. XXXVII ಅಡಿ ಟಿಪ್ಪಣಿ).

ಪದ್ಯ ೨೨ : "ಶಬ್ದಾರ್ಥೌ ಸಹಿತೌ ಕಾವ್ಯಂ..." – ಭಾಮಹ (ಕ.ಕಾ., I–೧೬)
(ಶಬ್ದ, ಅರ್ಥ – ಎರಡೂ ಕೂಡಿ ಕಾವ್ಯ.)

ತೈಃಶರೀರಂ ಚ ಕಾವ್ಯನಾಮಲಂಕಾರಶ್ಚ ದರ್ಶಿತಾಃ ।
ಶರೀರಂ ತಾವದಿಷ್ಟಾರ್ಥವ್ಯವಚ್ಛಿನ್ನಾ ಪದಾವಲಿಃ ॥

(ಕಾವ್ಯದ ಶರೀರ, ಅದರ ಅಲಂಕಾರಗಳು – ಇವು ಯಾವುವೆಂಬುದನ್ನು ಅವರು – ಎಂದರೆ ವಿದ್ವಾಂಸರು – ತೋರಿಸಿಕೊಟ್ಟಿದ್ದಾರೆ. ಕುರಿತ ಅರ್ಥದಿಂದ ಕೂಡಿರುವ ಪದಗಳ ಸಮೂಹವೇ ಆ ಶರೀರ.)

"ಇದೇ ರಸಾನುಭವ, 'ಪ್ರೀತಿ', 'ಆನಂದ', 'ಆಹ್ಲಾದ', 'ಚಿತ್ತಶಾಂತಿ' – ಇವೆಲ್ಲವೂ ಇದನ್ನೇ ನಿರ್ದೇಶಿಸುವ ಬೇರೆ ಬೇರೆ ಹೆಸರುಗಳು" (ಭಾ.ಕಾ.ಮೀ.ಪು. ೨೧೧).

'ಮಾರ್ಗಕಾರನು' ಭಾಮಹ ದಂಡಿ ಇವರಿಬ್ಬರ ಆಶಯಗಳನ್ನೂ ಅಳವಡಿಸಿಕೊಂಡಿದ್ದಾನೆ ತನ್ನ ನಿರೂಪಣೆಯಲ್ಲಿ. ಅಲ್ಲದೆ ಕಾವ್ಯಕ್ಕೆ ಸಂಬಂಧಪಟ್ಟಂತೆ 'ಶಬ್ಧ' ಮತ್ತು 'ಅರ್ಥ' ಎಂಬ ಪದಗಳ ಅರ್ಥವ್ಯಾಪ್ತಿಯನ್ನು ಸೂಚ್ಯವಾಗಿ ವಿಶದಪಡಿಸಿದ್ದಾನೆ. ಇದು ಅವನ ಕಾವ್ಯಶಾಸ್ತ್ರಾಭಿಜ್ಞತೆಗೆ ಕುರುಹು.

ಪದ್ಯ ೨೩ : ನರಲೋಕಚಂದ್ರ : ನೃಪತುಂಗನ ಬಿರುದುಗಳಲ್ಲಿ ಒಂದು. ಇಲ್ಲಿ ಕಾವ್ಯವನು 'ಪುರುಷ' ಎಂದು ರೂಪಕ ಮಾಡಿದೆ. ಮುಂದೆಲ್ಲ, 'ಕೃತಿವಧು', 'ಕೃತಿನಾರಿ' ಎಂದು ಮಾರ್ಗಕಾರನು ಹೇಳುತ್ತ ಹೋಗುವುದನ್ನು ಗಮನಿಸಬೇಕು. ('ಕೃತಿಸತಿ' – ನಾಗವರ್ಮ). ಈಚಿನ ಸಂಸ್ಕೃತ ಲಾಕ್ಷಣಿಕರೂ ಕಾವ್ಯವನ್ನು ಪುರುಷನಿಗೆ ಹೋಲಿಸುವುದು ರೂಢಿ.

ಪದ್ಯ ೨೫ : ಕಾವ್ಯಪುರುಷನ ಶರೀರವು ಗದ್ಯಪದ್ಯ ಎಂದು ಎರಡು ವಿಧ. (ಪ. ೧೪) ಪದಪಾದ ನಿಯಮವಿಲ್ಲದಿದ್ದರೂ ಅದು 'ಅಲಂಕೃತಂ'. (ಪದ್ಯಕಾವ್ಯದಂತೆಯೆ ಗದ್ಯಕಾವ್ಯವೂ ಅಲಂಕಾರಗಳಿಂದ ಕೂಡಿದ್ದು). 'ಕ್ರಿಯಾಕಾರಕದೊಳ್' ಪುದಿದು ಅರ್ಥವ್ಯಕ್ತಿಯನೀವುದು ಗದ್ಯಂ' ಎಂಬ ಈ ಹೆಚ್ಚಿನ ವಿವರಣೆ ವಿಚಾರಕ್ಕೆ ಎಡೆಗುಡುವಂಥದು. ಮುಂದೆ ಕಾರಕ ದೋಷಗಳನ್ನು ವಿವರಿಸುವಾಗ 'ಮಾರ್ಗಕಾರನು' ಪದ್ಯಗಳಲ್ಲಿಯೇ ಲಕ್ಷ್ಯಲಕ್ಷಣ ಸಮನ್ವಯ ಮಾಡಿರುವುದರಿಂದ, ಪದ್ಯಕ್ಕೆ ಈ ನಿಯಮವಿಲ್ಲ ಎಂಬುದು ಅವನ ಆಶಯವಲ್ಲ. 'ಪುದಿದು' (ಸರಿಯಾಗಿ ಸೇರ್ಪಡೆಯಾಗಿ) ಎಂಬ ಮಾತಿನಿಂದ, ಗದ್ಯದಲ್ಲಿ ಕ್ರಿಯಾಕಾರಕ ಸಂಬಂಧವು ನೇರವಾಗಿ

ಅನ್ವಯವಾಗಿ ಅರ್ಥವ್ಯಕ್ತಿಯಾಗುವಂತೆ ಇರಬೇಕೆಂಬುದೇ ಆತನ ಆಶಯ. ('ಕಾರಕದ' ವಿವರಣೆಯನ್ನು ಮುಂದೆ ಕೊಟ್ಟಿದೆ).

ಪದ್ಯ ೨೬ : ನೆಗಟ್ದುವಿದಱೊಳ್ = ಈ ಗದ್ಯ ಪ್ರಕಾರದಲ್ಲಿ ಪ್ರಸಿದ್ಧವಾದವು. ಸಮಸಂಸ್ಕತ ಕಾವ್ಯ: 'ಸಮಸಂಸ್ಕೃತ ಪದಗಳ ಮಿಶ್ರಣದ ವಿಚಾರವನ್ನು ಪ್ರಸ್ತಾವಿಸುವಾಗ ಕೈಗೊಂಡಿದೆ. ಆ ಸಂದರ್ಭದಲ್ಲಿ ವಿವಕ್ಷಿತವಾದ ಅರ್ಥ ಇಲ್ಲಿಗೆ ಹೊಂದದು. 'ಸಮಸಂಸ್ಕೃತ ಕಾವ್ಯ' ಎಂದರೇನು ಎಂಬುದು ತೊಡಕಿನ ಪ್ರಶ್ನೆಯಾಗಿಯೇ ಉಳಿಯುವುದು.*

ಪದ್ಯ ೨೭ : ಗದ್ಯಕಥೆ : ಚಿರಂತನ ಆಚಾರ್ಯರು ಅಗಣಿತಗುಣ 'ಗದ್ಯಪದ್ಯಸಮ್ಮಿಶ್ರಿತ'ವನ್ನು ಗದ್ಯಕಥೆ ಎಂದು ನಿಗದಿಸುವರೆಂದು ಮಾರ್ಗಕಾರನ ಹೇಳಿಕೆ. ಇದು 'ಕನ್ನಡಗಬ್ಬ' ಎಂದೂ ಸ್ಪಷ್ಟಪಡಿಸಿದ್ದಾನೆ. ಭಾಮಹನು ಈ ಗದ್ಯಪದ್ಯ ಮಿಶ್ರಿತಪ್ರಕಾರವನ್ನು ಹೆಸರಿಸಿಲ್ಲ. ದಂಡಿಯೇನೋ 'ಪದ್ಯಂ ಗದ್ಯಂ ಚ ಮಿಶ್ರಂ ಚ ತತ್ ತ್ರಿಧೈವ ವ್ಯವಸ್ಥಿತಮ್' ಎಂದು ಮೂರು ಬಗೆಗಳನ್ನು ಹೆಸರಿಸಿದ್ದಾನೆ. ನಮ್ಮ ಮಾರ್ಗಕಾರನು ಕೇವಲ ದಂಡಿಯ ಲಕ್ಷಣವನ್ನು ಮಾತ್ರ ಅನುಸರಿಸದೆ, 'ಕನ್ನಡಗಬ್ಬ'ದ ಲಕ್ಷ್ಯವನ್ನೂ ಗಮನದಲ್ಲಿರಿಸಿಕೊಂಡಿರುವುದು ಸ್ಪಷ್ಟವಾಗಿದೆ. ಈಗ ನಾವು ಯಾವುದನ್ನು 'ಚಂಪೂಕಾವ್ಯ'ವೆಂದು ನಿರ್ದೇಶಿಸುತ್ತೇವೆಯೋ ಅದೇ ಈ ಗದ್ಯಕಥೆಯಾಗಿರಬಹುದು. ಸಂಸ್ಕೃತದಲ್ಲಿ ಕೂಡ ಚಂಪೂ ಎಂಬ ಮಾತು ದಂಡಿಗಿಂತ ಈಚೆಗೆ ಬಳಕೆಗೆ ಬಂದಿರಬೇಕು.* ಈ ಗದ್ಯಕಥೆಯಲ್ಲಿ ಗದ್ಯದ ಪ್ರಾಚುರ್ಯ ಹೆಚ್ಚಾಗಿದ್ದಿರಬಹುದು.

## ಗದ್ಯ ಗ್ರಂಥಕಾರರು

ಪದ್ಯ ೨೮ : (೧) **ವಿಮಳೋದಯ :** ವಿಮಲ, ಉದಯ – ಇವರಿಬ್ಬರು ಬೇರೆ ಬೇರೆ ಎಂಬ ಮತ ಕವಿಚರಿತೆಕಾರರಾದ ಆರ್. ನರಸಿಂಹಾಚಾರ್ಯರದು. ಅವರ ಅಭಿಪ್ರಾಯದ ಮೇರೆಗೆ, ಸು. ಕ್ರಿ.ಶ. ೭೭೭ರಲ್ಲಿದ್ದ ವಿಮಲಚಂದ್ರನು ಕ.ರಾ.ಮಾರ್ಗದಲ್ಲಿ ಉಕ್ತನಾಗಿರುವ ಗದ್ಯಕವಿ. ಆದರೆ ಈತನು ಯಾವ

* ವಿಶೇಷ ಟಿಪ್ಪಣಿ ೫ (ಅನುಬಂಧ – ೮) ನೋಡಿ (೧೯೬೮ರ ಆವೃತ್ತಿ)
* ಇಲ್ಲಿ 'ಗದ್ಯಪದ್ಯಮಯಿ ಕಾಚಿ ಚಂಪೂರಿತ್ಯಪಿ ವಿದ್ಯತೇ' – (ಕಾವ್ಯಾದರ್ಶ ೧–೩೧) ಎಂಬ ವಾಕ್ಯವನ್ನು ಸೇರಿಸಿದ್ದಾರೆ.

ಕಾವ್ಯವನ್ನು ಬರೆದಿರುವನೆಂಬುದಕ್ಕೆ ಯಾವ ಆಧಾರವೂ ಇಲ್ಲ.

ವಿಮಲೋದಯ ಎಂಬುದು ಒಂದೇ ಹೆಸರೆಂದೂ, ನೃಪತುಂಗನು ಬರೆದನೆಂದು ಹೇಳಲಾದ 'ಪ್ರಶ್ನೋತ್ತರಮಾಲಿಕೆ'ಯ ಕರ್ತೃ ಈತನೇ ಎಂದೂ ಗೋವಿಂದ ಪೈ ಅಭಿಪ್ರಾಯಪಟ್ಟಿದ್ದಾರೆ. ಈ ಕೃತಿಯ ಟಿಬೆಟ್ ಭಾಷೆಯ ಅನುವಾದದಲ್ಲಿ 'ಅಮೋಘೋದಯ' ಎಂದು ಕರ್ತೃವಿನ ಉಲ್ಲೇಖವಿರುವುದೇ ಅವರ ವಾದಕ್ಕೆ ಕಾರಣ.

'ಪ್ರಶ್ನೋತ್ತರಮಾಲಿಕೆ'ಯ ಕರ್ತೃ ಯಾರೇ ಆಗಿದ್ದರೂ, ವಿಮಲ ಉದಯ ಎಂಬ ಇಬ್ಬರ ಹೆಸರನ್ನೂ ಒಂದಾಗಿ ಸಂಧಿಮಾಡಿ, 'ಮಾರ್ಗಕಾರ'ನು ಪ್ರಯೋಗಿಸುತ್ತಿದ್ದನೇ ಎಂದು ಶಂಕೆಪಡಬೇಕಾಗುತ್ತದೆ. ಅಲ್ಲದೆ, ಉದಯನೆಂಬ ಒಬ್ಬ ಕವಿ ನೃಪತುಂಗನಿಗಿಂತ ಹಿಂದೆ ಇದ್ದನೆಂದು ಹೇಳಲು ಯಾವ ಆಧಾರವೂ ಇಲ್ಲ. ಹೀಗಿರುವಲ್ಲಿ, ವಿಮಲೋದಯ ಒಬ್ಬ ಕವಿಯೆ ಆಗಿರಬೇಕೆಂದು ಅನುಮಾನಿಸಲು ಅವಕಾಶವಿದೆ. 'ಪ್ರಶ್ನೋತ್ತರಮಾಲಿಕೆ'ಯ ಕರ್ತೃ ಇವನಹುದೇ ಅಲ್ಲವೆ ಎಂಬುದು ವಿಚಾರಣೀಯ.

(೨) **ನಾಗಾರ್ಜುನ :** ಈ ಹೆಸರಿನವರು ಇಬ್ಬರಿದ್ದಾರೆ. ಇವನೊಬ್ಬ ವೈದ್ಯ; ರಸವಾದದಲ್ಲಿ ಗಟ್ಟಿಗ ; ಬೆಟ್ಟಗಳನ್ನು ಬಂಗಾರವಾಗಿ ಮಾಡಿದ ಎಂದು ಪ್ರತೀತಿ. ದೇವಚಂದ್ರನ ರಾಜಾವಳೀ ಕಥೆಯಲ್ಲಿಯೂ ಇವನ ಪ್ರಸ್ತಾಪವಿದೆ. ಪೂಜ್ಯಪಾದನ ಸೋದರಳಿಯನಿವನು ಎಂದು ಅಲ್ಲಿಯ ಹೇಳಿಕೆ. 'ನಾಗಾರ್ಜುನ ಕಕ್ಷಪುಟ' ವೆಂಬ ವೈದ್ಯಗ್ರಂಥವು ಉಪಲಬ್ಧವಾಗಿದೆ. 'ನಂದಿಸೂತ್ರ'ಗಳ ಮತ್ತು 'ಆವಶ್ಯಕಸೂತ್ರ'ಗಳ ಆದಿಯಲ್ಲಿ ಒಬ್ಬ ನಾಗಾರ್ಜುನನ ಸ್ತುತಿಯಿದೆ. ಕ.ರಾ. ಮಾರ್ಗದಲ್ಲಿ ಉಕ್ತನಾದ ನಾಗಾರ್ಜುನ 'ಇವರಲ್ಲಿ ಒಬ್ಬನಾಗಿರಬಹುದೋ ಏನೋ ತಿಳಿಯದು' (ಕವಿಚರಿತೆ, ಸಂ. ೧, ಪು. ೧೧-೧೨ ನೋಡಿ). ಒಬ್ಬನಾಗಿದ್ದರೂ ಅವನ ಕನ್ನಡ ಗ್ರಂಥವಂತೂ ಯಾವುದೋ ತಿಳಿಯದು.

(೩) **ಜಯಬಂಧು :** ಚಂಪೂ ರೂಪದ ಸೂಪಶಾಸ್ತ್ರ ಗ್ರಂಥವೊಂದರ ಕೆಲವು ಪದ್ಯಗಳಲ್ಲಿ 'ಜಯಬಂಧು ನಂದನ' ಎಂಬ ಉಲ್ಲೇಖವಿರುವುದರಿಂದ, ಕ.ರಾ. ಮಾರ್ಗದಲ್ಲಿ ಉಕ್ತನಾದ 'ಜಯಬಂಧು'ವಿನ ಮಗ ಅವನು ಎಂದು ಕವಿಚರಿತೆಕಾರರ ಊಹೆ. (ಕ.ಚ., ಸಂ.೧. ಪು.೧೨) ಈ ಸೂಪಶಾಸ್ತ್ರ ಪ್ರತ್ಯೇಕ ಗ್ರಂಥವಲ್ಲ. ಚಾವುಂಡರಾಯನ 'ಲೋಕೋಪಕಾರ'

ಎಂಬ ಗ್ರಂಥದ ೮ನೆಯ ಆಶ್ವಾಸ, 'ಜಯಬಂಧುನಂದನ' ಎಂಬುದು ಅವನಿಗೆ ಆಶ್ರಯದಾತನಾದ ದೊರೆಯ ಹೆಸರಿರಬೇಕು', ಈ ಚಾವುಂಡರಾಯ (೧೦೨೪) 'ಚಾವುಂಡರಾಯ ಪುರಾಣ'ದ ಚಾವುಂಡರಾಯನಲ್ಲ, ಹೇಗೂ 'ಜಯಬಂಧುನಂದನ' ಕ.ರಾ. ಮಾರ್ಗದಲ್ಲಿ ಹೇಳಿರುವ 'ಜಯಬಂಧು'ವಿನ ಮಗನಲ್ಲ. "ಜಯಬಂಧು ಯಾರೆಂದು ತಿಳಿದೇ ಇಲ್ಲ" – ಎಂಬ ತೀರ್ಮಾನಕ್ಕೆ ಬಂದಿದ್ದಾರೆ ಡಾ.ರಂ.ಶ್ರೀ.ಮುಗಳಿ. (ಕನ್ನಡ ಸಾಹಿತ್ಯ ಚರಿತ್ರೆ, ಪು. ೧೬, ನೋಡಿ)

(೪) **ದುರ್ವಿನೀತ** : ಗಂಗರಾಜರಲ್ಲಿ ಹೆಸರಾಂತ ದೊರೆ ; ಕಾಲ ಸು.ಕ್ರಿ.ಶ. ೬೦೦. ಗಂಗಶಾಸನಗಳಲ್ಲಿ ಈತನನ್ನು ಕುರಿತು 'ಅನೇಕ ಕಾವ್ಯ ಕಥಾ ನಾಟಕ ಪ್ರಣಯನ ಪ್ರರೂಢ ಪಾಟವೇನ' ಎಂಬ ಪ್ರಶಂಸೆಯೊಂದಿಗೆ, 'ಶಬ್ದಾವತಾರಕಾರಃ', 'ದೇವಭಾರತೀನಿಬದ್ಧ ಬೃಹತ್ಕಥಃ', 'ಕಿರಾತಾರ್ಜುನೀಯ ಪಂಚದಶಸರ್ಗಟೀಕಾಕಾರಃ' ಎಂಬ ಸ್ಪಷ್ಟ ಉಲ್ಲೇಖಗಳಿರೆ. (೧) ಶಬ್ದಾವತಾರ : ಇದು ಪಾಣಿನಿಯ ವ್ಯಾಕರಣದ ಟೀಕೆ ಎಂದು ಆರ್. ನರಸಿಂಹಾಚಾರ್ಯರ ಮತ. ವ್ಯಾಕರಣ ಸಂಬಂಧವಾದ ಗ್ರಂಥ ಎಂಬುದಂತೂ ಸ್ಪಷ್ಟ. ಇದು ಕನ್ನಡದಲ್ಲಿ ಬರೆದದ್ದಾಗಿರಬಹುದು. (೨) ಬೃಹತ್ಕಥೆ : ಗುಣಾಢ್ಯನ 'ಬೃಹತ್ಕಥೆ'ಯನ್ನು ಪೈಶಾಚೀಭಾಷೆಯಿಂದ ಸಂಸ್ಕೃತಕ್ಕೆ ಮಾಡಿರುವ (ಬಹುಶಃ) ಮೊತ್ತಮೊದಲಿನ ಅನುವಾದ. ಆದರೆ, ಈ ಗ್ರಂಥ ಉಪಲಬ್ಧವಿಲ್ಲ. "ಕನ್ನಡ ಗದ್ಯಕಾರನೆಂದು ಹೆಸರಾದ ದುರ್ವಿನೀತನು ಈ ಬೃಹತ್ಕಥೆಯನ್ನು 'ವಡ್ಡಕಥಾ' ಎಂಬ ಹೆಸರಿನಲ್ಲಿ ಕನ್ನಡಿಸಿರಬೇಕೆಂದೂ ಪಂಚತಂತ್ರಗಳ ಮೂಲ ಪರಂಪರೆ ದಕ್ಷಿಣದಲ್ಲಿಯೇ ಆರಂಭವಾಯಿತೆಂದೂ" ಶ್ರೀ ದ.ರಾ. ಬೇಂದ್ರೆಯವರ ಊಹೆ. (ಕ.ಸಾ.ಚ., ಪು. ೧೭). (೩) ಭಾರವಿಯ (ಕ್ರಿ.ಶ.ಸು. ೬೦೦) 'ಕಿರಾತಾರ್ಜುನೀಯ' ಕಾವ್ಯದ ೧೫ನೆಯ ಸರ್ಗದ ಟೀಕೆ: ಇದು ಕನ್ನಡದಲ್ಲಿಯೆ ಇದ್ದಿರಬೇಕೆಂದು ಬಿ.ಎಲ್. ರೈಸರ ತೀರ್ಮಾನ. ಭಾರವಿ ದುರ್ವಿನೀತನ ಆಸ್ಥಾನದಲ್ಲಿ ಸ್ವಲ್ಪ ಕಾಲ ಇದ್ದನೆಂದು 'ಅವಂತೀಸುಂದರೀ ಕಥಾಸಾರ'ದಿಂದ ತಿಳಿಯಬರುತ್ತದೆ.

"ಈ ಎಲ್ಲ ಗದ್ಯಕಾರರ ಕನ್ನಡ ಗ್ರಂಥಗಳ ವಿಷಯವಾಗಿ ಏನೂ ನಿಶ್ಚಿತವಾಗಿ ತಿಳಿಯದೆ ಹೋದರೂ ಅವರಲ್ಲಿ ಒಬ್ಬನಾದ ದುರ್ವಿನೀತನು ೬ನೆಯ ಶತಮಾನದ ಗಂಗರಾಜನಾಗಿದ್ದು ಸ್ವತಃ ಬಹುಶ್ರುತನೂ ಸಂಸ್ಕೃತ

– ಕನ್ನಡ ಗ್ರಂಥಕಾನೂ ಕವಿಗಳಿಗೆ ಆಶ್ರಯದಾತನೂ ಆಗಿ ಹೆಸರುಪಡೆದನೆಂಬ ಸಂಗತಿ ಕನ್ನಡ ಸಾಹಿತ್ಯ ಚರಿತ್ರೆಯ ಆರಂಭಕಾಲದ ನಿರೂಪಣೆಯಲ್ಲಿ ನೆನೆಯತಕ್ಕದಾಗಿದೆ" ಎಂದು ಡಾ. ಮುಗಳಿಯವರು ಹೇಳಿರುವುದರಲ್ಲಿ ಅತ್ಯುಕ್ತಿಯಿಲ್ಲ.

ಪದ್ಯ ೩೦ : ಪದಪಾದನಿಯಮಗಳಿಂದ ಕೂಡಿದ್ದು ಪದ್ಯ. 'ಪದ್ಯಂ ಸಮಸ್ತ ಜನತಾ ಹೃದ್ಯಂ' ಎಂಬುದರಿಂದ ಪದ್ಯದ ಬಗೆಗೆ 'ಮಾರ್ಗಕಾರ'ನ ಒಲವು ಸ್ಪಷ್ಟ. ವಿದ್ಯೆಯ ತಡಿಯನ್ನು ಮುಟ್ಟತಕ್ಕದ್ದು ಅದು, ಎಂದರೆ ವಿದ್ಯಾಪಾರಂಗತನಾಗದವನು ಪದ್ಯಕವಿಯಾಗಲಾರ. 'ವಿದ್ಯೆ' = 'ಲೋಕಾಗಮ ಸಕಲ ಕಲಾವೇದನಂ'. (ಕಾವ್ಯಾ, II, ೧–೪೨೪). ವೃತ್ತಜಾತ್ಯಾಯತ್ತಂ = (ವೃತ್ತಜಾತಿ + ಆಯತ್ತಂ) ವೃತ್ತಜಾತಿಯಿಂದ ಘಟಿತವಾದದ್ದು. 'ವೃತ್ತಜಾತಿ'ಯ ಬಗೆಗೆ ದಿವಂಗತ ಪಂಡಿತ ಮುಳಿಯ ತಿಮ್ಮಪ್ಪಯ್ಯನವರ ವಿವರಣೆ ಹೀಗಿದೆ : "…. ವೃತ್ತಜಾತಿ ಎಂಬುದಕ್ಕೆ ವೃತ್ತಸ್ವರೂಪವೂ ಮಾತ್ರಾಗಣಬದ್ಧವೂ ಆದ 'ಜಾತಿ' ಎಂಬ ಛಂದಸ್ಸಿಗೆ ಸೇರಿದ ಮದನವತಿ – ಅಕ್ಕರಂ – ಚೌಪದಿ – ಗೀತಿಕೆ – ಏಳೆ – ತಿವದಿ – ಉತ್ಸಾಹಂ – ಅಕ್ಕರಿಕೆ – ಛಂದೋವತಂಸ ಎಂಬ ಜಾತಿನಾಮಕ ಪದ್ಯಗಳಲ್ಲಿ ಸೇರಿದುದು ಎಂಬುದೇ ಅರ್ಥವಾಗಿರಬೇಕು. ಅಕ್ಷರಗಣಬದ್ಧವಾದ ವೃತ್ತ ಮತ್ತು ಮಾತ್ರಾ ಗಣಾತ್ಮಕವಾದ ಜಾತಿ ಇವುಗಳ ಕೂಟ ಎಂಬ ಅರ್ಥವಾಗಿರಲಾರದು". (ಕ.ವಿವೇಕ – ಭಾಗ ೧; ಪು. ೧೨೦).

**ಪದ್ಯ ಗ್ರಂಥಕಾರರು**

(೧) **ಶ್ರೀವಿಜಯ – ಕವೀಶ್ವರ:** ಇವರ ವಿಚಾರವನ್ನು ಪೀಠಿಕೆಯಲ್ಲಿ ಪರಿಶೀಲನೆಮಾಡಿರುವುದರಿಂದ ಇಲ್ಲಿ ಮತ್ತೆ ಆ ವಿಚಾರವನ್ನು ಕುರಿತು ಹೇಳಿಲ್ಲ ('ಕವೀಶ್ವರ' ಎಂಬುದು ಬಿರುದೇ ಹೊರತು ಹೆಸರಲ್ಲ ಎಂಬುದು ಕವಿಚರಿತೆಕಾರರ ನಿಶ್ಚಿತ).

(೨) **ಪಂಡಿತ :** "ಇದೂ ಬಿರುದಿನಂತೆ ಕಾಣುತ್ತದೆಯೆ ಹೊರತು ಹೆಸರಿನಂತೆ ಕಾಣುವುದಿಲ್ಲ." (ಕ.ಚ., ಸಂ.೧, ಪು.೧೪) ಹಾಗಿದ್ದಲ್ಲಿ ಯಾರ ಬಿರುದು? ಪದ್ಯ ೩೨ರಲ್ಲಿ ಉಕ್ತವಾಗಿರುವ 'ಚಂದ್ರ' ಕವಿಯ ಹಿಂದೆ ವಿಶೇಷಣವಾಗಿ ಸೇರಿರಬೇಕು, ಇಲ್ಲವೆ, 'ಪರಮ ಶ್ರೀವಿಜಯ ಕವೀಶ್ವರ' ನನ್ನೆ 'ಪಂಡಿತ' ಎಂದೂ ಹೊಗಳಿರಬೇಕು.

(೩) **ಚಂದ್ರ** : ದುರ್ಗಸಿಂಹ (ಸು. ೧೧೪೫), ರುದ್ರಭಟ್ಟ (ಸು. ೧೧೮೦), ಕೇಶಿರಾಜ (ಸು. ೧೨೬೦), ಅರ್ಹದ್ದಾಸ (ಸು. ೧೩೦೦) – ಇವರೆಲ್ಲ ಒಬ್ಬ ಚಂದ್ರಭಟ್ಟನನ್ನು ಹೊಗಳಿದ್ದಾರೆ. ಆದ್ದರಿಂದ ಇವರಿಗಿಂತ ಸು. ಒಂದು ಶತಕದ ಹಿಂದೆ, ಅಥವಾ ಅದಕ್ಕೂ ಹಿಂದೆ, ಒಬ್ಬ ಚಂದ್ರಕವಿ ಇದ್ದನೆಂದು ಊಹಿಸಬಹುದು. ಸು. ೧೦೬೭ರಲ್ಲಿ ಒಬ್ಬ ಚಂದ್ರಭಟ್ಟ ಕವಿ ಇದ್ದುದಾಗಿ ತಿಳಿದುಬರುತ್ತದೆ. 'ಮದನತಿಲಕ'ದ ಕರ್ತೃ ಒಬ್ಬ ಚಂದ್ರರಾಜನಿದ್ದಾನೆ. (ಸು. ೧೦೭೯). 'ಜಾತಕತಿಲಕ'ದ ಶ್ರೀಧರಾಚಾರ್ಯನು (ಸು. ೧೦೫೦) 'ಅಂಬುಜಾರಿ' ಎಂಬ ಪದದಿಂದ ಒಬ್ಬ 'ಚಂದ್ರ'ನನ್ನು ಸೂಚಿಸಿದ್ದಾನೆ. ಚೌಂಡರಸನು (ಸು. ೧೨೫೦) ಒಬ್ಬ ಚಂದ್ರನನ್ನು ಹೆಸರಿಸಿದ್ದಾನೆ. ಈ 'ಚಂದ್ರ' ಮಾಲಿಕೆಯಲ್ಲಿ 'ಮಾರ್ಗಕಾರ'ನು ನೆನೆದ ಚಂದ್ರ ಯಾರೆಂದು ಹೇಳುವುದು ಕಷ್ಟ. (ಹೆಚ್ಚಿನ ವಿಚಾರ ವಿಮರ್ಶೆಗೆ ಕ.ಸಾ.ಚ. – ಪು. ೨೦–೨೧ ನೋಡಿ).

(೪) ಲೋಕಪಾಲ : ಈತನು ನೃಪತುಂಗನ ಸಾಮಂತನಾಗಿದ್ದ ಬಂಕರಸನ ಮಗನಾದ ಲೋಕಾದಿತ್ಯನಾಗಿರಬಹುದೆಂದು ಬಿ.ಎಲ್.ರೈಸಂ ಅವರ ಊಹೆ. (ಶ.ಶಾಸನದ ಉಪೋದ್ಘಾತ, ಪು. ೨೨). ಎರಡು ಹೆಸರುಗಳಿಗೂ ಬಹಳ ವ್ಯತ್ಯಾಸವಿರುವುದರಿಂದ ಅವು ಒಬ್ಬನವಲ್ಲ ಎಂದು ಕವಿಚರಿತೆಕಾರರ ಅಭಿಪ್ರಾಯ. ಅಂತೂ, ಈತನ ವಿಷಯವಾಗಿ ಏನೂ ತಿಳಿದುಬಂದಿಲ್ಲ.

ಪದ್ಯ ೩೪–೩೫ : ಬೆದಂಡೆ – ಚತ್ತಾಣ : ಬೆದಂಡೆ (ಸಂ., ವೈದಂಡಿಕಾ), ಚತ್ತಾಣ (ಸಂ., ಚಿತ್ರಾಯತನ).

ಕಂದಪದ್ಯವೂ 'ಅಮಳಿನ' (ದೋಷ ರಹಿತವಾದ) ವೃತ್ತವೂ ಒಂದೊಂದು ಎಡೆಗೆ ಒಂದೊಂದರಂತೆ ಕೂಡಿ, 'ಜಾತಿಜಾಣು' (ದೇಸಿಗೆ ವಿಶಿಷ್ಟವಾದ ಕೌಶಲ) ಇವುಗಳಲ್ಲಿ ಬೆಡಗಿನಿಂದ ಸೇರಿಕೊಂಡಿದ್ದರೆ, ಅದು ಬೆದಂಡೆಗಬ್ಬವೆನಿಸುವುದು.

ಹಲವು ಕಂದಗಳು, ಚೆಲುವಾದ ವೃತ್ತ ಅಕ್ಕರ ಚೌಪದಿ ಗೀತಿಕೆ ತ್ರಿಪದಿ – ಇವು ಸೊಗಸುವಡೆದು ಮೆರೆಯುತ್ತಿದ್ದರೆ ಅದು ಚತ್ತಾಣ.

ಬೆದಂಡೆ – ಚತ್ತಾಣಗಳು ಹಿಂದಿನ ದೇಸಿಗಬ್ಬದ ವಿಶಿಷ್ಟ ನಾಮಗಳಾಗಿರಬಹುದೆದೂ, ಎರಡನೆಯ ನಾಗವರ್ಮನು ತನ್ನ 'ಕಾವ್ಯಾವಲೋಕನ'ದಲ್ಲಿ ವಿವರಿಸಿರುವ 'ಬಾಜನೆಗಬ್ಬ'ವು 'ಚತ್ತಾಣ'ದ ನಾಮಾಂತರವಾಗಿರಬಹುದೆಂದೂ, ಅವನು ಹೇಳುವ 'ಪಾಡುಗಬ್ಬ'ದ

ಒಳಪ್ರಭೇದಗಳಿವೆಂದೂ.[೨] ಈ ಬಾಜನೆಗಬ್ಬ ಮುಂತಾದ ದೇಸಿಗಬ್ಬದ ಸಂತತಿಯಲ್ಲಿಯೆ ಇಂದಿನ 'ಯಕ್ಷಗಾನ ಪ್ರಬಂಧ' ಇಲ್ಲವೆ 'ಬಲಾಟದ ಪ್ರಬಂದ'ವು ತಲೆದೋರಿರಬೇಕೆಂದೂ, ಒಟ್ಟಿನ ಮೇಲೆ 'ಬೆದಂಡೆ–ಚತ್ತಾಣ'ಗಳೆಂದರೆ ಹಿಂದಣ ದೇಸಿಯಾದ ದೃಶ್ಯ–ಶ್ರವ್ಯಗಳೆಂಬ ಕಾವ್ಯಭೇದಗಳಾಗಿದ್ದಿರಬೇಕೆಂದೂ ಮುಳಿಯ ತಿಮ್ಮಪ್ಪಯ್ಯನವರು ಅಭಿಪ್ರಾಯ ಪಟ್ಟಿದ್ದಾರೆ. (ಕ.ರಾ.ವಿವೇಕ – ೧ ಪು. ೧೧೮–೧೨೩ ನೋಡಿ.)

'ಬೆದಂಡೆ' ಎಂಬುದು "ಕೇಳಲಿಕ್ಕೂ ನೋಡಲಿಕ್ಕೂ ಇರುವ ದೇಸೀಗಾನದ ದೃಶ್ಯಕಲೆ" ಎಂದು ಕೆ.ಪಿ. ವೆಂಕಟಪ್ಪಶೆಟ್ಟಿ ಅವರ ಮತ; 'ನಾಟ್ಟಿಗರಣ'ಗಳಲ್ಲಿ ರೂಢಿಗೊಂಡ ಅತ್ಯುತ್ತಮವಾದ 'ಮೋಹಿನೀ ಕಲೆ'ಯಾದ ಯಕ್ಷಗಾನವೇ ಈ ಬೆದಂಡೆಯಾಗಿರಬಹುದು. ('ಸಮರ್ಪಣೆ' ಗ್ರಂಥದಲ್ಲಿ 'ಯಕ್ಷಗಾನ ಕಲೆ' ಎಂಬ ಅವರ ಲೇಖನವನ್ನು ನೋಡಿ.) 'ನಾಡ ಹಗರಣ' ದೇಸೀ ನಾಟಕವೆ ಇದ್ದಿರಬೇಕು. (ಕ.ಮಾರ್ಗದಲ್ಲೂ 'ಪಗರಣ'ದ ಉಲ್ಲೇಖವಿದೆ. ಪ. I–೬೮)

"ಚತ್ತಾಣ (= ಚಿತ್ರಾಯತನ), ಬೆದಂಡೆ (= ವೈದಂಡಿಕ) ಎಂಬ ಪದ್ಯ ಬಂಧ ಜಾತಿಗಳು, ನಮಗೆ ತಿಳಿದಮಟ್ಟಿಗೆ, ಸಂಸ್ಕೃತದ ಅಲಂಕಾರಗ್ರಂಥಗಳಲ್ಲಿ ಕೂಡ ಎಲ್ಲಿಯೂ ಉಕ್ತವಾಗಿಲ್ಲ" (ತೀ.ನಂ.ಶ್ರೀ. : ಭಾ.ಕಾ.ಮೀ., ಪ್ರಮು., ಪು. ೪೩೯).

ಪದ್ಯ ೩೬ : ವಿಷಯ = ಪ್ರಾಂತ, ಪ್ರದೇಶ, ದೇಶವಿಭಾಗ.

ಪದ್ಯ ೩೭ : ಕಿಸುವೊಟಲ್ = ಬಿಜಾಪುರ ಜಿಲ್ಲೆಯ ಈಗಿನ ಪಟ್ಟದಕಲ್ಲು; ಕೊಪಣ = ಈಗಿನ ಕೊಪ್ಪಳ, ಗದಗು ಬಳ್ಳಾರಿ ನಡುವಣ ರೈಲು ನಿಲ್ದಾಣ; ಪುಲಿಗೆಱೆ = ಧಾರವಾಡ ಜಿಲ್ಲೆಯ (ಈಗಿನ) ಲಕ್ಷ್ಮೇಶ್ವರ ;

---

೨. ಪಾಡುಗಳಿಂದಂ ತಱೆ ಸಲೆ
ಮಾಡಿದುದಂ ಪಾಡುಗಬ್ಬಮೆಂದು ಬುಧರ್ ಕೊಂ
ಡಾಡುವರದಱಿಂ ದಲ್ ಮೆ
ಲ್ವಾಡಂ ರೂಢಿಯ ಬೆದಂಡೆಗಬ್ಬಮುಮಕ್ಕುಂ

ಪಲತೆಱದ ಪದ್ಯದಿಂದಂ
ಲಲಿತವಚೋರಚನನಿಚಯ ಪದ್ಧತಿಕೆಗಳಿಂ
ಸಲೆ ನಿಲೆ ಸಮೆದುದು ಸರಸಾ
ಖಿಲ ವರ್ಣನಮಾದೊಡದುವೆ ಬಾಜನೆಗಬ್ಬಂ

– ಕಾವ್ಯಾವಲೋಕನ, V–೯೫೪, ೯೫೫

ಒಂಕುಂದ = ಬೆಳಗಾವಿ ಜಿಲ್ಲೆಯಲ್ಲಿನ (ಈಗಿನ) ಒಕ್ಕುಂದ. ಈ ನಾಲ್ಕು ಪಟ್ಟಣಗಳ ನಡುವಣ ನಾಡೆ ಸಂಪೂರ್ಣವಾಗಿ ಅಚ್ಚಗನ್ನಡ ಮಾತಾಡುವ ಜನರ ಪ್ರದೇಶವಾಗಿತ್ತು ಎಂದು ಮಾರ್ಗಕಾರನ ಹೇಳಿಕೆ. ಈ ಸಂದರ್ಭದಲ್ಲಿ "ರಾಜಸುಧಾನಿಯ ಪುಟವಹ ಸಾಜದ ಪುಲಿಗೆಱೆಯ ತಿರುಳ ಕನ್ನಡದೊಳ್" ತನ್ನ ಗ್ರಂಥವನ್ನು ಬರೆದಿರುವುದಾಗಿ ಹೇಳಿರುವ ಪಂಪನ ಉಕ್ತಿಯನ್ನೂ ನೆನೆಯಬಹುದು.

ಪದ್ಯ ೪೦ : ಪೂಣಿಗ = (ಪೂಣ್ = ಪ್ರತಿಜ್ಞೆ ಮಾಡು) ಪ್ರತಿಜ್ಞೆ ಮಾಡಿದವನು – ಮಾಡಬಲ್ಲವನು ; ಎಂದರೆ, ಸಮರ್ಥ, ಗಟ್ಟಿಗ (?).

ಪದ್ಯ ೪೧ : ಸಕ್ಕದ = ಸಂಸ್ಕೃತ ; ಪಾಗದ = ಪ್ರಾಕೃತ ; ಸಮಱೆಪೇೞ್ = ಖಚಿತವಾಗಿ, ನಿಶ್ಚಿತವಾಗಿ, ಹೊಂದಿಕೆಯಾಗುವಂತೆ, ಹೇಳು. ನಿಕ್ಕುವಂ = ನಿಶ್ಚಯವಾಗಿ, ನಿಜವಾಗಿ ; ಒಳವು = ಇವೆ (ಉಳ್ ಧಾತು). ಈ ಪದ್ಯಕ್ಕೆ ಮುಳಿಯ ತಿಮ್ಮಪ್ಪಯ್ಯನವರ ವ್ಯಾಖ್ಯಾನ ಹೀಗಿದೆ : – "ಸಂಸ್ಕೃತ ಪ್ರಾಕೃತ ಸಾಹಿತ್ಯಗಳಲ್ಲಾದರೆ ಆ ಬಗೆಯೇ ಬೇರೆ. ಅವುಗಳಲ್ಲಿ ಲಕ್ಷ್ಯ ಗ್ರಂಥಗಳಂತೆ ಲಕ್ಷಣ ಗ್ರಂಥಗಳೂ ಬೇಕಾದಷ್ಟಿವೆ. ಪರಮಾಚಾರ್ಯರಿಂದ ರಚಿತಗಳಾದ ಆ ಲಕ್ಷ್ಯ ಲಕ್ಷಣ ಪ್ರಬಂಧಗಳಿಂದಾಗಿ ಸಂಸ್ಕೃತ ಪ್ರಾಕೃತ ಸಾಹಿತ್ಯ ಸ್ವರೂಪವು ಸುಗಮವಾಗಿದ್ದುದು." (ಕ.ರಾ. ವಿವೇಕ, – ಭಾಗ ೧, ಪು. ೧೧೫).

ಪದ್ಯ ೪೨ : ಅನ್ವಯ : ಕನ್ನಡದೊಳ್, ತಿಳಿಕೊಱೆಗೊಂಡು = (ತಿರಿದು ಕೊಱೆಗೊಳ್ = ಭಿಕ್ಷೆಬೇಡಿ ಬಟ್ಟೆ ಸಂಪಾದಿಸಿಕೊ, ಎಂದರೆ ಭಿಕ್ಷೆ ಬೇಡು, ಅವರಿವರನ್ನು ಕೇಳಿ ತಿಳಿದುಕೊ) (ಅವರಿವರನ್ನು) ಬೇಡಿ ತಿಳಿದುಕೊಂಡು, ಅಱೆಯೆ ಪೇೞ್ವೆನೆಂಬುದಿದು, ಅರ್ಗಂ, ಆದಂ ಅರಿದು = ಬಹಳ ಕಷ್ಟ ; ಕನ್ನಡಕ್ಕೆ = ಕನ್ನಡದ ವಿಷಯದಲ್ಲಿ, ನಾಡವರ್ = (ಲಕ್ಷಣಜ್ಞರಲ್ಲದ) ಸಾಮಾನ್ಯ ಜನರು, ಒವಜರ್ = ಉಪಾಧ್ಯಾಯರು; ಪರಮಾಚಾರ್ಯರವೋಲ್ = (ಸಂಸ್ಕತ ಪ್ರಾಕೃತಗಳಲ್ಲಿ) ಶ್ರೇಷ್ಠರಾದ ಲಕ್ಷಣಜ್ಞರ ಹಾಗೆ, ಸೈತಿರಲ್ ಅಱೆಯರ್ = ನಿಶ್ಚಿತ ಜ್ಞಾನವನ್ನು ಹೊಂದಿರಲು (?) ತಿಳಿಯರು. (ಅವರಿವರನ್ನು ಕೇಳಿಯಾದರೂ ತಿಳಿದು ಕಾವ್ಯಲಕ್ಷಣವನ್ನು ಹೇಳೋಣವೆಂದರೆ, ಸಂಸ್ಕೃತ ಪ್ರಾಕೃತಗಳಲ್ಲಿಯಂತೆ ಲಕ್ಷಣವನ್ನು ಚೆನ್ನಾಗಿ ಬಲ್ಲವರು ಕನ್ನಡದಲ್ಲಿ ಇರಲಿಲ್ಲ. ಕನ್ನಡದ ಓಜರು ಅವರಷ್ಟು ಬಲ್ಲಿದವರಾಗಿರಲಿಲ್ಲ.)

ಪದ್ಯ ೪೬ : ಉದ್ಭಾಸಿಸಿ = ಉತ್ + ಭಾಷಿಸಿ (ಸ್ಪಷ್ಟವಾಗಿ ಹೇಳಿ) ಅಥವಾ ಉತ್ + ಭಾಸಿಸಿ (ವಿಶೇಷವಾಗಿ ಬೆಳಗಿ, ಪ್ರಕಾಶಗೊಳಿಸಿ ಎಂದರೆ ಮೇಲೆ ಕಾಣುವಂತೆ ಹೊರಪಡಿಸಿ) (?). ತಱಿಸಂದು = (ಧಾ., ತಱಿಸಲ್) ನಿಶ್ಚಯಿಸಿ, ಗೊತ್ತಮಾಡಿ. 'ಕನ್ನಡಂಗಳೊಳ್', 'ದೇಶಿಬೇಱಿವೇಱಪುದಱಿಂ': ಪ್ರಪಂಚದ ಎಲ್ಲ ಭಾಷೆಗಳಲ್ಲಿಯೂ ಪ್ರಾದೇಶಿಕ ವ್ಯತ್ಯಾಸಗಳು ಇದ್ದುವು, ಈಗಲೂ ಇವೆ. ಅಂತೆಯೆ, ಕನ್ನಡದಲ್ಲಿ ಈಗ ಮೈಸೂರು ಕನ್ನಡ, ಮಂಗಳೂರು ಕನ್ನಡ, ಧಾರ್ವಾಡದ ಕನ್ನಡ ಎಂದು ಸ್ಥೂಲವಾಗಿ (ವಿಶೇಷವಾಗಿ ಆಡುಮಾತಿನಲ್ಲಿ) ಮೂರು ಬಗೆಯ 'ಕನ್ನಡಂಗಳು' ಇರುವಂತೆ ಆಗಲೂ ಕೆಲಕೆಲವು ಪ್ರಾದೇಶಿಕ ಲಕ್ಷಣಗಳುಳ್ಳ 'ಕನ್ನಡಂಗಳು' ಇದ್ದಿರಬೇಕು; ಅವುಗಳ 'ದೇಶಿ' ಎಂದರೆ ಪ್ರಾದೇಶಿಕ ವೈಲಕ್ಷಣ್ಯ ಬೇರೆಬೇರೆಯಾಗಿದ್ದಿರಬೇಕು. ಒಂದು ಪ್ರಾಂತದಲ್ಲಿ ನಿರ್ದುಷ್ಟವೆನಿಸಿದ ಭಾಷಾಪ್ರಯೋಗ ಇನ್ನೊಂದರಲ್ಲಿ ದೋಷವಾಗಿ ಕಾಣುತ್ತಿದ್ದಿರಬೇಕು. ಹೀಗೆ, ಸರ್ವಸಾಮಾನ್ಯವಾದ ದೋಷಗಳು ಹಾಗೂ ಪ್ರಾಂತ ಭೇದಗಳಿಂದ ಸಂಜನಿಸುತ್ತಿದ್ದ ದೋಷಗಳು – ಇವು ಕೂಡಿ, ದೋಷಪ್ರಮಾಣ ಅಪರಿಮಿತವಾಗಿದ್ದಿರಬೇಕು. ಸಾವಿರ ನಾಲಗೆಯುಳ್ಳ ಆದಿಶೇಷನೂ ಅವನ್ನು ತಿಳಿಯಹೇಳಲಾರದಷ್ಟು ಅಗಣಿತವಾಗಿದ್ದುವು ಎಂದು 'ಮಾರ್ಗಕಾರ' ಉತ್ಪ್ರೇಕ್ಷಿಸಿ ಹೇಳುವ ಮಟ್ಟಿಗೆ ಕನ್ನಡದ ಪರಿಸ್ಥಿತಿ ಶೋಚನೀಯವಾಗಿತ್ತು.

ಪದ್ಯ ೪೭ : 'ಅಂತುಂ ಪುರಾಣಕವಿಗಳ ಸಂತತಗತ ಮಾರ್ಗಗದಿತ ದೋಷಂಗಳ್'; 'ಚಿಂತಿಸಿ ಮತ್ತೆನ್ನಱಿವುದುಮಂ'; ಹಿಂದಿನ ಕವಿಗಳು ಲಕ್ಷಣ ಬದ್ಧವಾಗಿ ರಚಿಸಿದ 'ಮಾರ್ಗ' ಕಾವ್ಯಗಳಲ್ಲಿ ಕಂಡುಬಂದ ದೋಷಗಳನ್ನೂ, ಕಾವರಚನೆಯಲ್ಲಿ ಸಂಭವಿಸಬಹುದೆಂದು ತಾನು ಅರಿತಿರುವ ದೋಷಗಳನ್ನೂ 'ಬುಧಜನಕ್ಕೆ' ಹೇಳುವುದಾಗಿ ಮಾರ್ಗಕಾರನು ತಿಳಿಸುತ್ತಾನೆ.

ಪದ್ಯ ೪೮ : 'ನೆಲಸಿದ ಕಾವ್ಯಂ ಕಾವ್ಯಕ್ಕೆ ಲಕ್ಷಣಂ ಸತತಂ' = ಪ್ರಚಾರಕ್ಕೆ ಬಂದು ರೂಢಿಯಲ್ಲಿ ನೆಲೆನಿಂತ ಕಾವ್ಯವು ಮುಂದಿನ ಕಾವ್ಯರಚನೆಗೆ ಯಾವಾಗಲೂ ಮಾರ್ಗದರ್ಶಕವಾದ ಲಕ್ಷಣ, ಎಂದೆ = ಎಂಬ (ತಪ್ಪು) ಎಣಿಕೆಯಿಂದ, ಆಗಮಬಲಹೀನರ್ = ಕಾವ್ಯಶಾಸ್ತ್ರದ ಪಾಂಡಿತ್ಯವಿಲ್ಲದವರು, ದೇಸಿಯಲ್ಲದೆಂದಱಿದಿರ್ದುಂ (ದೇಸಿಯಲ್ಲ + ಅದು + ಎಂದು + ಅಱಿದಿರ್ದುಂ) = ಅದು, ಎಂದರೆ ಒಂದು ಕಾಲದಲ್ಲಿ 'ದೇಸಿ'ಯೆನಿಸಿದ್ದ

(ರೂಢಿಯಲ್ಲಿದ್ದ) ಹಳಗನ್ನಡವು, ಇಂದು ದೇಸಿಯಲ್ಲ (ರೂಢಿಯಲ್ಲಿಲ್ಲ) ಎಂದು ತಿಳಿದಿದ್ದರೂ ಕೂಡ, ಪೞಗನ್ನಡಮಂ = (ಆ ರೂಢಿತಪ್ಪಿದ) ಹಳಗನ್ನಡವನ್ನು, ಪೊಲಗೆಡಿಸಿ = (ಅದರ) ಸ್ವರೂಪವನ್ನು ಹಾಳುಮಾಡಿ, ನುಡಿವರ್ = ಹೇಳುವರು, ಪ್ರಯೋಗಮಾಡುವರು.

ಮಾರ್ಗಕಾರನ ಕಾಲದಲ್ಲಿ ಬಳಕೆಯಲ್ಲಿದ್ದ ಕನ್ನಡ ಅವನ ಕಾಲದ 'ಹೊಸಗನ್ನಡ'; ತದ್ಭಿನ್ನವಾದ 'ಹಳಗನ್ನಡ'ವೊಂದು ಇದ್ದಿತು ; ಆ ಹಳಗನ್ನಡದಲ್ಲಿ ಹಿಂದೆ ರಚಿತವಾದ ಕಾವ್ಯವನ್ನೇ ಮಾದರಿಯಾಗಿ ಇಟ್ಟುಕೊಂಡು ಕಾವ್ಯಲಕ್ಷಣವನ್ನು ಅರಿಯದವರು ಕಾವ್ಯರಚನೆ ಮಾಡಿ, ಹಳಗನ್ನಡದ ಸ್ವರೂಪವನ್ನೆ ಹಾಳುಮಾಡುತ್ತಿದ್ದರೆಂದು ಕಾಣುತ್ತದೆ. ಅಂಥವರು, ತತ್ಕಾಲಕ್ಕೆ 'ದೇಸಿ'ಯಾಗಿದ್ದ ಹೊಸಗನ್ನಡದಲ್ಲಿಯಾದರೂ ಕಾವ್ಯರಚನೆ ಮಾಡಿದ್ದರೆ ಎಷ್ಟೋ ಲೇಸಾಗಿರುತ್ತಿದ್ದಿತು. (ಇದಿಷ್ಟು ಮಾರ್ಗಕಾರನ ಆಶಯವೆಂದು ನಮ್ಮ ಗ್ರಹಿಕೆ.)

(ಕಂದ, ವೃತ್ತ, ಷಟ್ಪದಿ, ಮುಂತಾದ ಛಂದಸ್ಸುಗಳಲ್ಲಿಯೂ ಹಳಗನ್ನಡ ಸಂಸ್ಕೃತಗಳಲ್ಲಿಯೂ ಪಾಂಡಿತ್ಯವಿಲ್ಲದಿದ್ದರೂ ದೋಷಪೂರ್ಣವಾಗಿ ಪದ್ಯರಚನೆ ಮಾಡುವವರು ಈಗಿಗೂ ನಮ್ಮಲ್ಲಿ ಇಲ್ಲದೆ ಇಲ್ಲ. ಇಂಥವರು ಎಲ್ಲ ಕಾಲದಲ್ಲಿಯೂ ಇರುತ್ತಾರೆ.)

ಪದ್ಯ ೪೯ : ಮಾರ್ಗಕಾರನ ಕಾಲಕ್ಕೇ 'ದೇಸಿಯಲ್ಲ' ಎನ್ನಿಸಿದ್ದ, 'ಪೊಲಗೆಡಿಸಿದ', ಹಳಗನ್ನಡದ ಸ್ವರೂಪಕ್ಕೆ ಇದು ಉದಾಹರಣೆ. ಮಾರ್ಗಕಾರನೇ ಅರ್ಥವಾಗದೆನ್ನುವ ಈ 'ಕನ್ನಡ' ನಮಗೆ ಹೇಗೆ ಅರ್ಥವಾಗಬೇಕು ? 'ಅರ್ಥವಾಗಬಾರದು' ಎಂದೇ ಆತನ ಗುರಿಯಿರಬೇಕು. 'ಹಡುವಸುಮೞಿಸೆಟ್ಟಿಸು...' ಇಲ್ಲಿನ 'ಹ' ಕಾರದ ಪ್ರಯೋಗ ಗಮನಾರ್ಹ. ಮಾರ್ಗಕಾರನ ಕಾಲಕ್ಕೆ ಆಗಲೇ 'ಪ'ಕಾರ 'ಹ'ಕಾರವಾಗಿ ಮಾರ್ಪಡುತ್ತಿತ್ತೆಂದು ಇದರಿಂದ ಊಹಿಸಬೇಕಾಗುತ್ತದೆ.

ಪದ್ಯ ೫೦ : 'ಇಂಥ ಹಳಗನ್ನಡ ಪ್ರಯೋಗವು ಹಿಂದಿನ ಕಾವ್ಯಗಳಲ್ಲಿ ಪ್ರಯುಕ್ತವಾಗಿದ್ದರೆ ಆ ಕಾಲಕ್ಕೆ ಅದು ಶೋಭಿಸುವುದು. ಹೊಸಗನ್ನಡದ ಇಂದಿನ ದೇಸಿಗೆ ಅದು ಬಹು ರಸಹೀನ', (ಮುಂದಿನ ಉಪಮಾನದ ಮೂಲಕ ದೇಸಿಯಲ್ಲದ ಹಳಗನ್ನಡದ ಪ್ರೇಮವನ್ನು ಪರಿಹಾಸಮಾಡಿದ್ದಾನೆ ಮಾರ್ಗಕಾರ.)

ಪದ್ಯ ೫೧–೬೧ : ಈ ಹನ್ನೊಂದು ಪದ್ಯಗಳಲ್ಲಿ ಮಾರ್ಗಕಾರನು ಕನ್ನಡ

ಕಾವ್ಯರಚನೆಯಲ್ಲಿ ಕನ್ನಡ ಪದಗಳೊಂದಿಗೆ ಸಂಸ್ಕೃತ ಪದಗಳನ್ನು ಹೇಗೆ ಪ್ರಯೋಗವಾಡಬಹುದು, ಹೇಗೆ ಮಾಡಕೂಡದು ಎಂದು ಮಾರ್ಗದರ್ಶನ ಮಾಡಿದ್ದಾನೆ. (ಸಂಸ್ಕೃತದ ಬಗೆಗೆ ಅವನು ಇತ್ತಿರುವ ಸಲಹೆಯನ್ನು ನಾವು ಇಂದು ಇಂಗ್ಲೀಷಿನ ಬಗೆಗೆ ಅನ್ವಯಿಸಿಕೊಳ್ಳಬಹುದು)

ಪದ್ಯ ೫೧ : ಕನ್ನಡ ಪದಗಳನ್ನು ಸಮಸಂಸ್ಕೃತಪದಗಳೊಂದಿಗೆ ಹೊಂದಿಕೆಯಾಗುವಂತೆ ಅರಿತು ಬೆರಸಿ ಹೇಳಬಹುದು; ಇದು ಕಾವ್ಯಾಗಮ ಪಂಡಿತರು ಹೇಳುವ ಮಾರ್ಗಕ್ಕೆ ಅನುಗುಣವಾಗಿರುವುದು ; 'ಸಮಸಂಸ್ಕೃತ'ವಾಗಿ ಪರಿವರ್ತನೆಗೊಂಡಿರದ 'ಈ' ಸಂಸ್ಕೃತ ಪದಗಳೊಂದಿಗೆ (ಎಂದರೆ ಮುಂದಿನ ಪದ್ಯದಲ್ಲಿ ನಿರ್ದೇಶಿಸಿರುವ ಅಚ್ಚ ಸಂಸ್ಕೃತಾವ್ಯಯಗಳೊಂದಿಗೆ) 'ಇದಂ' (ಎಂದರೆ ಕನ್ನಡದವನ್ನು) 'ಬೆರಸಲ್ಕಮಾಗದು'.

ಇಲ್ಲಿ 'ಸಮ ಸಂಸ್ಕೃತ' ಎಂದರೇನು? ಇದನ್ನು ಮಾರ್ಗಕಾರನು ವಿವರಿಸಿಲ್ಲ. 'ಸಕ್ಕದಮುಮನಱಿಯದೆ ಕನ್ನಡಮುಮಂ ಸಮಾಸೋಕ್ತಿಗಳೊಳ್ ಕುಱಿತು ಬೆರಸಿದೊಡೆ ವಿರಸಂ' ಎಂಬ ಸಮಾಸೋಕ್ತಿದೋಷಕ್ಕೆ ಮಾರ್ಗಕಾರನು ಕೊಟ್ಟಿರುವ ಲಕ್ಷ್ಯ ಪದ್ಯವನ್ನೆ ಕೇಶಿರಾಜನೂ ೮೦ನೆಯ ಸೂತ್ರಕ್ಕೆ ಲಕ್ಷ್ಯವಾಗಿ ಉದ್ಧರಿಸಿದ್ದಾನೆ. ಆ ಸೂತ್ರ ಹೀಗಿದೆ :

> ಸಮುದಿತ ಸಂಖ್ಯಾವ್ಯಯ ರಹಿ
> ತಮೆನಿಸಿ ವರ್ತಿಪ ನಿಘಂಟುವಿನ ನಾಮಪದೋ
> ತ್ತಮ ವರ್ಣಪ್ರಕೃತಿಗಳಂ
> ಸಮಸಂಸ್ಕೃತವೆಸರನಿಟ್ಟು ಲಿಂಗಂ ಮಾಟ್ಟಿರ್

ಕೇಶಿರಾಜನು, – (ಕಾಮ) ಕಾಮಂ, (ಭೀಮ) ಭೀಮಂ ಇತ್ಯಾದಿಯಾಗಿ ಪ್ರಯೋಗಗಳನು ಕೊಟ್ಟು, "ಆ ಸಮಸಂಸ್ಕೃತಂಗಳನಚ್ಚಗನ್ನಡದೊಳ್ ಬೆರಸಿ ಸಮಾಸಮಂ ಮಾಡಲಾಗದು; ಅದರ್ಕುದಾಹರಣೆ – ಮುಖತಾವರೆ, ಕಣ್ಕಮಲ ಎಂಬಂತೆ"[೩] ಎಂದೂ ಸೇರಿಸಿ ಹೇಳಿದ್ದಾನೆ.

---

೩. ಪ್ರೊ|| ಡಿ.ಕೆ. ಭೀಮಸೇನರಾಯರು ಉಸ್ಮಾನಿಯ ವಿಶ್ವವಿದ್ಯಾನಿಲಯದ ಹಸ್ತಲಿಖಿತ ಪ್ರತಿಗಳ ಸಂಗ್ರಹದಲ್ಲಿ ಕೇಶಿರಾಜನ 'ಶಬ್ದಮಣಿದರ್ಪಣ'ದ ಹಸ್ತಪ್ರತಿಯೊಂದನ್ನು ಕಂಡುಹಿಡಿದು, ಅದರ ಆಧಾರದ ಮೇಲೆ ಅದರ ಉಪನ್ಯಾಸವನ್ನು ಬರೆದಿಟ್ಟರುವರಷ್ಟೆ. ಅದರಲ್ಲಿ, ೮೦ನೆಯ ಸೂತ್ರದ ಪಾಠವನ್ನು ವಿವೇಚಿಸುತ್ತಾ "ಇದರ ವಿವರಣೆಯಲ್ಲಿ ವ್ಯಾಖ್ಯಾನಕಾರನು 'ಸಮಸಂಸ್ಕೃತ ಪದಂ'ಗಳನಚ್ಚಗನ್ನಡದೊಳ್ ಬೆರಸಿ ನಡಸುವುದು' ಎಂದಿರುವುದನ್ನು ಉಲ್ಲೇಖಿಸಿದ್ದಾರೆ.

ಸೂತ್ರದ ಪ್ರಕಾರ, ಯಾವ ಯಾವ ಸಂಸ್ಕೃತನಾಮಪ್ರಕೃತಿಗಳನ್ನು ಕನ್ನಡದ ವಿಭಕ್ತಿ ಪ್ರತ್ಯಯಗಳನ್ನು ಹತ್ತಿಸಲು ಯೋಗ್ಯವೆನಿಸುವ ಲಿಂಗಗಳನ್ನಾಗಿ (Nominal b ased or stems) ಮಾಡಿಕೊಳ್ಳಬಹುದೋ ಅವೆಲ್ಲಾ ಸಮಸಂಸ್ಕೃತಗಳು. ಇಂತು, ಯಾವ ಬಗೆಯ ಸಂಸ್ಕೃತ ಪದಗಳು ಕನ್ನಡ ಲಿಂಗಗಳಾಗಿ ಸಮಸಂಸ್ಕೃತಗಳೆನಿಸಬಲ್ಲವು. ಯಾವವು ಹಾಗೆ ಎನಿಸಲಾರವು ಎಂಬುದನ್ನು ಕೇಳಿರಾಜನು ಇನ್ನು ಮುಂದಿನ ಸೂತ್ರಗಳಲ್ಲಿ (೮೧–೮೭) ವಿವರವಾಗಿ ತಿಳಿಯಹೇಳಿದ್ದಾನೆ. ೮೧ನೆಯ ಸೂತ್ರದಲ್ಲಿ "ಪ್ರಸಿದ್ಧ ಮಪ್ಪವ್ಯಯಂಗಳುಂ ತ್ಯದಾದಿಯುಂ ಶತೃಇಂತಮುಂ ಸಂಸ್ಕೃತದೊಳ್ ಸಮಾಸಮಂ ಪಡೆದಲ್ಲದೆ ಕನ್ನಡದೊಳ್ ಸ್ವಭಾವದಿಂ ಲಿಂಗಮಾಗವು" (ವೃತ್ತಿ) ಎಂದು ಹೇಳಿ, ಬಹುಮಟ್ಟಿಗೆ ಮಾರ್ಗಕಾರನ ಮತವನ್ನೆ ಅನುಮೋದಿಸಿದ್ದಾನೆ.

ಪದ್ಯ ೫೨ : ಮಾರ್ಗಕಾರನು ಅವ್ಯಯಗಳ ವಿಚಾರವಾಗಿ ಹೀಗೆ ಹೇಳಿದ್ದಾನೆ ; ಆ ಪದ್ಯದ ಅರ್ಥ :

'ಅಹರಹಃ, ಉಚ್ಚೈಃ, ನೀಚೈಃ, ಮುಹುರ್ಮುಹುಃ (ಮುಹುಃಮುಹುಃ), ಇತಸ್ತತಃ (ಇತಃತತಃ), ಪುನಃ ಪುನಃ, ಅಂತಃ, ಬಹಿಃ, ಆದ್, ಇಹ, ಪ್ರಾದುಃ, ಅಹೋ, ಸಹಸಾ – ಇವೇ ಮೊದಲಾದುವು ಅವ್ಯಯಗಳು, ಅಸಹಾಯಗಳು.'

---

ಈ ಉಕ್ತಿ ಮೇಲೆ ಉದ್ಧರಿಸಿಕೊಟ್ಟಿರುವ 'ಸಮಸಂಸ್ಕೃತಗಳನಚ್ಚಗನ್ನಡದೊಳ್ ಬೆರಸಿ ಸಮಾಸಮಂ ಮಾಡಲಾಗದು' ಎಂಬ ಉಕ್ತಿಗೆ ವಿರುದ್ಧವಾಗಿರುವುದಾಗಿ ಕಂಡುಬರುತ್ತದೆ ಎಂದು ಭಾವಿಸಿ, "ಆದ್ದರಿಂದ ಅಚ್ಚಾದ ಪ್ರತಿಗಳಲ್ಲಿಯ ವಿವರಣೆ, ಪ್ರಯೋಗಗಳೆರಡೂ ಪ್ರಕ್ಷಿಪ್ತವಾಗಿರಬೇಕು. ಕೇಶಿರಾಜನು ಅವುಗಳನ್ನು ಆ ಸಂದರ್ಭದಲ್ಲಿ ಬರೆದಿರಲಾರನು" ಎಂದು ಅಭಿಪ್ರಾಯಪಟ್ಟಿದ್ದಾರೆ. ಈ ಸಂದರ್ಭದಲ್ಲಿ 'ಬೆರಸಿ ನಡೆಸುವುದು' ಮತ್ತು 'ಬೆರಸಿ ಸಮಾಸಮಂ ಮಾಡಲಾಗದು' ಎಂಬ ಉಕ್ತಿಗಳನ್ನು ಹೋಲಿಸಿ ಪರಿಶೀಲಿಸಬೇಕಾಗಿದೆ. 'ಬೆರಸಿ ಸಮಾಸಮಂ ಮಾಡಲಾಗದು' ಎನ್ನುವುದರಿಂದ ಸಮಸಂಸ್ಕೃತಪದಗಳನ್ನು ಕನ್ನಡ ಲಿಂಗಗಳಾಗಿ ಮಾಡಿಕೊಂಡು ಕನ್ನಡ ಪದಗಳೊಂದಿಗೆ ವಾಕ್ಯಗಳಲ್ಲಿ ಹೊಂದಿಕೆಯಾಗುವಂತೆ ಬೆರಸಿ ಹೇಳಬಹುದೇ ಹೊರತು ಬೆರಸಿ ಸಮಾಸವನ್ನು ಮಾಡಲಾಗದು' ಎಂಬ ಅರ್ಥವು ವಿವಕ್ಷಿತವಾಗಿದೆ. ಇದು 'ಕವಿರಾಜಮಾರ್ಗ'ಕಾರನ ಮತಕ್ಕೆ ಹೊಂದಿಕೆಯಾಗುವುದೇ ಹೊರತು ವಿರುದ್ಧವೇನೂ ಆಗದೆಂದು ನಮ್ಮ ಅಭಿಪ್ರಾಯ. ಉ.ವಿ.ವಿ.ನಿ.ದ. ಪ್ರತಿಯ ವ್ಯಾಖ್ಯಾನಕಾರನು ಈ ಅರ್ಥವಿವಕ್ಷೆಯನ್ನು ಗ್ರಹಿಸದೆ, ಅದನ್ನು ಯಥೋಚಿತವಾಗಿ ಮಾರ್ಪಡಿಸಿಕೊಂಡು ತನ್ನ ವಿವರಣೆಯಾಗಿ ಕೊಟ್ಟಿರುವ ಹಾಗೆ ಕಂಡುಬರುತ್ತದೆ.

'ಅಸಹಾಯಂಗಳ್' : ೮೧ನೆಯ ಸೂತ್ರದ ಕೆಳಗೆ, ಅವ್ಯಯಗಳು ಲಿಂಗಗಳಾಗುವುದಿಲ್ಲ ಎಂಬುದಕ್ಕೆ ಪ್ರಯೋಗಭಾಗದಲ್ಲಿ 'ಅಂತರ್, ಬಹಿರ್, ಉಚ್ಚೈಸ್, ನೀಚೈಸ್, ಮುಹುರ್, ಪುನರ್, ಅಹಸ್, ಈಷತ್, ಯುಗಪತ್, ಪೃಥಕ್ – ಇವು ಮೊದಲಾದ ಸಹಜಾವ್ಯಯಂಗಳನಿರಿಸಿ ವಿಭಕ್ತಿಯಂ ಪತ್ತಿಸಲಾಗದು' ಎಂದು ಕೇಶಿರಾಜನು ಸ್ಪಷ್ಟವಾಗಿ ಹೇಳಿದ್ದಾನೆ. ಎಂದರೆ, ಸಂಸ್ಕೃತಾವ್ಯಯಗಳಿಗೆ ಕನ್ನಡ ವಿಭಕ್ತಿಗಳನ್ನು ಹತ್ತಿಸಕೂಡದು ಎಂದು ತಾತ್ಪರ್ಯ. ಕವಿರಾಜಮಾರ್ಗಕಾರನ 'ಅಸಹಾಯಂಗಳ್' ಎಂಬುದರ ವಿವರಣೆಯಂತಿದೆ ಇದು.

ಪದ್ಯ ೫೩–೫೫ : 'ಬೆರಸಿರೆ ಕನ್ನಡದೊಳ್ ಬಂಧುರಮಾಗದು ಕಾವ್ಯರಚನೆ' – ಇಲ್ಲಿ 'ಬೆರಸಿರೆ' ಎಂಬ ಮಾತು ಗಮನಾರ್ಹ. ಎಂದರೆ, ಮೇಲ್ಕಂಡ ಸಂಸ್ಕೃತಾವ್ಯಗಳನ್ನು ಇದ್ದುವಿದ್ದಂತೆ ಹಾಗೆ ಹಾಗೆಯೆ ಎಂದರೆ 'ವ್ಯಸ್ತ'ವಾಗಿ ಕನ್ನಡ ಪದಗಳೊಂದಿಗೆ ಬೆರಸಿದರೆ ಕಾವ್ಯರಚನೆ ಚೆಲುವಾಗದು. ಆದರೆ, ಈ ಅವ್ಯಯಗಳನ್ನು 'ಸಮಸ್ತ'ವಾಗಿ ಮಾಡಿ ಪ್ರಯೋಗಿಸಬಹುದು. ಈ ಅಭಿಪ್ರಾಯವನ್ನು (ಪದ್ಯ ೫೫ರಲ್ಲಿ) "ವಿದಿತ ಸಮಸಂಸ್ಕೃತೋದಿತ ಪದಂಗಳೊಳ್ ಪುದಿದು ಬೆರಸಿ ಬರೆ ಕನ್ನಡದೊಳ್ ಮುದಮನವು ತುರ್ಕುಂ" ಎಂದು ವಿಸ್ತರಿಸಿ ವಿವರಿಸಿ ಹೇಳಿದ್ದಾನೆ. ಲಕ್ಷ್ಯ ಪದಗಳನ್ನು ಪರಿಶೀಲಿಸಿದಲ್ಲಿ ಈ ಅಭಿಪ್ರಾಯವು ಮನದಟ್ಟಾಗುವುದು. ಬೆರಸಬಾರದುದಕ್ಕೆ ಲಕ್ಷ್ಯವಾದ ೫೪ನೆಯ ಪದ್ಯದಲ್ಲಿ ಖು ಬಹಿರ್ ಅಂತರ್ ಉಪವನಂಗಳೊಳ್ ಅಹರಹಂ ಆ ಪರಭೃತಂಗಳುಲಿವ ರವಂಗಳ್ ಸಹಸಾ ತಳಮಳಗೊಳಿಸಿದವು ಅಹೋ ಮನಗಳಂ ಇತಸ್ತತಂ ವಿರಹಿಗಳಾ' – ಅವ್ಯಯಗಳೆಲ್ಲವೂ ತನಿಯಾಗಿ ಪ್ರಯೋಗವಾಗಿವೆ, ಇಲ್ಲವೆ ಕನ್ನಡ ಪ್ರತ್ಯಯದೊಂದಿಗೆ (ಮ್) ಪ್ರಯೋಗವಾಗಿವೆ. ಇದು 'ಅಮಾರ್ಗ'ಕ್ಕೆ ಲಕ್ಷ್ಯ. 'ಮಾರ್ಗ'ಕ್ಕೆ – ಸರಿಯದ ಕ್ರಮಕ್ಕೆ – ಕೊಟ್ಟಿರುವ ತಿದ್ದುಪಾಟಾದ ಲಕ್ಷ್ಯದಲ್ಲಿ – 'ಬಹಿರುದ್ಯಾನಾಂತರ', 'ಅಹರ್ನಿಶಂ' ಮುಂತಾದ ಪದಗಳೆಲ್ಲವೂ ಸಂಸ್ಕೃತ ವ್ಯಾಕರಣದ ಪ್ರಕಾರ (೫೭ನೆಯ ಪದ್ಯದಲ್ಲಿ 'ವಿದಿತ ಸಂಸ್ಕೃತೋಕ್ತಕ್ರಮಮಂ ಬಗೆದೊಂದು ಮಾಡಿ ಪೇಟ್ದ' ರೀತಿಯಲ್ಲಿ) 'ಸಮಸಂಸ್ಕೃತೋದಿತ ಪದಂಗಳೊಳ್ ಪುದಿದು ಬೆರಸಿ' ಬಂದಿವೆ, ಎಂದರೆ ಸಮಸ್ತಪದಗಳಾಗಿ ರೂಪಪಡೆದಿವೆ. ಈ ಸಮಸ್ತಪದಗಳಲ್ಲಿ ಅಂತರ್ಗತಗಳಾದ ಅವ್ಯಯಗಳು ಈಗ 'ಅಸಹಾಯಂಗಳ್' ಅಲ್ಲ.

ಸಮಸಂಸ್ಕೃತಗಳ ಸಹಾಯವನ್ನು ಪಡೆದಿವೆ; ಅವುಗಳ ಬೆಂಬಳಿಯಲ್ಲಿ ಪ್ರಯೋಗಾರ್ಹತೆಯನ್ನು ಪಡೆದಿವೆ. ಈ ಸಮಸ್ತ ಪದಗಳಲ್ಲಿ ಅವ್ಯಯಗಳು ಪೂರ್ವ ಪದಗಳಾಗಿರುವುದನ್ನು ಗಮನಿಸಬೇಕು.[೪]

ಒತ್ತುಂಗರಡೆ = ಒತ್ತಿ ಬಾಜಿಸುವ ಕರಡೆ (ಕರಡಿ) ವಾದ್ಯ. (ಎರಡೂ ಕಡೆಯ ಬಾಯಿಗಳ ಚರ್ಮದ ಮುಚ್ಚಿಗೆಗಳನ್ನು ಬಿಗಿದು ಕಟ್ಟಿರುವ ಉದ್ದವಾದ ಚಾರುಪಟ್ಟಿಗಳನ್ನು ವಾದ್ಯದ ನಡುಭಾಗದಲ್ಲಿ ಎಡಗೈಯಿಂದ ಒತ್ತುತ್ತ ಬಲಗೈಯಲ್ಲಿ ಕಡ್ಡಿಯಿಂದ ಬಾಜಿಸುವ ವಾದ್ಯವಿಶೇಷ) ('ಮೋದುಂಗರಡೆ' ಎಂಬ ಪಾಠವೂ ಇದೆ : 'ಪರುಷತರಮಕ್ಕು ಮೋದುಂಗರಡೆಯ –' ಇದಕ್ಕೆ 'ಹೊಡೆದು ಬಾಜಿಸುವ ಕರಡೆ' ಎಂದು ಅರ್ಥಮಾಡಬಹುದು. ಈ ಪಾಠವನ್ನು ಸ್ವೀಕರಿಸಿದರೆ 'ಅಕ್ಕುಂ' ಎನ್ನುವೆಡೆ 'ಅಕ್ಕು' ಎಂಬ ಅಸಾಧುವಾದ ಹಳಗನ್ನಡ ಕ್ರಿಯಾಪದ ರೂಪವನ್ನು ಇಟ್ಟುಕೊಳ್ಳಬೇಕಾಗುತ್ತದೆ. 'ಅಕ್ಕುಮ್ಮೋದುಂ' ಎಂದರೆ ಛಂದಸ್ಸು ಕೆಡುತ್ತದೆ.)

ಪರುಷ – ಕರ್ಕಶ. (ಉ.ವಿ.ವಿ.ನಿ.ದ ಶಬ್ದಮಣಿ ದರ್ಪಣ ಪ್ರತಿಯ ವ್ಯಾಖ್ಯಾನಕಾರನು 'ನಿಷ್ಠುರಂ, ಪರುಷಂ, ಗ್ರಾಮ್ಯಂ, ಎಂದು ಪರುಷ ಎಂಬ ಶಬ್ದಕ್ಕೆ ನಿಘಂಟು' ಎಂದು ಅರ್ಥ ಹೇಳಿದ್ದಾನೆ.) (ಶ.ಪಾ., ಪು. ೬೯)

ಪದ್ಯ ೫೪ : ಉ.ವಿ.ವಿ.ನಿ.ದ ಶ.ಮ.ದ. ಪ್ರತಿಯಲ್ಲಿ ಉದ್ಧರಿಸಿರುವ ಈ ಪದ್ಯದ ಪಾಠ ಹೀಗಿದೆ; –

ಬಹಿರಿತರಮುಪವನಂಗಳೊ
ಳಹರಹಮಾ ಪರಭೃತಂಗಳಳಿಯ ರವಂಗಳ್
ಸಹಸಂ ತಳವಳಗೊಳಿಸಿದ
ವಹೋ ಮನಂಗಳನಿತಸ್ತತಂ ವಿರಹಿಗಳಾ ॥

ಈ ಪಾಠವನ್ನು ಕುರಿತು ಪ್ರೊ॥ ಡಿ.ಕೆ. ಭೀ. ರವರ ಟೀಕೆ : "ಇಲ್ಲಿ ಪಾಠಾಂತರವನ್ನು ಗಮನಿಸಬೇಕು. ಮೂಲದಲ್ಲಿ ಸಹಸಾ ಎಂದಿದೆ. ಇಲ್ಲಿ ಸಹಸಂ ಎಂದಿದೆ. ಇಲ್ಲಿ ಕನ್ನಡ ಪ್ರತ್ಯಯವಿರುವುದರಿಂದ

---

೪. Samskrita particles (avyayas) as ಅನ್ತರ್, ಬಹಿರ್, ಪುನರ್ .... cannot form by themselves declinable bases in Kannada ; but compound bases (Samasalinga) with a final vowel, of which they form the first member, are declinable, e.g. ಅನ್ತರ್ಮುಖ, ಬಹಿರಂಗ, ಪುನಃಪಾಕ - Grammar of the Kannada Language by F.Kittel, p.31.

ಅಪಪ್ರಯೋಗಕ್ಕಾಗಿ ಈ ಪಾಠವೇ ಸರಿಯಾಗಿದೆ." ೫೨ನೆಯ ಪದ್ಯದಲ್ಲಿ ಕೊಟ್ಟಿರುವ ಸಂಸ್ಕೃತದ ಅವ್ಯಯಗಳನ್ನು ಕನ್ನಡದೊಂದಿಗೆ ಹಾಗೆಯೇ ಸ್ವತಂತ್ರವಾಗಿ ಬೆರಸಕೂಡದೆಂಬುದು ಮಾರ್ಗಕಾರನ ಆಶಯವಾಗಿರುವುದರಿಂದ , ದೋಷಕ್ಕೆ ಕೊಡುವ ಲಕ್ಷ್ಯ ಪದ್ಯದಲ್ಲಿ 'ಸಹಸಾ' ಎಂಬ ಅವ್ಯಯವನ್ನು ಅದರ ಸ್ವಸ್ವರೂಪದಲ್ಲಿಯೇ ಪ್ರಯೋಗಿಸುವುದರಲ್ಲಿ ಬಾಧಕವೇನಿಲ್ಲ. ಸಂಸ್ಕೃತಾವ್ಯಯಗಳಿಗೆ ಕನ್ನಡ ಪ್ರತ್ಯಯಗಳನ್ನು ಹತ್ತಿಸಿದರೂ ದೋಷವಾಗುವುದೆಂಬ ಅವನ ಆಶಯಕ್ಕೆ ಅಹರಹಮ್', 'ಇತಸ್ತತಂ' ಎಂಬಿವು ದೃಷ್ಟಾಂತಗಳಾಗುತ್ತವೆ. ಹೀಗಿರುವುದರಿಂದ, ಮೂಲದ ಪಾಠಕ್ಕಿಂತ ಮೇಲ್ಕಂಡ ಪಾಠವೇ ಸರಿ ಎಂದು ನಿರ್ಣಯಿಸಬೇಕಾದ ಅವಶ್ಯಕತೆಯಿಲ್ಲ. ಅಲ್ಲದೆ, 'ಪರಭೃತಂಗಳ' ಎಂಬ ಬಹುವಚನ ಪ್ರಯೋಗದ ಮೇಲೆ 'ಅಳಿಯ' ಏಕವಚನ ಪ್ರಯೋಗವು ಸಮಂಜಸವಾಗಿ ಕಾಣುವುದಿಲ್ಲ. ಜೊತೆಗೆ 'ಪರಭೃತಂಗಳಳಿಯ' ಎಂಬುದು ಸಮಾಸೋಕ್ತಿಯಲ್ಲ; ಪದದ ಸಂಧಿಯನ್ನು ಬಿಡಿಸಿದರೆ, 'ಪರಭೃತಂಗಳ್ + ಅಳಿಯ' ಎಂದಾಗಿ, 'ರವಂಗಳ್' ಎಂಬ ಪದದೊಂದಿಗೆ ಅನ್ವಯವಾಗುವುದಿಲ್ಲ. ಆದ್ದರಿಂದ, ಮೇಲ್ಕಂಡ ಪಾಠವು ಅಷ್ಟು ವಿಶ್ವಾಸನೀಯವಾಗಿ ಕಾಣದು.

ಪದ್ಯ ೫೬ : ಈ ಲಕ್ಷ್ಯಪದ್ಯವು ಸಂಸ್ಕೃತಾವ್ಯಯಗಳು 'ವಿದಿತ ಸಮಸಂಸ್ಕೃತೋದಿತ ಪದಂಗಳೊಳ್‌ಪುದಿದು ಬರೆ ಕನ್ನಡದೊಳ್ ಮುದಮನವುತರ್ಕುಂ' ಎಂಬ (೫೫ನೆಯ ಪದ್ಯದಲ್ಲಿನ) ನಿರ್ದೇಶಕ್ಕನುಗುಣವಾಗಿದೆ. 'ಅಹರ್ನಿಶಂ' ಎಂಬ ಪದವು ಸ್ವಲ್ಪ ಸಂದೇಹಕ್ಕೆಡೆಗೊಡಬಹುದು. "ಇದು ಸಂಸ್ಕೃತದಲ್ಲಿ ಇದೇ ರೂಪದಲ್ಲಿದೆ. ಅದರಿಂದ ಸಮಸಂಸ್ಕೃತತ್ವಕ್ಕೆ ಭಂಗವಾಯಿತು ಎನ್ನಬಾರದು... ಇಂಥ ದೃಷ್ಟಾಂತವು ಗ್ರಾಹ್ಯವೆಂದು ಗ್ರಂಥಾದಿಯಲ್ಲಿ ಸರಸ್ವತಿಯನ್ನು ಸುತ್ತಿಸುವ ೩ನೆಯ ಪದ್ಯದೊಳಗಿನ 'ಚಿರಂ।ದೇವಿ ಸರಸ್ವತಿ...' ಎಂಬ ಭಾಗದಲ್ಲಿರುವ 'ಚಿರಂ' ಪದದಿಂದಲೂ ಸಿದ್ಧವಾಗುತ್ತಿದೆ." (ಕ.ರಾ.ವಿವೇಕ ಭಾಗ ೨)

ಪದ್ಯ ೫೭–೫೮ : 'ನೆಗಟ್ದಿ ದರ್ಕನ್ನಡಂಗಳೊಳ್' – ೪೬ನೆಯ ಪದ್ಯದಲ್ಲಿ ಪ್ರಯೋಗಿಸಿರುವ 'ಕನ್ನಡಂಗಳ್' ಎಂಬ ಬಹುವಚನ ಪ್ರಯೋಗದ ಅರ್ಥವೇ ಬೇರೆ. ಇಲ್ಲಿನದೇ ಬೇರೆ ಎಂಬುದು ಸ್ಪಷ್ಟ "ನೆಗಟೆರ್ದ ಕನ್ನಡಂಗಳೊಳ್' ಎಂದರೆ 'ಪ್ರಸಿದ್ಧವಾದ ಸಮಸಂಸ್ಕೃತಗಳೆನ್ನಿಸಿದ ಕನ್ನಡ

ಮಾರ್ಗೀಯ ಪದಗಳಲ್ಲಿ' ಎಂಬ ಅರ್ಥ. ಅಂಥ ಪದಗಳು ಅನೇಕವಾಗಿರುವುದರಿಂದಲೇ 'ಕನ್ನಡಂಗಳೊಳ್' ಎಂದು ಬಹುವಚನ ಪ್ರಯೋಗವನ್ನೆಸಗಿರಬೇಕು. ಹಾಗಿಲ್ಲದೆ, 'ದೇಸಿಗನ್ನಡಂಗಳೊಳ್' ಎಂದಾಗುತ್ತಿದ್ದರೆ ಅವುಗಳ ವಿವೇಚನೆಗೆ 'ಅಗಣಿತಗುಣ ವಿದಿತ ಸಂಸ್ಕೃತೋಕ್ತ ಕ್ರಮಮಂ' ಬಗೆವುದಾದರೂ ಯಾಕೆ?' ಎಂದು ಮುಳಿಯ ತಿಮ್ಮಪ್ಪಯ್ಯನವರು ವ್ಯಾಖ್ಯಾನಿಸಿದ್ದಾರೆ.

ಸಮಸಂಸ್ಕೃತವನ್ನೇ 'ತತ್ಸಮ' ಎಂದು ತಿಳಿಯುವುದು ಈಗಿನ ರೂಢಿ. ಆದರ, ಕೇಶಿರಾಜನ ಪ್ರಕಾರ ತತ್ಸಮ ಶಬ್ದಗಳೇ ಬೇರೆ. (ಶ.ಮ.ದ. ಸೂತ್ರಗಳು ೨೯೭–೨೯೮). ಅವನ ಅಭಿಪ್ರಾಯದಂತೆ, 'ಈ ಶಬ್ದಂಗಳ್ ಕನ್ನಡಕ್ಕಂ ಸಂಸ್ಕೃತಕ್ಕಂ ಸರಿ.' ಎಂದರೆ, ಈ ಪದಗಳನ್ನು ಸಂಸ್ಕೃತ ಪದಗಳೊಂದಿಗಾಗಲಿ ಕನ್ನಡ ಪದಗಳೊಂದಿಗಾಗಲಿ ಕೂಡಿಸಿ ಸಮಾಸೋಕ್ತಿ ಮಾಡಬಹುದು. ಮಾರ್ಗಕಾರನು ಈ ತತ್ಸಮ ವಿಚಾರವನ್ನು ಕುರಿತು ಹೇಳಿಲ್ಲ. ಆದರೆ, ಸಂಸ್ಕೃತ ಪದಗಳನ್ನೂ ಕನ್ನಡ ಪದಗಳನ್ನೂ ಸಮಾಸೋಕ್ತಿಗಳಲ್ಲಿ ಬೆರಸಬಾರದೆಂದು ಎಚ್ಚರಿಕೆ ನೀಡಿದ್ದಾನೆ. ಮಾರ್ಗಕಾರನು ಕೊಟ್ಟಿರುವ ದೋಷಲಕ್ಷ್ಯವನ್ನೆ ಕೇಶಿರಾಜನೂ ಉದಾಹರಿಸಿದ್ದಾನೆ.

'ಮಱುಗುವ ಪಾಲ್ಗಳೆಯ ಪನಿಗಳಂ ಬೆರಸಿದವೋಲ್' – ಕುದಿಯುವ ಹಾಲಿಗೆ ಮಜ್ಜಿಗೆಯ ಹನಿಗಳನ್ನು ಬೆರಸಿದ ಹಾಗೆ. (ಈ ಮಾತಿನ ಅರ್ಥವು ಕೇಶಿರಾಜನ ಕಾಲಕ್ಕಾಗಲೇ ಬೆಳೆದಿರುವುದು ಗಮನಾರ್ಹ : ಮಱುಗು – ಸಂತಾಪೇ).

ಪದ್ಯ ೬೨ : ಈ ಪದ್ಯವು ಭಾಮಹನ 'ಕಾವ್ಯಾಲಂಕಾರ' ಶ್ಲೋಕದ (I–೪೭)[೫] ಅನುವಾದ.

ಪದ್ಯ ೬೩ : ಇದು 'ಶ್ರುತದುಷ್ಟ'ಕ್ಕೆ ಉದಾಹರಣೆ. ಇದರ ಎರಡನೆಯ ಚರಣಭಾಗವು ಪಾಠಕರ ಪ್ರತಿಯಲ್ಲಾಗಲಿ, ಮದ್ರಾಸು ಮುದ್ರಣದ ಪ್ರತಿಯಲ್ಲಾಗಲಿ ಅರ್ಥವಾಗುವಂತಿಲ್ಲ (ಅನುಬಂಧವನ್ನು ನೋಡಿ– ೧೯೬೮ರ ಆವೃತ್ತಿ). ಮುಳಿಯ ತಿಮ್ಮಪ್ಪಯ್ಯನವರು ಅದನ್ನು ಹೀಗೆ ತಿದ್ದಿರುತ್ತಾರೆ: '– ದೂರ

---

೫. ಭಾಮಹನ ಇನ್ನೊಂದು ಶ್ಲೋಕದಲ್ಲಿ (I–೩೭) 'ನೇಯಾರ್ಥ', 'ಕ್ಲಿಷ್ಟ', 'ಅನ್ಯಾರ್ಥ', 'ಅವಾಚಕ', 'ಆಯುಕ್ತಿಮತ್', ಗೂಢಶಬ್ದಾಭಿದಾನ' – ಈ ದೋಷಯುಕ್ತಪದಗಳನ್ನು ಕವಿಗಳು ಪ್ರಯೋಗಿಸರೆಂದು ಹೇಳಿದ್ದಾನೆ.

(ಮೋಡಲಾಜಿ) ಪೂರ್ರಂ'. ನಾವು ದೊರೆತ ಪಾಠಗಳಲ್ಲಿನ ಅಕ್ಷರಗಳನ್ನೆ ಸ್ಥಾನಾಂತರಗೊಳಿಸಿ ಅರ್ಥವ್ಯಕ್ತಿಯಾಗುವಂತೆ ಪುನಸ್ಸಂಯೋಜನೆ ಮಾಡಿರುತ್ತೇನೆ ಅಷ್ಟೆ. ಇದು ಕವಿಯ ಮೂಲಪಾಠಕ್ಕೆ ಅತ್ಯಂತ ಸಮೀಪವೆಂದು ನಮ್ಮ ನಂಬುಗೆ.

ಅನ್ವಯ ಕ್ರಮದಲ್ಲಿ ಈ ಪದ್ಯದ ಪದವಿಭಾಗ :

'ನಿಲ್, ತೋಳಂ ಬರ್ಪುದು, ಸಯ್ತಲ್ತು, ಊರುಂ ದೂರಂ
ಎನ್, ಎಡೆತುಡಗರ್‌ಪೂರಂ, ಕಲ್ತು **ಉಲ್ಲಿಂದೆ** ಓಡುವಂ
ಎಂಬ ಅಲ್ತು, ತಂದ ಕೂಟಂ **ಊ** ಸಂಗಮದೊಳ್ ಉಣ್ಣಿಂ.'

(ಕಾಡುದಾರಿಯಲ್ಲಿ ಒಬ್ಬ ಪ್ರಯಾಣಿಕನು ತನ್ನ ಜೊತೆಯವರಿಗೆ ಹೇಳುವ ಎಚ್ಚರಿಕೆಯ ಮಾತಿನಂತಿದೆ : ನಿಲ್ಲು ತೋಳ ಬರುತ್ತಿದೆ ; ನಮ್ಮ ಪಾಡು ಈಗ ನೆಟ್ಟಗಿಲ್ಲ ; ಊರಿಗೆ ಹಿಂದಿರುಗೋಣವೆಂದರೆ, ಅದು ಕೂಡ ದೂರವೆನ್ನು ; ಇತ್ತ, ಹಾದಿಯ ಕಳ್ಳರು (ಎಡೆತುಡಗರ್) ಹೆಚ್ಚಾಗಿದ್ದಾರೆ; ಈಗ ಓಡುವುದನ್ನು ಕಲಿತು ಇಲ್ಲಿಂದ ಓಡೋಣವೆಂದರೆ, ಅದು ಅಷ್ಟು ಸುಲಭವಲ್ಲ ; ತಂದಿರುವ ಬುತ್ತಿಯ ಅನ್ನವನ್ನು ಆ ನದಿಯ ಸಂಗಮದಲ್ಲಿ ಉಣ್ಣಿರಿ.) (ಅಲ್ಲಿ ಇಲ್ಲಿ ಎನ್ನುವ ಹಾಗೆ 'ಉಲ್ಲಿ' ಎಂಬ ಪ್ರಯೋಗವನ್ನೂ, ಆ ಈ ಎನ್ನುವ ಹಾಗೆ 'ಊ' ಎಂಬ ಪ್ರಯೋಗವನ್ನೂ ಗಮನಿಸಿ).

ಈ ಪದ್ಯದ ಅರ್ಥದಲ್ಲಿ ಯಾವ ಬಗೆಯ ದೋಷವೂ ಇಲ್ಲದಿದ್ದರೂ ಪದಸಂಯೋಜನೆಯಲ್ಲಿ ಎಂದರೆ ಪದಗಳನ್ನು ಕೂಡಿಸಿ ಹೇಳುವಾಗ ಒಂದೆರಡು ಕಡೆ ಅವು ಕಿವಿಗೆ ಬೀಳುವ ತೆರದಲ್ಲಿ ಅಸಭ್ಯವಾದ ಅರ್ಥವು ಬೋಧೆಯಾಗುತ್ತದೆ. ಆದ್ದರಿಂದ ಇದು 'ಶ್ರುತದುಷ್ಟ' ಕಾವ್ಯದೋಷ (ಹೇ + ಲತಾಂಗಿ ಎಂದ ಹಾಗೆ) ಈ ರೀತಿ ಪದ್ಯರಚನೆ ಮಾಡಬಾರದು.

ಪದ್ಯ ೬೪ : ಇದು 'ಅರ್ಥದುಷ್ಟ'ಕ್ಕೆ ಉದಾಹರಣೆ. ಈ ಪದ್ಯದ ದ ಸಂಯೋಜನೆಯಲ್ಲಿ ಯಾವ ದೋಷವೂ ಇಲ್ಲ. ಆದರೆ, 'ಊರ್ಧ್ವರೇತಂ', 'ಹಿರಣ್ಯರೇತೋತಿತೀವ್ರಂ', 'ಪರಮಭಗಸಹಿತೆ' ಈ ಪದಗಳು ಅಸಭ್ಯವಾದ ಅರ್ಥಪ್ರತೀತಿಗೂ ಎಡೆಗೊಡುತ್ತಿವೆ.

ಪದ್ಯ ೬೫ : ಇದರಲ್ಲಿ ಅರ್ಥದೋಷವಾವುದೂ ಇಲ್ಲ. ಆದರೆ, ಮೊದಲಿಂದ ಕಡೆಯವರೆಗೆ ಠ್ಫೆಯುಕ್ತವಾದ ಮತ್ತು ಇತರ ಬಗೆಯ ಪರುಷವರ್ಣಗಳಿಂದ ಕೂಡಿದ ಸಂಯುಕ್ತಾಕ್ಷರಗಳು ಶ್ರುತಿಗೆ ಕಷ್ಟವಾಗಿ (ಕರ್ಕಶವಾಗಿ) ಪರಿಣಮಿಸಿವೆ.

ಈ ಪದ್ಯದ ಅನ್ವಕ್ರಮ : ಆಗಳ್, ಪರದರ್ಗೆ (ವರ್ತಕರಿಗೆ, ವೈಶ್ಯರಿಗೆ), ಆ ಪಾರ್ವರ್ಗೆ (ಆ ಬ್ರಾಹ್ಮಣರಿಗೆ), ಅರಸರ್ಗೆ (ರಾಜರಿಗೆ, ಕ್ಷತ್ರಿಯರಿಗೆ), ಕುಡಿಯರಪ್ಪ (ಕಡೆಯ ವರ್ಣದವರಾದ ಒಕ್ಕಲಿಗರಿಗೆ) ಆ ನಾಲ್ವರ್ಗೆ, ಸ್ಥಿರ, ಗೋಪ (ಪಶುಪಾಲನ), ಅಧ್ಯಾಯ (ಅಧ್ಯಯನ ಎಂದರೆ ವೇದಾಧ್ಯಯನ ಮುಂತಾದ ಓದುವಿಕೆ), ಕ್ಷ್ಮಾಪರಿಪಾಲ್ಯ, (ಭೂ ಪರಿಪಾಲನ), ಕ್ಷೇತ್ರಕರ್ಷಣಂಗಳ್ (ನೆಲವನ್ನು ಉಳುವಿಕೆ), ಕ್ರಿಯೆಗಳ್, ಆಯ್ತು.

ಪದ್ಯ ೬೬ : ಕವಿಯ ಆಶಯವೇನೆಂಬುದನ್ನು ಕಲ್ಪನೆಮಾಡಿಕೊಳ್ಳುವುದೂ ಕಷ್ಟವಾಗಿರುವಲ್ಲಿ, 'ಕಲ್ಪನೋಕ್ತಿ ಕಷ್ಟ'ವೆಂಬ ದೋಷವುಂಟಾಗುವುದು. ಈ ದೋಷಕ್ಕೆ ಲಕ್ಷ್ಯವಾದ ಈ ಪದ್ಯದಲ್ಲಿ, 'ಸಮಂಜಸನೆಂಬವನು ಶತ್ರು ಸೈನ್ಯವನ್ನು ಸದೆಬಡಿದು ಮೀರಿಸಿದನು' ಎಂಬ ನಾಲ್ಕನೆಯ ಪಾದದ ಅರ್ಥದೊಂದಿಗೆ ಉಳಿದ ಪದ್ಯಭಾಗವನ್ನು ಅರ್ಥೈಸಿ ಅನ್ವಯಮಾಡುವುದು ಕಷ್ಟವಾಗಿದೆ. ಈ ಕ್ಲೇಶವನ್ನೊಡ್ಡಬೇಕೆಂದೇ ಈ ಲಕ್ಷ್ಯಪದ್ಯದ ರಚನೆಯಾಗಿರುವಾಗ, ಅದನ್ನು ಅರ್ಥಮಾಡಿಕೊಳ್ಳಬೇಕೆಂಬ ಸಾಹಸ ಅಪೇಕ್ಷಣೀಯವಾದರೂ ಅನಾವಶ್ಯಕ !

ಪದ್ಯ ೬೮ : ಮೇಲೆ ಹೇಳಿದ ನಾಲ್ಕು ಬಗೆಯ ದೋಷಗಳು ಯಾವ ಸಂದರ್ಭಗಳಲ್ಲಿ ದೋಷಗಳೆನಿಸುವುದಿಲ್ಲ ಎಂಬುದನ್ನು ಈ ಪದ್ಯದಲ್ಲಿ ಮಾರ್ಗಕಾರನು ನಿರ್ದೇಶಿಸಿದ್ದಾನೆ: 'ಚಕ್ರಬಂಧ', 'ಮುರಜಬಂಧ', 'ಗೋಮೂತ್ರಿಕಾ' ಮುಂತಾದ 'ಚಿತ್ರಕಾವ್ಯ' ಅಥವಾ 'ದುಷ್ಕರ ಕಾವ್ಯ'ಗಳಲ್ಲಿ (ವಿಸ್ಮಯಕಾರಿಯೂ ರಚಿಸಲು ಕಷ್ಟಕರವೂ ಆದ ಕವಿತಾಬಂಧಕ್ಕೆ 'ಚಿತ್ರಕಾವ್ಯ', 'ದುಷ್ಕರಕಾವ್ಯ' ಎಂಬ ಹೆಸರು) 'ಶ್ರುತಿಕಷ್ಟ' ಎಂಬುದು ದೋಷವಾಗಿ ಪರಿಣಮಿಸುವುದಿಲ್ಲ. ಏಕೆಂದರೆ ಅಂಥ ರಚನೆಗಳಲ್ಲಿ ಶ್ರುತಿಕಷ್ಟಗಳಾದ ಅಕ್ಷರ ಯೋಜನೆ ಅನೇಕ ವೇಳೆ, ಅನಿವಾರ್ಯವಾಗುತ್ತದೆ. ಉಳಿದ ಮೂರು ದೋಷಗಳೂ 'ಪಗರಣ' ಎಂದರೆ 'ಪ್ರಕರಣ' (ಉದಾ : 'ಮೃಚ್ಛಕಟಿಕಾ') ಎಂಬ ದೃಶ್ಯ ಕಾವ್ಯಪ್ರಭೇದದಲ್ಲಿ ನಗೆಯನ್ನು ತರುವವಾದ್ದರಿಂದ ಅಲ್ಲಿ ಅವು ದೋಷಗಳೆನಿಸುವುದಿಲ್ಲ.

ನಾಟ್ಯಶಾಸ್ತ್ರದ ಪ್ರಕಾರ 'ಪ್ರಕರಣ'ದಲ್ಲಿ ಹಾಸ್ಯ ಪ್ರಧಾನ ರಸವಲ್ಲ; ಅದು ಶೃಂಗಾರ ವೀರಗಳಿಗೆ ಪೋಷಕವಾಗಿ ಬರಬಹುದು. 'ಮೃಚ್ಛಕಟಿಕ'ದಲ್ಲಿ ಶಕಾರ ಹಾಸ್ಯಪಾತ್ರ. ಸಂಸ್ಕೃತದ 'ಪ್ರಕರಣ'ವು ಹಾಸ್ಯರಸ ಪ್ರಧಾನವಾದ

'ಪಗರಣ'ವಾಗಿ ಪರಿಣಮಿಸಿ ಕನ್ನಡ ನಾಡಿನಲ್ಲಿ ಬಳಕೆಗೆ ಬಂದಿದ್ದಿತೆ ಎಂಬುದು ವಿಚಾರಣೀಯ ನಕಲಿ ನಾಟಕ, ನಕಲಿಯ ಪಾತ್ರ ಎಂಬ ಅರ್ಥಗಳಲ್ಲಿ, 'ಪಗರಣ', 'ಪಗರಣಿಗ' ಎಂಬ ಮಾತುಗಳು 'ವಡ್ಡಾರಾಧನೆ'ಯಲ್ಲಿ ಪ್ರಯೋಗವಾಗಿವೆ.

ದುಷ್ಕರ ಕಾವ್ಯ = ವಿಸ್ಮಯಕಾರಿಯೂ ರಚಿಸಲು ಕಷ್ಟಕರವೂ ಆದ ಕವಿತಾಬಂಧ. ಅಗರ್ಹಿತಪ್ರಾಯ = ಅನಿಂದ್ಯ ; ನಿರ್ದುಷ್ಟ.

ಪದ್ಯ ೬೯–೭೦ : ಯತಿಭಂಗ, ಅರ್ಥ ಶೂನ್ಯ, ವಿರುದ್ಧಾರ್ಥ, ಉಕ್ತಪುನರುಕ್ತ, ಚ್ಯುತ ಯಾಥಾಸಂಖ್ಯ, ವ್ಯವಹಿತ, ಅಚ್ಛಂದ, ವಿಸಂಧಿ, ನೇಯಾರ್ಥ, ಆಗಮವಿರುದ್ಧ, ಸಮಯವಿರುದ್ಧ, ನ್ಯಾಯವಿರುದ್ಧ, ಕಳಾವಿರುದ್ಧ, ಕಾಲವಿರುದ್ಧ, ಲೋಕವಿರುದ್ಧ, ದೇಶವಿರುದ್ಧ – ಈ ೧೬ ದೋಷಗಳು ಮೇಲೆ ಹೇಳಿದ ೪ ದೋಷಗಳಿಂದ ಸ್ವರೂಪದಲ್ಲಿ ಭಿನ್ನವಾದ ಇತರ ದೋಷಗಳು.

ಈ ದೋಷವರ್ಣನ ವಿಭಾಗದಲ್ಲಿ ಮಾರ್ಗಕಾರನು ಬಹುಮಟ್ಟಿಗೆ ಭಾಮಹನನ್ನೇ ಅನುಸರಿಸಿದ್ದಾನೆ. ಭಾಮಹನ ಶ್ಲೋಕಗಳು :

"ಅಪಾರ್ಥಂ ವ್ಯರ್ಥಮೇಕಾರ್ಥಂ ಸಸಂಶಯಮಪಕ್ರಮಮ್ ।
ಶಬ್ದಹೀನಂ ಯತಿಭ್ರಷ್ಟಂ ಭಿನ್ನವೃತ್ತಂ ವಿಸಂಧಿ ಚ ॥
ದೇಶ ಕಾಲ ಕಲಾ ಲೋಕ ನ್ಯಾಯಾಗಮ ವಿರೋಧಿ ಚ ।
ಪ್ರತಿಜ್ಞಾಹೇತುದೃಷ್ಟಾಂತಹೀನಂ ದುಷ್ಟಂ ಚ ನೇಷ್ಯತೇ ॥" (IV–೧,೨)

(ಅಪಾರ್ಥ, ವ್ಯರ್ಥ, ಏಕಾರ್ಥ, ಸಂದಿಗ್ಧ, ಅಪಕ್ರಮ, ಶಬ್ದಹೀನ, ಯತಿಭ್ರಷ್ಟ, ಭಿನ್ನವೃತ್ತ, ವಿಸಂಧಿ, ದೇಶವಿರುದ್ಧ, ಕಾಲವಿರುದ್ಧ, ಕಲಾವಿರುದ್ಧ, ಲೋಕವಿರುದ್ಧ, ನ್ಯಾಯವಿರುದ್ಧ, ಆಗಮವಿರುದ್ಧ, ಪ್ರತಿಜ್ಞಾಹೀನ, ಹೇತುಹೀನ ದೃಷ್ಟಾಂತಹೀನ – ಈ ದೋಷಗಳು ಬರಕೂಡದು.)

ಕೆಲವು ದೋಷಗಳ ಹೆಸರುಗಳು ಕ.ರಾ.ಮಾರ್ಗದಲ್ಲಿ ಬೇರೆಯಾಗಿವೆ.

---

೬. "ಶ್ಲೋಕೇಷು ನಿಯತಸ್ಥಾನಂ ಪದಚ್ಛೇದಂ ಯತಿಂ ವಿದುಃ"

– ದಂಡಿ IV –೨೯

"ಯತಿಯೆಂದರೆ ಪದ್ಯಗಳನ್ನು ಓದುವಾಗ ಅರ್ಥಸ್ಫೂರ್ತಿ ಕೆಡದಂತೆ ಪದ್ಯಪಾದದ ನಿಯತವಾದ ಒಂದೊಂದೆಡೆಯಲ್ಲಿ ನಿಲ್ಲಿಸುವುದು. ಹಾಗೆ ನಿಲ್ಲಿಸುವುದು ಪದದ ಮಧ್ಯದಲ್ಲಿಯಾದರೆ ಅರ್ಥಸ್ಫೂರ್ತಿ ಕೆಡುವುದರಿಂದ ಪದದ ಕೊನೆಯಲ್ಲಿಯೇ ನಿಲ್ಲಿಸಬೇಕು."

– ಕ.ಕೈ. I –ಪು. ೯೧

ಪದ್ಯ ೭೧ : ಯತಿ ಎಂದರೆ 'ಉಸಿರ್ವ ತಾಣ' ; ಪದ್ಯವನ್ನು ಓದುವಾಗ ಉಸಿರು ನಿಲ್ಲುವ (ಅಥವಾ ನಿಲ್ಲಿಸಬೇಕಾದ) ವಿಶ್ರಾಮಸ್ಥಾನ.[೬] ವೃತ್ತಜಾತಿಗಳ 'ಪದಪದ್ಧತಿ'ಯಲ್ಲಿ ಇದನ್ನು ಗಮನಿಸಬೇಕು. (ಬೇರೆ ಬೇರೆ ಛಂದಸ್ಸಿನ ಪದ್ಯಗಳನ್ನು – ಅದರಲ್ಲಿ ವಿಶೇಷವಾಗಿ ಸಂಸ್ಕೃತ ವೃತ್ತಗಳನ್ನು – ಓದುವಾಗ ಪ್ರತಿಪಾದದಲ್ಲಿಯೂ ಒಂದು ನಿಯತ ಸ್ಥಾನದಲ್ಲಿ ಓದನ್ನು ನಿಲ್ಲಿಸಿ, ಉಸಿರನ್ನು ತೆಗೆದುಕೊಂಡು, ಮತ್ತೆ ಓದನ್ನು ಮುಂದುವರಿಸಬೇಕೆನ್ನಿಸುತ್ತದೆ. ಈ ಸಹಜಕ್ರಿಯೆಗೆ 'ಯತಿ' ಎಂಬುದು ಸಂಸ್ಕೃತದಲ್ಲಿ ಎಷ್ಟು ಉಚಿತವಾದ ಹೆಸರೋ ಕನ್ನಡದಲ್ಲಿ 'ಉಸಿರ್ವತಾಣ' ಎಂಬ ಸಂಕ್ಷಿಪ್ತ ವಿವರಣೆ ಅಷ್ಟೇ ಉಚಿತ. ಇಂಗ್ಲಿಷಿನಲ್ಲಿ ಇದು Caesura ಎಂದು ಛಂದಶಾಸ್ತ್ರದಲ್ಲಿ ಪ್ರಸಿದ್ಧ.)

ಪದ್ಯ ೭೨ : ಇದು ಯತಿಭಂಗಕ್ಕೆ ಉದಾಹರಣೆ : ಕಂದ ಪದ್ಯದಲ್ಲಿ ಪೂರ್ವೋತ್ತರಾರ್ಧಗಳಲ್ಲಿ ಆರನೆಯ ಗಣಸ್ಥಾನದಲ್ಲಿ 'ಜ' ಗಣವಾಗಲಿ (U - U) ಸರ್ವಲಘುವುಳ್ಳ ಗಣವಾಗಲಿ (U U U U) ಬಂದು, ಮೊದಲಿನ ಲಘುವಿನ ಮುಂದೆ ಯತಿ ಇರಬೇಕು. ಈ ಪದ್ಯದ ನಾಲ್ಕನೆಯ ಪಾದದಲ್ಲಿ ಯತಿಭಂಗವಾಗಿದೆ :

– U U – – U U U U – – U U –
ಕ್ಕೋಡಿ ಬ । ದುರ್ಗ್ಗಂಕ । ಲಮಜೀವ । ರಾರ್ಭೂ । ತಳದೊಳ್

ಆರನೆಯ ಗಣದಲ್ಲಿ 'ಲ್ಕ । ಮಜೀ ವ' ಎಂಬಂತೆ ನಿಲ್ಲಿಸಿ ಓದಿದರೆ, ಅರ್ಥ ಕೆಡುವ ರಿತಿಯಲ್ಲಿ ಪದಚ್ಛೇದವಾಗುತ್ತದೆ. ಇದೇ ಪಾದವನ್ನು ೭೪ನೆಯ ಪದ್ಯದಲ್ಲಿ ಯತಿಭಂಗವಾಗದಂತೆ ತಿದ್ದಿ ಬರೆದಿರುವುದನ್ನು ಗಮನಿಸಿ :

– U U – – U – U – – U U –
ಕ್ಕೋಡಿ ಬ । ದುರ್ಗ್ಗಂಕ । ಲ್ಕೆ ಕಲ್ತ । ರಾರ್ಬಿ । ನ್ನಣಮಂ

ಪದ್ಯ ೭೩ : ೭೨ನೆಯ ಪದ್ಯದಲ್ಲಿ ಯತಿಭಂಗವಾಗಿದೆಯೆಂದು ತಿಳಿಸಿ, ಯತಿಯನ್ನು ಹೇಳಿದ ಕಡೆ ನಿಲ್ಲುವಂತೆ ಹೇಳಿದರೆ ಅದು ಅದೋಷವೆಂದು ಹೇಳಿದೆ. ತಡವಡಿಸಿ = ತಡಬಡಿಸಿ (ಹೊ.ಗ. ?), ತಪ್ಪು ಮಾಡಿ (?)

ಪದ್ಯ ೭೪ : **ಯತಿಭಂಗ :** "ಯತಿಭಂಗವು ದೋಷವೇ ಸರಿ. ಆದರೂ, ಪೂರ್ವದ ಲಕ್ಷಣಾಚಾರ್ಯರು ಕನ್ನಡದಲ್ಲಿ ಆ ದೋಷವನ್ನೇ ಎತ್ತಿಹಿಡಿದು, ದೇಸಿಗೆ ಹೊಂದಿಕೊಂಡ ಆ ಯತಿಭಂಗವನ್ನು ಒಪ್ಪಿಕೊಂಡು, ಕನ್ನಡದಲ್ಲಿ

ಖಂಡಪ್ರಾಸವು ಅತಿಶಯ (ವಿಶಿಷ್ಟ)ವೆಂದು ಅದನ್ನೇ ನೆಲೆಗೊಳಿಸಿ ಯತಿಯನ್ನು ಮೀರಿದರು.'' – ಇದು ಪದ್ಯದ ಅಭಿಪ್ರಾಯ.

''ಯತಿವಿಲಂಘನದಿಂದರಿದಲ್ತೆ ಕನ್ನಡಂ'' ಎಂದು ಕೇಶಿರಾಜನೂ ಹೇಳಿದ್ದಾನೆ. ಸಂಸ್ಕೃತದಿಂದ ಕನ್ನಡಕ್ಕೆ ಬಂದ ವೃತ್ತಗಳಲ್ಲಿ ಯತಿನಿಯಮವನ್ನು ಪಾಲಿಸದಿರುವುದೇ ರೂಢಿಯಾಯಿತು. ಆದರೆ ಕಂದಪದ್ಯಗಳಲ್ಲಿಯೂ ತ್ರಿಪದಿ ಮುಂತಾದ ಕೆಲವು ಕನ್ನಡ ಪದ್ಯಜಾತಿಗಳಲ್ಲಿಯೂ ಯತಿನಿಯಮ ಕಂಡುಬರುತ್ತದೆ.

ವೃತ್ತಕಂದ ಮೊದಲಾದ ಕನ್ನಡ ಪದ್ಯಗಳಲ್ಲಿ ಸಂಸ್ಕೃತದಲ್ಲಿಯಂತೆ ಪ್ರತಿ ಪಾದಕ್ಕೂ ವಾಕ್ಯವು ನಿಲುಗಡೆಯಾಗದೆ ಮುಂದುವರಿಯುತ್ತದೆ ; ಕನ್ನಡದಲ್ಲಿ ರೂಢಿಗೆ ಬಂದ ಆದಿಪ್ರಾಸವು ಅಂತಹ ವಾಕ್ಯಗಳನ್ನು ಪಾದಾಂತ ಪಾದಾದಿಗಳ ನಡುವೆ ಖಂಡಿಸುವುದರಿಂದ, ಆದಿಪ್ರಾಸವನ್ನೆ ಖಂಡಪ್ರಾಸವೆಂದು ಮಾರ್ಗಕಾರನು ಕರೆದಿರುವಂತೆ ನಮಗೆ ತೋರುತ್ತದೆ. ಆದರೆ, ಈ ವಿಚಾರದಲ್ಲಿ ಮುಳಿಯ ತಿಮ್ಮಪ್ಪನವರ ಅಭಿಪ್ರಾಯ ಸ್ವಲ್ಪ ಬೇರೆಯಾಗಿದೆ.[೭]

ಪದ್ಯ ೭೬ : ಕವಿಪ್ರಯೋಗದಲ್ಲಿ ಬಂಧುರವಾಗಿ ಕೈಗೂಡಿ ಬಂದರೆ ಖಂಡಪ್ರಾಸವು ಮಂದಗಮನೆಯಾದ ಚೆಲುವೆಯ ನಡೆಯಂತೆ ಅತ್ಯತಿಶಯವಾಗಿ ಸೊಗಸುವುದು.

ಪದ್ಯ ೭೭ : ''ಅದು ಹೇಗಿದ್ದರೂ, ಕೂಡಿದ ಮಟ್ಟಿಗೂ ಮೊದಲು ಆರ್ಯಾವೃತ್ತದಲ್ಲಿಯೂ ಕಂದದಲ್ಲಿಯೂ ಉದಾಸೀನ ಮಾಡದೆ ಯತಿಯನ್ನು ಹೇಳಬೇಕು; ಚತುಷ್ಪದಿಗಳಾದ ಈ ಪದ್ಯ ಪಾದಗಳಲ್ಲಿ ಎರಡನೆಯ ಪಾದದಲ್ಲಿ ಯತಿ ಸಲ್ಲುತ್ತದೆ'' ಎಂದು ಮಾರ್ಗಕಾರನು ಆರ್ಯೆಗೂ ಕಂದಪದ್ಯಕ್ಕೂ (ಖಂಡಪ್ರಾಸದ ಜೊತೆಗೆ) ಯತಿಯನ್ನು ವಿಧಿಸಿದ್ದಾನೆ. (ಆರ್ಯೆ ಕನ್ನಡದಲ್ಲಿ ಬಳಕೆಗೆ ಬರಲಿಲ್ಲ. ಆದ್ದರಿಂದಲೇ

---

೭. ಮುಂದೆ ಕವಿರಾಜಮಾರ್ಗಕಾರನು ವಿವರಿಸುವ ಆರು ಬಗೆಯ ಪ್ರಾಸಗಳಲ್ಲಿ ಆದಿಪ್ರಾಸಗಳಾದ ಪ್ರಾಸ, ಶಾಂತ, ವರ್ಗ ಇವು ಒಂದು ಖಂಡವೆಂದೂ, ಉಳಿದ ಮೂರು ಇನ್ನೊಂದು ಖಂಡವೆಂದೂ, ಎರಡನೆಯ ಕಂಡದ ಪ್ರಾಸಗಳು ಪ್ರಾಸಾಭಾಸಗಳಾದ್ದರಿಂದ ''ಖಂಡಪ್ರಾಸ ಎಂದರೆ ಕನ್ನಡ ನಾಡುಗಳೊಳಗೆಲ್ಲ ದೇಸಿಯಾಗಿ ಏಕರೀತಿಯಲ್ಲಿ ನೆಲೆಗೊಂಡ ಆದಿಖಂಡದ ಪ್ರಾಸಗಳು ಎಂದು ಭಾವಿಸಬೇಕು'' ಎಂದು ಮುಳಿಯ ತಿಮ್ಮಪ್ಪಯ್ಯನವರು ವಿವರಿಸಿದ್ದಾರೆ. (ಕ.ರಾ.ವಿವೇಕ – ಭಾಗ ೨)

ಹುಟ್ಟಿದ ಕಂದ ಪದ್ಯ ಕನ್ನಡದಲ್ಲಿ ವಿಶೇಷ ಪ್ರಾಚುರ್ಯಕ್ಕೆ ಬಂದಿತು. ಮೊನ್ನೆ ಮೊನ್ನೆಯವರೆಗೂ ಕಂದ ಪದ್ಯದ ಕವಿಗಳು ಅದರ ರಚನೆಯಲ್ಲಿ ಯತಿ ನಿಯಮವನ್ನು ಪಾಲಿಸಿಕೊಂಡು ಬಂದಿದ್ದಾರೆ. ಮಾರ್ಗಕಾರನ ಕಟ್ಟಳೆಗೆ ಇಂದಿಗೂ ಮನ್ನಣೆಯುಂಟು).

ಪದ್ಯ ೭೮–೮೦ : **ಅರ್ಥಶೂನ್ಯ :** ಪದ್ಯದ ಸಮುದಾಯಾರ್ಥವನ್ನು ಎಂದರೆ ಒಟ್ಟಿನ ಅರ್ಥವನ್ನು ಕುರಿತು ವಿಚಾರ ಮಾಡಿದಾಗ ತೋರಬೇಕಾದ ಅರ್ಥ ಪ್ರತೀತಿಯೆಲ್ಲವೂ ತೋರದೆ ಹೋದರೆ 'ಅರ್ಥಶೂನ್ಯ' ದೋಷ. ಈ ದೋಷಕ್ಕೆ ಕೊಟ್ಟಿರುವ ಲಕ್ಷ್ಯ ಪದ್ಯದಲ್ಲಿ (ಪ.೭೯), ಅಂತರ್ಗತವಾದ ಪ್ರತಿವಾಕ್ಯಕ್ಕೂ ಅರ್ಥವಾದರೂ ಒಟ್ಟು ಪದ್ಯದ ಅರ್ಥ ಏನೆಂಬುದು ಬೋಧೆಯಾಗುವುದಿಲ್ಲ. ಆದ್ದರಿಂದ "ಇಂಥ ಅರ್ಥಶೂನ್ಯ ವಾಕ್ಯಸಮುದಾಯ ದುರುಕ್ತ (ಹೇಳತಕ್ಕದ್ದಲ್ಲ). ಹೇಳಿದರೆ, ಇಂಥದನ್ನು ಹುಚ್ಚನೂ ಹೆಂಡ ಕುಡಿದು ಮೈಮರೆತವನೂ ಹೇಳಿಯಾನು. ಬಲ್ಲವನು ಯಾವನು ತಾನೆ ಹೇಳುತ್ತಾನೆ" (ಪ.೮೦) ('ಕಾವ್ಯಾಲಂಕಾರ'ದಲ್ಲಿ ಇದು 'ಅಪಾರ್ಥಕ'.)

ಪದ್ಯ ೮೧–೮೩ : **ವಿರುದ್ಧಾರ್ಥ :** ಒಂದು ವಾಕ್ಯದಲ್ಲಿ ಉಕ್ತವಾದ ಪೂರ್ವಾರ್ಧದ ಅರ್ಥಕ್ಕೂ ಅಪರಾರ್ಧದ ಅರ್ಥಕ್ಕೂ ಹೊಂದಿಕೆಯಾಗದೆ ವಿರೋಧವು ಕಂಡುಬಂದರೆ, ಅದು ವಿರುದ್ಧಾರ್ಥ. "ನರಶ್ರೇಷ್ಠನೇ, ಶತ್ರುರಾಜರ ಸೈನ್ಯವನ್ನು ಗೆದ್ದು ಪರಾಕ್ರಮದಿಂದ ಶೌರ್ಯವನ್ನು ಪ್ರಕಟಿಸು ; ಯಾವಾಗಲೂ ಪರಹಿತವನ್ನು ನಡಸುವುದರಲ್ಲಿಯೆ ಆಸಕ್ತನಾದ ನಿನಗೆ ಶತ್ರುಗಳೂ ಇದ್ದಾರೆಯೇನು ?' (ಪ.೮೨). ಇಲ್ಲಿನ ಪೂರ್ವಾಪರ ವಿರುದ್ಧಾರ್ಥವು ಸ್ಪಷ್ಟ. ಇದು ಕೇವಲ ಉದಾಹರಣ, ಇಂಥವನ್ನು ವಿದ್ವಾಂಸರು ಕಾವ್ಯದಲ್ಲಿ ಬಾರದಂತೆ ಪರಿಹರಿಸಬೇಕು – ಎಂದು ಮಾರ್ಗಕಾರನು ಸೂಚಿಸಿದ್ದಾನೆ. (ಪ. ೮೩) ('ಕಾವ್ಯಾಲಂಕಾರ'ದಲ್ಲಿ ಇದಕ್ಕೆ 'ವ್ಯರ್ಥ' ಎಂದು ಹೆಸರು)

ಪದ್ಯ ೮೪–೮೫ : **ಪುನರುಕ್ತ :** ಮೊದಲು ಹೇಳಿದ ಪದದ ಅರ್ಥಕ್ಕೆ ಸ್ವಲ್ಪವಾದರೂ ವಿಶೇಷಾರ್ಥವನ್ನು ಸೇರಿಸದೆ ಅದೇ ಅರ್ಥವನ್ನು ಕೊಡುವ ಪದಗಳನ್ನು ಪ್ರಯೋಗಿಸುತ್ತಾ ಹೋಗುವುದು ಪುನರುಕ್ತದೋಷ. 'ತ್ರಿದಶ ಸುರಲೋಕವಾಸಾಸ್ಪದ', 'ಮನುಷ್ಯ–ಮನುಜಂ', 'ಯುಗ–ದ್ವಯಂ', 'ಅಟ್ಟಿಯೆ–ಮುದದೆ', 'ಬಗೆದು–ನೆನೆವಂ', 'ಅನುದಿನಂ–ಎಂದುಂ', ಈ ಏಕಾರ್ಥಕ ಪದಗಳ ಪುನರುಕ್ತಿಯನ್ನು ಲಕ್ಷ್ಯಪದ್ಯದಲ್ಲಿ (೮೫)

ಗಮನಿಸಬಹುದು. (ಭಾಮಹನು ಇದನ್ನು 'ಏಕಾರ್ಥ'ವೆಂದು ಹೆಸರಿಸಿದ್ದಾನೆ. ಮಾರ್ಗಕಾನು ದಂಡಿಯ ಶ್ಲೋಕವನ್ನೇ ಹೆಚ್ಚಾಗಿ ಅನುಸರಿಸಿದ್ದಾನೆ) ದಂಡಿಯ ಶ್ಲೋಕ:

"ಅವಿಶೇಷೇಣ ಪೂರ್ವೋಕ್ತಂ ಯದಿ ಭೂಯೋಽಪಿ ಕೀರ್ತ್ಯತೇ ।
ಅರ್ಥತಃ ಶಬ್ಧತೋ ವಾಪಿ ತದೇಕಾರ್ಥಂ ಮತಂ ಯಥಾ ॥

ಪದ್ಯ ೮೬–೮೯ : **ಚ್ಯುತ ಯಾಥಾಸಂಖ್ಯ :** ಯಾಥಾಸಂಖ್ಯಾ ಎಂದರೆ ಕ್ರಮ, ಯಾಥಾಸಂಖ್ಯಾ ಎಂದರೇನೆಂಬುದನ್ನು ಮೊದಲು ವಿವರಿಸಿದೆ (ಪ. ೮೬) : "ನಿಯತವಾದ ಉದ್ದೇಶಿಯನ್ನೂ ಅನುದೇಶಿಯನ್ನೂ ಅನುವಾಗಿ ಹೇಳಿದರೆ ಯಥಾಸಂಖ್ಯ." ಉದ್ದಿಷ್ಟವಾದ ಕ್ರಮದಲ್ಲಿ ಅರ್ಥಗಳನ್ನುಳ್ಳ ಪದವರ್ಗ ಉದ್ದೇಶಿ ; ಅರ್ಥಾನುಗುಣವಾಗಿ ಅದೇ ಕ್ರಮಸಂಖ್ಯೆಯನ್ನು ಅನುಸರಿಸಿ ಬರುವ ಪದವರ್ಗ ಅನುದೇಶಿ. ಉದ್ದೇಶಿ ಅನುದೇಶಿಗಳ ಕ್ರಮಾನುಸರಣೆ ಯಥಾಸಂಖ್ಯ ; ಆ ಕ್ರಮ ತಪ್ಪಿದರೆ, ಕ್ರಮ ಚ್ಯುತಿಯಾಗಿ, 'ಚ್ಯುತ ಯಾಥಾಸಂಖ್ಯ'ವೆಂಬ ದೋಷವಾಗುತ್ತದೆ.

೮೮ನೆಯ ಪದ್ಯ ಯಥಾಸಂಖ್ಯಕ್ಕೆ ಲಕ್ಷ್ಯ : ಅಳಕ, (ಮುಂಗುರುಳು), ಆನನ (ಮುಖ), ನಯನಗಳು (ಕಣ್ಣುಗಳು) – ಅಳಿ (ದುಂಬಿ), ನಳಿನ (ತಾವರೆ), ಉತ್ಪಳವಿಕಾಶ (ನೈದಿಲೆಯ ಕಾಂತಿ) – ಇವುಗಳಲ್ಲಿ 'ಉದ್ದೇಶಿ' ಉಪಮೇಯವಾದ ಮೊದಲ ಪದವರ್ಗ; ಉಪಮಾನವಾದ ಎರಡನೆಯ ಪದವರ್ಗ 'ಅನುದೇಶಿ', ಅಳಕ–ಅಳಿ, ಆನನ–ನಳಿನ, ನಯನ–ಉತ್ಪಲ– ಇವುಗಳ ಅರ್ಥಾನುಗುಣವಾದ ಕ್ರಮ ತಪ್ಪಿದರೆ ದೋಶ. ಆದರೆ, ದೋಷಕ್ಕೆ ಲಕ್ಷ್ಯವಾದ ೮೯ನೆಯ ಪದ್ಯದಲ್ಲಿ, ಈ ಕ್ರಮ ತಪ್ಪಿರುವಂತೆ ಕಂಡುಬರುವುದಿಲ್ಲ. 'ಉದ್ದೇಶಿ' 'ಅನುದೇಶಿ'ಗಳ ಕ್ರಮವು ಮಾತ್ರ ಹಿಂದುಮುಂದಾಗಿದೆ. (ಬಾಮಹ, ದಂಡಿ – ಇಬ್ಬರೂ ಈ ದೋಷವನ್ನು 'ಅಪಕ್ರಮ' ಎಂದು ನಿರ್ದೇಶಿಸಿದ್ದಾರೆ)

ಪದ್ಯ ೮೦–೯೧ : **ವ್ಯವಹಿತ :** "ಅರ್ಥವು ವಿಶೇಷ ಅಲಂಕಾರ ಸಹಿತವಾಗಿದ್ದರೂ, ಅರ್ಥಸಾಧಕಗಳಾದ ಪದಗಳು ಅಸ್ತವ್ಯಸ್ತವಾಗಿ ಅವುಗಳ 'ಸಮಾಹಿತ'ತ್ವಕ್ಕೆ (ಅನ್ಯೋನ್ಯ ಸಂಬಂಧಕ್ಕೆ) ಭಂಗವುಂಟಾದರೆ, ಅದು ವ್ಯವಹಿತ ದೋಷ."

ಲಕ್ಷ್ಯಪದ್ಯದಲ್ಲಿ – ಜಿನಾಧಿಪನಿಗೆ ಪಾಪನಿಚಯವುಂಟೆಂದೂ, ಅದರ ಸೇವನೆಯಿಂದ ಮುನಿಗಳು ತಮ್ಮ ಸಂಸ್ಕೃತಿಯನ್ನು ನೀಗಿಕೊಳ್ಳಲು ತೊಡಗಿದರೆಂದೂ ವಿಪರೀತಾರ್ಥ ಕಲ್ಪನೆಯುಂಟಾಗುತ್ತದೆ. ಸರಿಯಾದ

ಅರ್ಥಕಲ್ಪನೆಗಾಗಿ ಪದಗಳನ್ನು ಈ ರೀತಿ ಯೋಜನೆ ಮಾಡಬೇಕು : 'ಜಿನಾಧಿಪಾ! ನಿನ್ನ ಗುಣಂ ಮನದೆ ನೆನೆದವರ ಪಾಪನಿಚಯಂ ಕಿಡುಗುಂ; ಅದರಿಂ ಮುನಿಗಳುಂ ತತ್‌ಸೇವನೆಯಿಂದ ಸಂಸ್ಕೃತಿಯಂ ಕಿಡಿಪಲ್ಕೆ ಪತ್ತಿದರ್."

ಪದ್ಯ ೯೨–೯೩ : **ಛಂದೋ ಭಂಗ :** ಪದ್ಯರಚನೆಯಲ್ಲಿ ಗುರುಲಘುವಿನ್ಯಾಸಕ್ರಮದಲ್ಲಿ ಹೆಚ್ಚು ಕಡಮೆಗಳಾಗುವುದು ಛಂದೋಭಂಗ ದೋಷಕ್ಕೆ ಎಡೆಗೊಡುವುದು. (ಭಾಮಹ, ದಂಡಿ–ಇಬ್ಬರೂ ಈ ದೋಷವನ್ನು 'ಭಿನ್ನವೃತ್ತ' ಎಂದು ನಿರ್ದೇಶಿಸಿದ್ದಾರೆ)

ಲಕ್ಷ್ಯಪದ್ಯದಲ್ಲಿ (೯೩), ಮೊದಲ ಪಾದದಲ್ಲಿ ಒಂದು ಮಾತ್ರೆ ಕಡಮೆಯಾಗಿಯೂ, ಎರಡನೆಯ ಪಾದದಲ್ಲಿ ಒಂದು ಮಾತ್ರೆ ಅಧಿಕವಾಗಿಯೂ ಇವೆ. ಹೇಗೆಂದರೆ:

UUUU UUUU U –
ವನರುಹ । ದಳನಯ । ನೆ ನಿ ।
UUU U UUUU U UUU U UU U U– –
ನ್ನನೆ ನೆನೆ । ನೆನೆದಿರು । ಳೊಳಗೊರ । ಗ ದಿರೆ ಕ । ಡೆಗಣ್ಗಳ್

(ಪು. ೮೮ರಲ್ಲಿ ಅಚ್ಚಾಗಿರುವಂತೆ, ಗುರುಲಘುವಿನ್ಯಾಸ ಸರಿಯಾಗಿದೆ. ದೋಷವಿರಬೇಕಾದದ್ದರಿಂದ, '–ಳೊಳೊಱಗದಿರೆ' ಎಂದೆಂಬುದನ್ನು '–ಳೊಳಗೊಱಗದಿರೆ' ಎಂದು ಮದ್ರಾಸು ಮುದ್ರಣದಲ್ಲಿ ತಿದ್ದಿರುವಂತೆ ತಿದ್ದಿಕೊಳ್ಳಬೇಕು.)

UUUU UUUU U -
ವನರುಹ । ದಳನಯ । ನೆ ನಿ ।
UUU U UUUU UUUU UUUU – –
ನ್ನನೆ ನೆನೆ । ನೆನೆದಿರು । ಳೊಳೊರಗ । ದಿರೆಕಡೆ । ಗಣ್ಗಳ್

ಪದ್ಯ ೯೪–೯೬ : **ವಿಸಂಧಿ ದೋಷ :** ಪದಗಳನ್ನು ಕೂಡಿಸಿ (ಸಂಧಿ ಮಾಡಿ) ಹೇಳಿದರೆ ಛಂದಸ್ಸು ಕೆಡುವುದೆಂದು ತಿಳಿದು, ಸಂಧಿಯಾಗಬೇಕಾದ ಸ್ಥಳದಲ್ಲಿ ಸಂಧಿಯನ್ನು ಬಿಡಿಸಿಹೇಳಿದರೆ, ಅದು ವಿಸಂಧಿ ದೋಷ. ೯೬ನೆಯ ಲಕ್ಷ್ಯಪದ್ಯದ ಪೂರ್ವಾರ್ಧ ದೋಷಯುಕ್ತವಾಗಿರುವುದನ್ನೂ, ಉತ್ತರಾರ್ಧ ದೋಷರಹಿತವಾಗಿರುವುದನ್ನೂ (೯೭ನೆಯ ಪದ್ಯದಲ್ಲಿ) ಮಾರ್ಗಕಾರನು ನಿರ್ದೇಶಿಸಿದ್ದಾನೆ. 'ಜನಪತಿಗೆ ಒಸಗೆಯಂ ಪುರ–'

ಎಂಬ ಮೊದಲ ಪಾದದಲ್ಲಿ 'ಜನಪತಿಗೊಸಗೆಯಂ' ಎಂದು ಸಂಧಿಮಾಡಿ ಹೇಳಿದರೆ ಛಂದಸ್ಸು ಕೆಡುವುದೆಂದು, 'ಗೊ' ಎಂಬ ಅಕ್ಷರವನ್ನು 'ಗೆ + ಒ' ಎಂದು ಬಿಡಿಸಿದೆ. ಇದು ವಿಸಂಧಿ ದೋಷ.

ಪದ್ಯ ೯೮–೯೯ : ಕೆಲವೆಡೆಗಳಲ್ಲಿ ಸಂಧಿಗಳಾಗುವುದೂ ಕವಿತೆಗೆ ಕುಂದುತರುತ್ತದೆ. ಇವು ವಿರೂಪ ಸಂಧಿಗಳು. ಲಕ್ಷ್ಯಪದ್ಯದಲ್ಲಿ (೯೯) 'ಅರಂ' ಎಂಬ ಅವ್ಯಯವು ಅರಸಂ, ಅರಮನೆ, ಉದ್ಯಾನ, ಅಂತಃಪುರ – ಈ ಪದಗಳೊಂದಿಗೆ ಸಂಧಿಯಾಗಿ, 'ಮರಸಂ', 'ಮರಮನೆ', 'ಮುದ್ಯಾನ', 'ಮಂತಃಪುರ', ಎಂಬ ವಿರೂಪಗಳು ಕಿವಿಗೆ ಬೀಳುವಂತಾಗಿ, ಕವಿತಾಬಂಧ ಶ್ರುತಿಕಷ್ಟವೆನಿಸಿದೆ.

ಪದ್ಯ ೧೦೦ : ಇಂಥ ಸಂಧಿದೋಷಗಳುಂಟಾದರೆ, ವಿದ್ವತ್ಸಭೆಯಲ್ಲಿ ಕೃತಿವಧುವನ್ನು ನಿಂದಿಸುತ್ತಾರೆ. ಆದ್ದರಿಂದ, ಭಾಷಾವಿದರು ಅವನ್ನು ಬಿಡಬೇಕು.

ಪದ್ಯ ೧೦೧ : **ನೇಯಾರ್ಥ** : ವಿವಕ್ಷಿತವಾದ ಅರ್ಥವೆಲ್ಲವೂ ಪ್ರಯೋಗಿಸಿದ ಪದದಿಂದ ಪ್ರತೀತವಾಗದೆ, ಅರ್ಥವಿವಕ್ಷೆಗಾಗಿ ಬಲ್ಲವರು ಅಲ್ಲಿಲ್ಲದ ಬೇರೊಂದು ಪದವನ್ನು (ಅಧ್ಯಾಹಾರಮಾಡಿಕೊಂಡು) ಇಟ್ಟು ಅರ್ಥವಾಗುವಂತೆ ಹೇಳಿದರೆ ಅದು 'ನೇಯಾರ್ಥ'.

ಪದ್ಯ ೧೦೨ : **ನೇಯಾರ್ಥದೋಷಕ್ಕೆ ಲಕ್ಷ್ಯ** : "ಗಗನವಿವರವು ತನ್ನಲ್ಲಿ ಎಡೆಬಿಡದೆ ಕೆಂಬಣ್ಣವು (ರಾಗ) ಹರಡಿರಲು, ಅದು ಪಾರಿಜಾತ ಪುಷ್ಪಗಳ ದಟ್ಟವಾದ ಪರಾಗಧೂಳಿಯ ಪ್ರಸಾರದಿಂದ ಕೆಂಪಾಗಿರುವ ಹಾಗೆ ಒಪ್ಪುತ್ತಿತ್ತು."
ಆಕಾಶದಲ್ಲಿ ಎಲ್ಲೆಲ್ಲಿಯೂ ಕೆಂಬಣ್ಣ ಹರಡಿರಲು ಕಾಣರವೇನು?
ಬಿರುಗಾಳಿ ಬೀಸಿ, ತತ್ಪರಿಣಾಮವಾಗಿ ಮೇಲಕ್ಕೆದ್ದ ಕೆಂದೂಳಿಯಿಂದ ಕೆಂಪಾಗಿರಬಹುದೆಂಬ ಸಂದೇಹವು ಯಾರಿಗಾದರೂ ಮೊದಲು ಹುಟ್ಟಬಹುದು. "ಪರೆದಿರೆ ಸಂಧ್ಯಾರಾಗಂ ನಿರಂತರಂ ಗಗನವಿವರ ಮೊಪ್ಪಿತ್ತು" (ಪ.೧೦೩) ಎಂದು ಸ್ಪಷ್ಟವಾಗಿ ಹೇಳದಿದ್ದುದರಿಂದ, ಈ ಬಗೆಯ ಸಂದೇಹಕ್ಕೆ ಅವಕಾಶವಾಗುವುದು, ಇಲ್ಲವೆ, 'ಸಂಧ್ಯಾರಾಗ'ದಿಂದ ಎಂದು ಊಹಿಸಿಕೊಳ್ಳಬೇಕು. ಹೇಗೂ, 'ಸಂಧ್ಯಾ'ಪದವನ್ನು ಇಡದೆ ಹೇಳಿದುದು ಇಲ್ಲಿ ದೋಷವೆನಿಸಿದೆ.

(ಕೇಶಿರಾಜನು ಕಾರಕಕ್ಕೂ ಕ್ರಿಯೆಗೂ ಅಧ್ಯಾರೋಪವು[೮] ಶ್ರೇಷ್ಠವಾಗಿರುವುದೆಂದು ಹೇಳಿ, ಅದು ಹೊಂದಿಕೆಯಾಗದಿರುರರಾಗ ನೇಯದ ದೋಷವು ಸಂಭವಿಸುವುದೆಂದು ತಿಳಿಸುತ್ತಾನೆ. ನೇಯಕ್ಕೆ ಅವನು ಕೊಡುವ ಉದಾಹರಣೆ ಬಹುಮಟ್ಟಿಗೆ ಕ.ರಾ.ಮಾರ್ಗದ ಲಕ್ಷ್ಯಪದ್ಯವನ್ನೇ ಹೋಲುತ್ತದೆ:

"ಆರಕ್ತಮಾಗಿ ನೇಜೆಲ
ದೋರೆಯನನುಕರಿಪುದಾದುದಾಗಸಮೆನೆ ಸಂ
ಧ್ಯಾರುಚಿಯಿನಕ್ಕುಮೆಂದವ
ಧಾರಿಸಿ ನೆಱೆಯಱಿದುಕೊಳ್ವುದಿದು ನೇಯಾರ್ಥಂ"

"ಸಂಧ್ಯಾರುಚಿಯಿನೆಂದು ಬಗೆವುದು ನೇಯೆಂ, ಕೆಂಧೂಳಿಯಿಂದಾಗಸಂ ಕೆಂಪಾದುದಾಗಿ"

ಇಲ್ಲಿ, 'ಕೆಂಧೂಳಿಯಿಂದ' ಎಂದು ಹೇಳದೆ ಇರುವುದರಿಂದ 'ಸಂಧ್ಯಾ ರುಚಿಯಿಂದ' ಎಂದು ತಿಳಿದರೆ ನೇಯವಾಗುತ್ತದೆ)

ಪದ್ಯ ೧೦೪–೧೧೦ : ಈ ಪದ್ಯಗಳಲ್ಲಿ ಮಾರ್ಗಕಾರನು ಆಗಮ – ಸಮಯ – ನ್ಯಾಯ – ಕಳಾ – ಕಾಲ – ಲೋಕ – ದೇಶ ವಿರುದ್ಧಗಳಾದ ದೋಷಗಳ ಲಕ್ಷಣಗಳನ್ನು ಮಾತ್ರವೇ ಸೂಚಿಸಿದ್ದಾನೆ; ಅವುಗಳ ಲಕ್ಷ್ಯಗಳನ್ನು ಕೊಟ್ಟಿಲ್ಲ.

**ಆಗಮ ವಿರುದ್ಧ :** "ರಾಗಾದಿ ದೋಷರಹಿತವಾಗಿರುವುದೂ, ಅನಿಲ ವಸ್ತುಗಳ ಪರಿಜ್ಞಾನವೂ ಯೋಗಿಗುಣ : ಇದನ್ನು ಅನುಸರಿಸಿರತಕ್ಕದ್ದೇ ಆಗಮ. ಎಂದರೆ ಯೋಗಿಗಳಿಂದ ಪ್ರೋಕ್ತವಾಗಿ ಆಚರಿಸಲ್ಪಟ್ಟಿರುವುದೇ ಆಗಮ. ಇದಕ್ಕೆ ವಿರುದ್ಧವಾದ ವಚನವು ದೋಷ". ಬಾಮಹ, ದಂಡಿ – ಇವರ ಉಕ್ತಿಗಳನ್ನು ಇದರೊಂದಿಗೆ ಹೋಲಿಸಿದರೆ, ಮಾರ್ಗಕಾರನು ಆಗಮ ಎಂದರೆ ಜೈನಾಗಮ ಎಂದೇ ಕುರಿತಿರುವಂತೆ ಭಾಸವಾಗುತ್ತದೆ.

ಶ್ರುತಿಸ್ಸ್ಮೃತಿರಾಗಮಃ – ದಂಡಿ

"ಆಗಮೋ ಧರ್ಮಶಾಸ್ತ್ರಾಣಿ ಲೋಕಸೀಮಾ ಚ ತತ್ಕೃತಾ ।

---

೮. ಕಿಟ್ಟೆಲರವರು 'ಅಧ್ಯಾರೋಪ'ಕ್ಕೂ 'ಅಧ್ಯಾಹಾರ'ಕ್ಕೂ ವ್ಯತ್ಯಾಸವನ್ನು ಸೂಚಿಸಿದ್ದಾರೆ. 'ಅಧ್ಯಾರೋಪ' ಎಂದರೆ 'attributing or assining (ಆರೋಪಿಸುವುದು) ; 'ಅಧ್ಯಾಹಾರ' ಎಂದರೆ Supplying (ಭರತಿಮಾಡುವುದು). 'ನೇಯ' ಎಂದರೆ logical inference (ಅನುಮಾನ) Gr. K.L. ಪು. ೪೧೨–೪೧೩

ತದ್ವಿರೋಧಿ ತದಾಚಾರವ್ಯತಿಕ್ರಮಣತೋ ಯಥಾ ॥"

– ಕಾವ್ಯಾಲಂಕಾರ iv–೪೭

(ಲೋಕವ್ಯವಹಾರದ ಕಟ್ಟುಕಟ್ಟಳೆಗಳಿಗೆ ಮೂಲಭೂತವಾದ ಧರ್ಮಶಾಸ್ತ್ರಗಳೇ ಆಗಮ. ಅವುಗಳಲ್ಲಿ ಹೇಳಿರುವ ಆಚಾರವನ್ನು ಉಲ್ಲಂಘಿಸುವುದು ಆಗಮವಿರೋಧಿ)

ಸಮಯವಿರುದ್ಧ : "ಪ್ರಸಿದ್ಧರಾದ ಕಪಿಲ, ಸುಗತ, ಕಣಚರ, ಲೋಕಾಯತಿಕ ಮುಂತಾದವರ ದರ್ಶನ ಸಿದ್ಧಾಂತಗಳ ಮಾರ್ಗಭೇದಗಳೇ ಬೇರೆ ಬೇರೆ ಸಮಯಗಳು. ಅವುಗಳನ್ನು 'ವಿರುದ್ಧವಿವೇಕದಿಂದ' ಎಂದರೆ ತಪ್ಪು ತಿಳಿವಳಿಕೆಯಿಂದ ತಿಳಿಸುವುದು ಸಮಯವಿರುದ್ಧ ದೋಷ. ಕಪಿಲ = ಸಾಂಖ್ಯದರ್ಶನಕಾರ ; ಸುಗತ = ಗೌತಮಬುದ್ಧ ; ಕಣಚರ = ವೈಶೇಷಿಕ ಸಿದ್ಧಾಂತದ ಪ್ರವರ್ತಕ (ಕಣಾದ, ಕಣಭಕ್ಷ ಇವು ಈತನ ಇತರ ಹೆಸರುಗಳು) ; ಲೋಕಾಯತಿಕ = ಚಾರ್ವಾಕನು ಬೋಧಿಸಿದ ಚಾರ್ವಾಕ (ನಾಸ್ತಿಕ) ವಾದವೆ ಲೋಕಾಯತ ; ಇದರ ಅನುಯಾಯಿ ಲೋಕಾಯತಿಕ.

**ನ್ಯಾಯವಿರುದ್ಧ :** ಉಕ್ತ ಎಂದರೆ ಹೇಳಿದ ವಿಚಾರಗಳೆಲ್ಲವೂ ನ್ಯಾಯಶಾಸ್ತ್ರದ ಪ್ರಮಾಣಗಳಿಗೆ ಸಮ್ಮತವಾಗಿರಬೇಕು. ಈ ಪ್ರಮಾಣಗಳು ನಾಲ್ಕು : ಪ್ರತ್ಯಕ್ಷ, ಅನುಮಾನ, ಉಪಮಾನ ಮತ್ತು ಶಬ್ದ. ನ್ಯಾಯವಿರುದ್ಧವನ್ನು ಮಾರ್ಗಕಾರನು 'ಮಹಾದೋಷ'ವೆಂದು ಕರೆದಿದ್ದಾನೆ.

**ಕಲಾವಿರುದ್ಧ :** "ನಿರುಪಮವಾದ ಗಂಧರ್ವಗತಿ ಸ್ವರಾದಿಕ ಎಂದರೆ ಗಾಂಧರ್ವ ವಿದ್ಯೆಯೆಂದು ಪ್ರಸಿದ್ಧವಾದ ನೃತ್ತ ಗೀತ ಚಿತ್ರ ಶಿಲ್ಪವೇ ಮುಂತಾಗಿ ಕಲೆಗಳು ಚತುಷ್ಷಷ್ಟಿ ವಿಧಗಳು. ಇವು ಎಲ್ಲಿ ದೊರೆಕೊಳ್ಳದೋ ಅಲ್ಲಿ ಕಲಾವಿರುದ್ಧದೋಷವು ಸಂಘಟಿಸುವುದು. ಜನರೆಲ್ಲ ಇದನ್ನು ನಿಂದಿಸುವರು".

"ಕಲಾ ಸಂಕಲನಾಪ್ರಜ್ಞಾ ಶಿಲ್ಪಾನ್ಯಸ್ಯಾಶ್ಚ ಗೋಚರಃ ।
ವಿಪರ್ಯಸ್ತಂ ತದ್ಯೈವಾಹುಸ್ತದ್ವಿರೋಧಕರ ಯಥಾ ॥"

– ಭಾಮಹ iv–೩೨

(ಬಿಡಿಬಿಡಿಯಾದ ಅಂಶಗಳನ್ನೆಲ್ಲಾ ಚೆನ್ನಾಗಿ ಒಂದೆಡೆ ಕೂಡಹಾಕುವುದೇ ಕಲೆ. ಇತರರಿಗೆ ಗೋಚರವಾಗುವುದು ಶಿಲ್ಪ. ಇವಕ್ಕೆ ವಿರುದ್ಧವಾಗಿ ಹೇಳುವುದು ಕಲಾವಿರುದ್ಧ ದೋಷ)

"ನೃತ್ಯಗೀತ ಪ್ರಭೃತಯಃ ಕಲಾಃ ಕಾಮಾರ್ಥ ಸಂಶ್ರಯಾಃ" – ದಂಡಿ, iv–೪೦

(ಕಾಮಾರ್ಥಗಳನ್ನು ಆಶ್ರಯಿಸಿರುವ ನೃತ್ಯಗೀತಾದಿಗಳೆ ಕಲೆಗಳು)[೯]

**ಕಾಲವಿರುದ್ಧ :** "ಕಾಲ ಎಂದರೆ ಹಗಲು ಇರುಳು ಮುಂತಾದ ಕಾಲ ವಿಭಾಗಗಳು. ಇದಕ್ಕೆ ಹೊಂದದಿದ್ದರೆ ಕಾಲವಿರುದ್ಧ ದೋಷಕ್ಕೆ ಅವಕಾಶವಾಗುತ್ತದೆ."

(ಭಾಮಹನು 'ಷಣ್ಣಾಂ ಋತೂನಾಂ ಭೇದೇನ ಕಾಲಃ ಷೋಢೇವ ಭಿದ್ಯತೇ" ಎಂದು ಕಾಲವನ್ನು ಆರು ಋತುಗಳಾಗಿ ಆರು ಭಾಗಗಳಾಗಿ ಮಾಡಿದೆ ಎನ್ನುತ್ತಾನೆ. ಮಾರ್ಗಕಾರನು ದಂಡಿಯ ಉಕ್ತಿಯನ್ನು ('ಕಾಲೋರಾತ್ರಿಂದಿವಃ') ಅನುಸರಿಸಿದ್ದಾನೆ. 'ಅಹೋರಾತ್ರಾದಿಕಂ' ಎಂದಿರುವುದರಿಂದ ಪಕ್ಷ ಋತು ಮುಂತಾದ ವಿಭಾಗಗಳೂ

---

೯. ಶೈವತಂತ್ರದಲ್ಲಿ ಉಕ್ತವಾದ ಚತುಃಷಷ್ಟಿಕಲಾ (ಒಂದೆರಡು ಮಾರ್ಪಾಡುಗಳೊಂದಿಗೆ ಶ್ರೀಭಾಗವತ ಟೀಕೆಯಲ್ಲಿ ಶ್ರೀಧರಸ್ವಾಮಿಯೂ ಇದನ್ನೆ ಹೇಳಿರುವನು) :–
೧. ಗೀತಂ, ೨. ವಾದ್ಯಂ, ೩. ನೃತ್ಯಂ, ೪. ನಾಟ್ಯಂ, ೫. ಅಲೇಖ್ಯಂ, ೬. ವಿಶೇಷಕಚ್ಛೇದ್ಯಂ, ೭. ತಂಡುಲಕುಸುಮ ಬಲಿವಿಕಾರಾಃ, ೮. ಪುಷ್ಪಾಸ್ತರಣಂ, ೯. ದಶನವಸನಾಂಗರಾಗಾಃ, ೧೦. ಮಣಿಭೂಮಿಕಾ ಕರ್ಮ, ೧೧. ಶಯನರಚನಂ, ೧೨.ರ ಉದಕವಾದ್ಯಂ, ೧೩. ಉದಕಪಾತಃ ೧೪. ಚಿತ್ರಾಯೋಗಾಃ, ೧೫. ಮಾಲ್ಯಗ್ರಥನ ವಿಕಲ್ಪಾಃ, ೧೬. ಶೇಖರಾಪೀಡಯೋಜನಂ, ೧೭. ನೇಪಥ್ಯಯೋಗಾಃ, ೧೮. ಕರ್ಣಪತ್ರಭಂಗಾಃ, ೧೯. ಗಂಧಯುಕ್ತಿಃ, ೨೦. ಭೂಷಣಯೋಜನಂ, ೨೧. ಐಂದ್ರಜಾಲಂ, ೨೨. ಕಾಚುಮಾರಯೋಗಾಃ, ೧೯. ಹಸ್ತಲಾಘವಂ, ೨೪. ಚಿತ್ರಶಾಕಾಪೂಪ ಭಕ್ಷ್ಯವಿಕಾರಕ್ರಿಯಾಃ, ೨೫. ಪಾನಕರಸರಾಗಾಸವ ಯೋಜನಂ, ೨೬. ಸೂಚಿವಾಸಕರ್ಮಾಣಿ, ೨೭. ಸೂತ್ರಕ್ರೀಡಾ, (ಪಾಠಾಂತರ : ೨೬. ಸೂಚೀವಾಪ–ಸೂತ್ರಕ್ರೀಡಾ–ಕರ್ಮಣಿ ೨೭. ವೀಣಾಡಮರುಕ ವಾದ್ಯಾನಿ), ೨೮. ಪ್ರಹೇಲಿಕಾ, ೨೯. ಪ್ರತಿಮಾಲಾ, ೩೦. ದುರ್ವ್ವಚಕಯೋಗಾಃ, ೩೧. ಪುಸ್ತಕ ವಾಚನಂ, ೩೨. ನಾಟಕಾಖ್ಯಾಯಿಕಾ ದರ್ಶನಂ, ೩೩. ಕಾವ್ಯಸಮಸ್ಯಾಪೂರಣಂ, ೩೪. ಪಟ್ಟಿಕಾನೇತ್ರ ಬಾಣವಿಕಲ್ಪಾಃ, ೩೫. ತರ್ಕುಕರ್ಮಾಣಿ, ೩೬. ತಕ್ಷಣಂ, ೩೭. ವಾಸ್ತುವಿದ್ಯಾ, ೩೮. ರೂಪರತ್ನ ಪರೀಕ್ಷಾ, ೩೯. ಧಾತುವಾದಃ, ೪೦. ಮಣಿರಾಗ ಜ್ಞಾನಂ, ೪೧. ಆಕಾರಜ್ಞಾನಂ, ೪೨. ವೃಕ್ಷಾಯುರ್ವೇದ ಯೋಗಾಃ, ೪೩. ಮೇಷಕುಕ್ಕಟ, ಲಾವಕರಯುದ್ಧವಿಧಿಃ, ೪೪. ಶುಕಶಾರಿಕಾಪ್ರಲಾಪನಂ, ೪೫. ಉತ್ಸಾದನಂ, ೪೬. ಕೇಶಮಾರ್ಜನ ಕೌಶಲಂ, ೪೭. ಅಕ್ಷರಮುಷ್ಟಿಕಾಕಥನಂ, ೪೮. ಮ್ಲೇಚ್ಛಿತಕ ವಿಕಲ್ಪಾಃ, ೪೯. ದೇಶಭಾಷಾಜ್ಞಾನಂ, ೫೦. ಪುಷ್ಪಶಕಟಿಕಾನಿಮಿತ್ತಜ್ಞಾನಂ, ೫೧. ಯಂತ್ರಮಾತೃಕಾ, ೫೨. ಧಾರಣಮಾತೃಕಾ, ೫೩. ಸಂಪಾಠ್ಯಂ, ೫೪. ಮಾನಸೀಕಾವ್ಯಕ್ರಿಯಾ, ೫೫. ಕ್ರಿಯಾವಿಕಲ್ಪಾಃ, ೫೬. ಛಲಿತಕಯೋಗಾಃ, ೫೭. ಅಭಿಧಾನ, ಕೋಶಛಂದೋಜ್ಞಾನಂ, ೫೮. ವಸ್ತ್ರಗೋಪನಾನಿ, ೫೯. ದ್ಯೂತವಿಶೇಷಃ, ೬೦. ಆಕರ್ಷಕ್ರೀಡಾ, ೬೧. ಬಾಲಕಕ್ರೀಡನಕಾನಿ, ೬೨. ವೈನಾಯಿಕೀನಾಂ ವಿದ್ಯಾನಾಂ ಜ್ಞಾನಂ, ೬೩. ವೈಜಯಿಕೀನಾಂ ವಿದ್ಯಾನಾಂ ಜ್ಞಾನಂ, ೬೪. ವೈತಾಲಿಕೀನಾಂ ವಿದ್ಯಾನಾಂ ಜ್ಞಾನಂ. (ಪಾಠಾಂತರ : ವೈಯಾಪಿಕೀನಾಂ ವಿದ್ಯಾನಾಂ ಜ್ಞಾನಂ) ('ಚೌರ್ಯ' ವೂ ೬೪ ಕಲೆಗಳಲ್ಲಿ ಒಂದೆಂದು ಪ್ರಸಿದ್ಧವಾಗಿದೆ. ಮೇಲಿನ ಪಟ್ಟಿಯಲ್ಲಿ ಇದು ಸೇರಿಲ್ಲ. ಬೇರೆ ಬೇರೆ ಆಕರಗಳಲ್ಲಿ ಕೆಲಕೆಲವು ಮಾರ್ಪಾಟುಗಳುಳ್ಳ ಬೇರೆ ಬೇರೆ ಪಟ್ಟಿಗಳು ದೊರಕಬಹುದು. 'ಶಬ್ಧಕಲ್ಪದ್ರುಮ'ದಿಂದ ಮೇಲ್ಕಂಡ ಪಟ್ಟಿಯನ್ನು ಸಂಗ್ರಹಿಸಿಕೊಟ್ಟವರು ಮಿತ್ರರಾದ ಶ್ರೀ ಎಂ.ಕೆ. ಭಾರತೀ ರಮಣಾಚಾರ್, ಎಂ.ಎ. ಅವರು. ಅವರಿಗೆ ನಾವು ಋಣಿಗಳು ಸಂ.)

ಸೂಚಿತವಾಗಿವೆ ಎಂದು ಭಾವಿಸಬಹುದು. ಭಾಮಹನು ಕೊಟ್ಟಿರುವ ಲಕ್ಷ್ಯದಂತೆ, 'ಕಾಡಿನಲ್ಲಿ ಹೂತ ಮಾವಿನಮರಗಳು ಮಳೆಯಿಂದ ತೊಯ್ದ ಗಾಳಿಯನ್ನು ಸುಗಂಧಿತವನ್ನಾಗಿ ಮಾಡಿದುವು' ಎಂದರೆ ಕಾಲ ವಿರೋಧಿಯಾಗುತ್ತದೆ. ಏಕೆಂದರೆ, ಮಳೆಗಾಲದಲ್ಲಿ ಮಾವು ಹೂ ಬಿಡುವುದಿಲ್ಲ)

**ಲೋಕವಿರುದ್ಧ :** ಲೋಕಗಳು ಮೂರು ; ಊರ್ಧ್ವಲೋಕ, ಅಧೋಲೋಕ, ಮಧ್ಯಲೋಕ. ಇವು ವೈದಿಕ ಪುರಾಣೋಕ್ತಗಳಾದ ಸ್ವರ್ಗ, ಪಾತಾಳ, ಮರ್ತ್ಯಗಳಾಗಬಹುದು ; ಇಲ್ಲವೆ ಸಿದ್ಧಾಂತದ ಊರ್ಧ್ವ, ಮಧ್ಯ, ಅಧೋಲೋಕಗಳಾಗಬಹುದು.

ಭಾಮಹನ ಪ್ರಕಾರ ಲೋಕವು ಸ್ಥಾವರ, ಜಂಗಮ ಎಂದು ಎರಡು ಬಗೆಯೆಂದಿದೆ. ದಂಡಿ, 'ಚರಾಚರಾಣಾಂ ಭೂತಾನಾಂ ಪ್ರವೃತ್ತಿರ್ಲೋಕ ಸಂಜ್ಞಿತಾ' ಎಂದು ನಿರ್ದೇಶಿಸಿದ್ದಾನೆ. ಇವರಿಬ್ಬರ ಅಭಿಮತದಂತೆ, ಸ್ಥಾವರ–ಜಂಗಮ ಲೋಕದ ವ್ಯವಹಾರವೇ 'ಲೋಕ'. ಜೈನಪುರಾಣದಲ್ಲಿಯೂ ಲೋಕಗಳು ಮೂರು ಎಂದು ಉಕ್ತವಾಗಿರುವುದರಿಂದ, ಮಾರ್ಗಕಾರನು ತಾನು ಅನುಸರಿಸುತ್ತಿರುವ ಇಬ್ಬರು ಅಲಂಕಾರಿಕರನ್ನೂ ಇಲ್ಲಿ ಅನುಸರಿಸದೆ, 'ಲೋಕ' ಎಂಬುದಕ್ಕೆ ತನ್ನ ಮತಾನುಸಾರವಾದ ವಿವರಣೆಯನ್ನು ಕೊಟ್ಟಿದ್ದಾನೆ ಎಂದು ಊಹಿಸಬಹುದಾಗಿದೆ.

**ದೇಶವಿರುದ್ಧ :** 'ದೇಶಂ ವರ ರಾಷ್ಟ್ರಾದಿ ನಿವೇಶಾಂತಂ' – ಇದು ಮಾರ್ಗಕಾರನ ಉಕ್ತಿ. 'ದೇಶೋಽದ್ರಿ ವನ ರಾಷ್ಟ್ರಾದಿಃ' – ಇದು ದಂಡಿಯ ಹೇಳಿಕೆ. 'ಬೆಟ್ಟ ಕಾಡು ರಾಷ್ಟ್ರ ಮೊದಲಾದುವು ದೇಶ' ಎಂಬ ದಂಡಿಯ ಹೇಳಿಕೆಯನ್ನು ಗಮನಿಸಿದರೆ 'ವನರಾಷ್ಟ್ರಾದಿ' (ಕಾಡು ನಾಡು) ಎಂದು ಕ.ರಾ.ಮಾರ್ಗದ ಪಾಠವಿರಬಹುದೇ ಎಂಬ ಶಂಕೆಯುಂಟಾಗುತ್ತದೆ. ಅದು ಹೇಗಾದರೂ ಇರಲಿ. ರಾಷ್ಟ್ರ ಮೊದಲಾದ ನಿವೇಶ ಎಂದರೆ ಸ್ಥಳಗಳಿಗೆ ವಿರುದ್ಧವಾದುದನ್ನು ತಿಳಿಸುವುದು ದೇಶವಿರುದ್ಧ. (ಉದಾ., ಶ್ರೀಗಂಧದ ಮರಗಳು ಹಿಮಾಚಲದಲ್ಲಿಯೂ, ದೇವದಾರುಗಳು ಮಲಯಪರ್ವತದಲ್ಲಿಯೂ ಬೆಳೆಯುತ್ತಿವೆ ಎಂದರೆ 'ದೇಶವಿರುದ್ಧ' ದೋಷ) (ಸ್ಥಲ ವರ್ಣನೆ ಸ್ವಾಭಾವಿಕವಾಗಿರಬೇಕು ಎಂದಾಯಿತು. ಆಧುನಿಕ ಕಾವ್ಯಮೀಮಾಂಸೆಯ ಪರಿಭಾಷೆಯಲ್ಲಿ. Local Colur ಎಂಬುದು ಯಥಾರ್ಥವಾಗಿರಬೇಕು.)

ಪದ್ಯ ೧೧೧–೧೧೨ : ಈ 'ವಿರುದ್ಧ' ಭೇದಗಳಿಂದಾದ ದೋಷಗಳನ್ನು

ಒಕ್ಕಣಿಸುತ್ತಾ ಹೋದರೆ ಅವಕ್ಕೆ ಕೊನೆಮೊದಲಿಲ್ಲವೆಂದು ಹೇಳಿ, ಕುಲವಧು ದುರ್ಜನರ ಪರಿಚಯಮಾಡಿಕೊಂಡ ಮಾತ್ರದಿಂದಲೇ ಅವಳ ನಡತೆ ಹೇಗೆ ಶಂಕಾಸ್ಪದವಾಗುವುದೋ ಹಾಗೆ ಕಾವ್ಯದೋಷವು ಎಷ್ಟೇ ಅತ್ಯಲ್ಪವಾದರೂ ಅದು ಕೃತಿವಧುವಿನ ಕಾಂತಿಯನ್ನು ಮಸುಳಿಸುತ್ತದೆ ಎಂದು ಮಾರ್ಗಕಾರನು ಬಹು ಮನೋಜ್ಞವಾದ ರೀತಿಯಲ್ಲಿ ಕವಿಗಳಿಗೆ ಎಚ್ಚರಿಕೆ ನೀಡಿದ್ದಾನೆ.

ಪದ್ಯ ೧೧೩ : [ಇಲ್ಲಿಯವರೆಗೆ ಮಾರ್ಗಕಾರನು ಸಂಸ್ಕೃತ ಕಾವ್ಯಲಕ್ಷಣಕಾರರು ಹೇಳಿದ ದೋಷಗಳನ್ನು ಕನ್ನಡ ಕಾವ್ಯಮಾರ್ಗಕ್ಕೆ ಅನ್ವಯವಾಗುವಂತೆ ವಿವರಿಸಿ, ಇಲ್ಲಿಂದ ಮುಂದಕ್ಕೆ ಕನ್ನಡ ಭಾಷೆಗೆ ವಿಶಿಷ್ಟವಾದ, ಎಂದರೆ ಕನ್ನಡ ಭಾಷಾಪ್ರಯೋಗ ಸಂಬಂಧವಾಗಿ ಉದ್ಭವಿಸಬಹುದಾದ ದೋಷಗಳನ್ನು ಕುರಿತು ವಿವೇಚಿಸಿದ್ದಾನೆ. ಈ ಗ್ರಂಥ ವಿಭಾಗವು ಸಂಪೂರ್ಣವಾಗಿ ಮಾರ್ಗಕಾರನ ಸ್ವತಂತ್ರರಚನೆ ಎಂಬುದು ನೆನೆಯತಕ್ಕದ್ದು; ಹಾಗೂ ಕನ್ನಡ ಕಾವ್ಯಮೀಮಾಂಸೆಗೆ ಅವನ ಬೆಲೆಯುಳ್ಳ ಕೊಡುಗೆ.] ಕಾರಕದೋಷ, ವಚನದೋಷ, ಗುರುದೋಷ, ಲಘುದೋಷ, ಸಮುಚ್ಚಯ ದೋಷ, ವಿಕಲ್ಪದೋಷ, ಅವಧಾರಣಾದೋಷ, ವಿಶಂಕಾ ದೋಷ – ಇವು ಇತರ ದೋಷಗಳು.

### ಕಾರಕ ವಿಚಾರ

ಪದ್ಯ ೧೧೪ : "ಕರ್ಮ ಕರಣ ಇವೇ ಮೊದಲಾಗಿ **ಕಾರಕಗಳು ಆರು** ; ಇವುಗಳನ್ನು ಅವಲಂಬಿಸಿ ನಿಲ್ಲುವ **ವಿಭಕ್ತಿಗಳು ಏಳು**. ಏಕವಚನ, ಬಹುವಚನ ಎಂಬುದಾಗಿ ವಚನ ಎರಡು ತೆರ. ಇವುಗಳ ಜಾತಿವಿಭಾಗಗಳನ್ನೂ, ಗುಣದೋಷಗಳನ್ನೂ ಹೇಳುತ್ತೇನೆ." – ಇದು ಪದ್ಯದ ತಾತ್ಪರ್ಯ.

**ಕಾರಕದೋಷ :** "ಕಾರಕಗಳು ಆರು. ಇವುಗಳನ್ನು ಅವಲಂಬಿಸಿ ನಿಲ್ಲುವ ವಿಭಕ್ತಿಗಳು ಏಳು" ಎಂಬ ಮೇಲಿನ ಹೇಳಿಕೆಯಲ್ಲಿ ಕಂಡು ಬರುವ ವಿರೋಧಾಭಾಸವನ್ನು ಪರಿಹರಿಸಿ ವಿವರಿಸುವುದು ಕ್ಲೇಶಕರವೆನ್ನುವುದರಲ್ಲಿ ಸಂದೇಹವಿಲ್ಲ.[೧೦] ಈ ಕುರಿತು ಟಿಪ್ಪಣಿ ಬರೆಯುತ್ತಾ, ಮದ್ರಾಸು ಮುದ್ರಣದ ಸಂಪಾದಕರು ಹೀಗೆ ಟೀಕಿಸಿದ್ದಾರೆ.

---

೧೦. The earliest reference to the case system in Kannada is found in Kavirajamarga of Nrupatunga (?). He states that there are six 'Karakas' as distinct

"ಷಷ್ಠಿಗೆ ಕಾರಕತ್ವವಿಲ್ಲವಾಗಿ ಕಾರಕಗಳು ಆರಾದುದರಿಂದ ಇಲ್ಲಿ 'ವಿಭಕ್ತಿಗಳಾಱಿನಿಕ್ಕುಂ' ಎಂದಿರಬಹುದೆಂದು ತೋರುವುದು. ಆದರೆ ಲಕ್ಷ್ಯದಲ್ಲಿ ಷಷ್ಠಿಯ ವಿಭಕ್ತಿಯನ್ನೂ ಕಾರಕಕ್ಕೆ ಉದಾಹರಣೆಯಾಗಿ ಕವಿಯು ಕೊಟ್ಟಿರುವನು :– 'ಅಧೀಶ್ವರನಾದಯೆ.' ಈ ಕವಿಗೆ ಕಾರಕವೆಂದರೆ ನಾಮವಿಭಕ್ತಿ ಪ್ರತ್ಯಯವೆಂಬ ಅಭಿಪ್ರಾಯವಿದ್ದಂತೆ ಕಾಣುವುದು."

ಮಾರ್ಗಕಾರನ ಈ ಹೇಳಿಕೆಯ ಬಗೆಗೆ ವಿಚಾರ ವಿಮರ್ಶೆ ಅಗತ್ಯವಾಗದೆ. ಮೊದಲು, ಈ ಸಂಬಂಧದಲ್ಲಿ ಅವನು ಕೊಟ್ಟಿರುವ ಲಕ್ಷ್ಯಪದ್ಯವನ್ನು ನಾವು ವಿಶೇಷವಾಗಿ ಗಮನಿಸಬೇಕು. (ಪದ್ಯ ೧೫) :

"ನರಪತಿ ಬಂದಂ, ಆ ನೃಪನನಟ್ಟಿಯೆ ಕಾಣ್ಬುದು, ತನ್ನರೇಂದ್ರನಿಂ
ಧರಣಿ ಸನಾಥೆ, ಭೂಪತಿಗೆ ಕಪ್ಪವನಿತ್ತನೀಶನತ್ತಣಿಂ
ಪರಿಭವಮಂ ಕಟಲ್ಚುವುದು, ಅಧೀಶ್ವರನಾ ದಯೆ ಸಾಲ್ಗುಂ, ಆ ಮಹೀ
ಶ್ವರನೊಳಿದಪ್ಪುದು – ಎಂಬುದಿದು ಕಾರಕಯುಕ್ತ ವಿಭಕ್ತ್ಯನುಕ್ರಮಂ."

ಲಕ್ಷಣ ಪದ್ಯದಲ್ಲಿ (೧೧೪) 'ಕಾರಕಮಾಱು ಕರ್ಮಕರಣಾದಿಕದಿಂ' ಎಂದಿರುವಲ್ಲಿ ಮಾರ್ಗಕಾರನು 'ಕರ್ತೃ' ಕಾರಕವನ್ನು ಹೆಸರಿಸದೆ ಬಿಟ್ಟಿರುವುದು ಕಂಡುಬರುತ್ತದೆ. ಎಂದರೆ, ಅವನು 'ಷಷ್ಠಿ'ಗೆ ಕಾರಕತ್ವವನ್ನು ಆರೋಪಿಸಿದಂತಾಯಿತು. ಇದು ಸಮಸ್ಯೆಯನ್ನು ಇನ್ನಷ್ಟು ಜಟಿಲವನ್ನಾಗಿ ಮಾಡಿದೆ.

ಕೆಲವು ವ್ಯಾಕರಣ ವಿಚಾರಗಳಲ್ಲಿ ಕೇಶಿರಾಜನು ಮಾರ್ಗಕಾರನನ್ನು ಅನುಸರಿಸಿರುವುದು ಕಂಡುಬರುತ್ತದೆಯಾದ್ದರಿಂದ, ಈ ವಿಚಾರದಲ್ಲಿ ಅವನ ಉಕ್ತಿಗಳನ್ನು ಗಮನಿಸುವುದಗತ್ಯ :

"ಸಂದಿಸಿ ಮಮಿಂಕೆಯದದೊಳೆ
ಯೆಂದಿರ್ಪುವು ಸಪ್ತವಿಧ ವಿಭಕ್ತಿಗಳವು ಮಾ

---

from seven cases, which are distinguished by their relationship with the verb, such as 'Karma' (Objective), 'Karana' (Instrumental) etc.By implication he seems to have omitted the genitive case from the 'Karaka' group. But in the following 'Lakshya Padya' (illustrative stanza) he has included the genitive case also in its indirect relationship with the verb; by his statement at the end of the stanza, "idu Karakyaukta Vibhaktyanukramam," he has assigned 'Karakatva' (verbal relationship) to the genitive also. It is difficult to explain this inconsistency. Nagavarma also holds the same view" (Vide Sabdasmrti : Sutras 15-16) - The Case System : Paper by M.V. Seetha Ramaiah ; Vide Proceedings of the Seminar on "Grammatical Theories in Kannada" (October 1965) Annamalai University, Annamalainagar.

ರ್ಗಂದಪ್ಪದರ್ಥವಶದಿಂ
ಪಿಂದೆಣಿಸಿದ ವಿವಿಧ ವಿಧದ ಲಿಂಗಕ್ಕೆಲ್ಲಂ"

**ವೃತ್ತಿ** – ಪಿಂತೆ ಪೇೞ್ದ ನಾನಾ ತೆಱದ ಲಿಂಗಂಗಳ್ಗೆ ಪರವಾಗಿ ನಾಮವಿಭಕ್ತಿಗಳ್, ಮ್, ಅಮ್, ಇಮ್, ಕೆ, ಅತ್, ಅತ್, ಒಳ್ ಎಂದು ಪ್ರಥಮೆಗಂ ದ್ವಿತೀಯೆಗಂ ತತೀಯೆಗಂ ಚತುರ್ಥಿಗಂ ಪಂಚಮಿಗಂ ಷಷ್ಠಿಗಂ ಸಪ್ತಮಿಗಂ ಏೞೂಗಿ ಕಾರಕವಶದಿಂ ಪತ್ತುಗುಂ. ಅ ಕಾರಕಮೆಂಬುದು ಕ್ರಿಯಾನಿಮಿತ್ತಂ ; ಅದು ಕರ್ತೃವೆಂದುಂ, ಕರ್ಮಮೆಂದುಂ, ಕರಣಮೆಂದುಂ, ಸಂಪ್ರದಾನ ಮೆಂದುಂ, ಅಪಾದಾನಮೆಂದುಂ, ಅಧಿಕರಣಮೆಂದುಂ ಷಡ್ವಿಧಮಾಗಿರ್ಪುದು ; ಷಷ್ಠಿಯೆಂದು ಸಂಬಂಧಾರ್ಥಂ.

**ಪ್ರಯೋಗಂ** :– ಮರಂ, ಮರನಂ, ಮರದಿಂ, ಮರಕ್ಕೆ, ಮರದತ್ತಣಿಂ, ಮರದ, ಮರದೊಳ್, ಇಂತರ್ಥವಶದಿಂ ವಿಭಕ್ತಿ ಪರಿಣಮಿಪುವು. ವಿಭಕ್ತಿ ಕಾರಕ ಮನೆಯ್ದುವುದಱಿಂ ಪದಂ ನಾನಾ ರೂಪಮಪ್ಪುದು.

"ಮರನಿರ್ದುದು ಮರನಂ ಕಡಿ
ಮರದಿಂ ಮಾಡಾನೆಯಂ ಮರಕ್ಕೆಱೆ ನೀರಂ
ಮರದತ್ತಣಿನೆಲೆಯುದಿರ್ದುದು
ಮರದದು ಪಣ್ ಮರದೊಳಿರು ತಳಿರ್ತಿರು ಮರನೇ

(ಸೂತ್ರದಲ್ಲಿಯೂ ವೃತ್ತಿಯಲ್ಲಿಯೂ ಸಂಬೋಧನಾ ವಿಭಕ್ತಿಯ ಪ್ರಸಕ್ತಿಯಿಲ್ಲದಿದ್ದರೂ ಪ್ರಯೋಗದಲ್ಲಿ ಕೇಶಿರಾಜನು ಅದನ್ನು ಸೇರಿಸಿದ್ದಾನೆ.) ಕೇಶಿರಾಜನು ನಾಗವರ್ಮನನ್ನೆ ಅನುಸರಿಸಿರುವುದು ಸ್ಪಷ್ಟ :

"ಧಾತುವಿವರ್ಜಿತಮರ್ಥೋ
ಪೇತಂ ಲಿಂಗಂ ಮಮಿಂಕೆಯದದೊಳ್ ಎಂದಿಂ
ತೀತೆಱದಿಂದೇೞಕ್ಕುಂ
ಖ್ಯಾತವಿಭಕ್ತಿಗಳದರ್ಕೆ ಕಾರಕವಶದಿಂ"

"ಪರಿವಿಡಿಯೆ ಕರ್ತೃ ಕರ್ಮಂ
ಕರಣಾಖ್ಯಂ ಸಂಪ್ರದಾನಮಪನಯನಾಖ್ಯಾ
ನಿರತಮಪಾದಾನಮುಮಧಿ
ಕರಣಮುಮೆನೆ ಕಾರಕಂಗಳಾಱುಂ ನೆಗೞ್ಗುಂ"[೧೧]

೧೧. ಈ ಕನ್ನಡ ವೈಯಾಕರಣರ ಅಭಿಪ್ರಾಯವನ್ನು ಕಿಟ್ಟೆಲ್‌ರವರು ತಮ್ಮ ಇಂಗ್ಲಿಷು ವ್ಯಾಕರಣದಲ್ಲಿ ಹೀಗೆ ಸಂಗ್ರಹಿಸಿದ್ದಾರೆ.

ನಾಗವರ್ಮ ಕೇಶಿರಾಜರಿಬ್ಬರೂ ಕರ್ತೃ ಮೊದಲಾಗಿ ಕಾರಕಗಳು ಆರು ಎಂದೂ, ಸ್ಪಷ್ಟವಾಗಿ ಹೇಳಿದ್ದಾರೆ ; ಷಷ್ಠಿಗೆ ಕಾರಕತ್ವವಿಲ್ಲ ಎಂಬ ಬಗೆಗೂ ಅವರದ್ದು ಏಕಾಭಿಪ್ರಾಯ. ಕಾರಕ ವಿಭಕ್ತಿ ವ್ಯವಸ್ಥೆಯ ವಿಚಾರದಲ್ಲಿ ಮಾರ್ಗಕಾರನಂತೆ ಇವರೂ ಸಂಸ್ಕೃತ ವ್ಯಾಕರಣವನ್ನೆ ಅನುಸರಿಸಿದ್ದರೂ, ಇವರಿಗೂ ಮಾರ್ಗಕಾರನಿಗೂ ಒಂದು ಮುಖ್ಯ ಅಭಿಪ್ರಾಯಭೇದವು ಸ್ಪಷ್ಟ ಗೋಚರವಾಗಿದೆ. ಮಾರ್ಗಕಾರನು ಕರ್ತೃವನ್ನು ಕಾರಕಾನು ಕ್ರಮದಲ್ಲಿ ಸೇರಿಸಿಲ್ಲ ; ಹಾಗೂ, ಕಾರಕಗಳು ಆರೆಂದು ಸ್ಪಷ್ಟವಾಗಿ ಹೇಳಿ, 'ಇದು ಕಾರಕಯುಕ್ತ ವಿಭಕ್ತ್ಯನುಕ್ರಮಂ' ಎಂದು ಉಪಲಕ್ಷಿಸುವಲ್ಲಿ ಷಷ್ಠಿಯನ್ನೂ ಆ 'ಅನುಕ್ರಮ'ದಲ್ಲಿ ಸೇರಿಸಿಕೊಂಡಿರುವುದರಿಂದ ಅವನು ಷಷ್ಠಿಗೂ ಕಾರಕತ್ವವನ್ನು ಆರೋಪಿಸಿರುವನೆಂದು ಅನುಮಾನಿಸಬೇಕಾಗುತ್ತದೆ. ಅವನ ಅಭಿಪ್ರಾಯದಂತೆ, ಕರ್ತೃಕಾರಕವಲ್ಲದಿದ್ದರೂ ಅದು ಪ್ರಥಮಾ ವಿಭಕ್ತಿಯಿಂದ ನಿರ್ದಿಷ್ಟವಾಗಿ, ವಿಭಕ್ತಿಗಳು ಏಳು ; ಇದರಲ್ಲಿ ಸಂದೇಹವಿಲ್ಲ (ಹೀಗಿರುವುದರಿಂದ, ಮದರಾಸು ಮುದ್ರಣದ ಸಂಪಾದಕರ ಅನುಮಾನವು ಸೋಪಪತ್ತಿಕವಾಗಿಲ್ಲ ಎಂದು ಹೇಳಬೇಕಾಗುತ್ತದೆ). ಷಷ್ಠೀ ವಿಭಕ್ತಿಗೆ ಉದಾಹರಣೆಯನ್ನು ಕೊಡುವಲ್ಲಿ 'ಅಧೀಶ್ವರನಾ ದಯೆ ಸಾಲ್ಗುಂ' ಎಂದು ಮಾರ್ಗಕಾರನು ಷಷ್ಠಿಗೆ ಕ್ರಿಯಾಸಂಬಂಧವನ್ನು ಸ್ಪಷ್ಟವಾಗಿ ತಗುಳ್ಚಿರುವುದೂ 'ಮರದದು ಪಣ್' ಎಂದು ಕೇಶಿರಾಜನು ಸಂಬಂಧಾರ್ಥವಷ್ಟನ್ನೆ ಎತ್ತಿ ಕಾಣಿಸಿರುವುದೂ ಅವರಿಬ್ಬರೂ ಅನುಸರಿಸುತ್ತಿರುವ ವ್ಯಾಕರಣಪದ್ಧತಿ ಭೇದಗಳನ್ನು ಸೂಚಿಸುತ್ತವೆ ಎಂದು ನಮಗೆ ತೋರುತ್ತದೆ. ಅದು ಹೇಗಿದ್ದರೂ, ಮಾರ್ಗಕಾರ ಮೊದಲ್ಗೊಂಡು ಎಲ್ಲ ವ್ಯಾಕರಣಕಾರರೂ

---

'The ancient Kannad grammars which the author of the present grammar has consulted, do not use a particular word to express syntax or the construction of sentences ; however the Samskrita term Vakyavinyasa which expresses it, may be adopted.

"Regarding the construction of a sentence (Vakya) Karaka, i.e., the relation of the noun to the verb, is to be considered. Kesava says that Karaka is on account of the verb (Kriyanimitta), and that the case terminatiopns (namavibhaktis) are suffixed by the power of Karaka (karaka Vasadim)... There are six such Karakas or relations, viz., kartri, Karma, Karana, sampradana, apadana, adhaikarana".

The idea of a genitive case is not considered a Karaka, because it expresses the relation of two nouns to each other (sambandhartha), but not the relation of a noun and verb"

ಕನ್ನಡ ನುಡಿಯ ಜಾಯಮಾನವನ್ನು ಗಮನಿಸದೆ ಅದರ ವ್ಯಾಕರಣ ಪ್ರಕ್ರಿಯೆಗಳನ್ನು ಸಂಸ್ಕೃತ ವ್ಯಾಕರಣದ ಚೌಕಟ್ಟಿಗೆ ಅಳವಡಿಸಿರುವುದೇ ಇಂಥ ಗೊಂದಲಗಳಿಗೆ ಕಾರಣವಾಗಿದೆ. ಪ್ರಕೃತದಲ್ಲಿ, ಮಾರ್ಗಕಾರನು ಸಂಸ್ಕೃತವ್ಯಾಕರಣದ ಕಾರಕ ವ್ಯವಸ್ಥೆಯನ್ನು ಅನುಸರಿಸಿರುವುದರಿಂದ ಅವನು ಕರ್ತೃವನ್ನು ಕಾರಕಾನುಕ್ರಮದಲ್ಲಿ ಸೇರಿಸಿಲ್ಲವೆಂದು ಶ್ರೀ ಕೆ.ಟಿ. ಪಾಂಡುರಂಗಿಯವರು ಅಭಿಪ್ರಾಯಪಟ್ಟಿದ್ದಾರೆ. ಅವರು ತಿಳಿಸುವಂತೆ, ಸಂಸ್ಕೃತ ವ್ಯಾಕರಣದ ಪ್ರಕಾರ ಪ್ರಥಮಾ ವಿಭಕ್ತಿ ಕಾರಕಾಧೀನವಲ್ಲ ; ಹಾಗೂ (ಕರ್ಮಣಿ ಪ್ರಯೋಗದಲ್ಲಿ) ತೃತೀಯಾ ವಿಭಕ್ತಿಯ 'ಕರಣ'ಕಾರಕವೇ 'ಕರ್ತೃ'ಕಾರಕತ್ವವನ್ನೂ ಒಳಗೊಳ್ಳುತ್ತದೆ. ಮಾರ್ಗಕಾರನ ಉಕ್ತಿಯನ್ನು ಅವನು ಈ ರೀತಿ ಸಮರ್ಥಿಸಿರುವುದು ಗ್ರಾಹ್ಯವಾಗಿ ಕಂಡುಬಂದರೂ, ಮಾರ್ಗಕಾರನು ಹೇಳುವ 'ಕರ್ತೃ'ಕಾರಕ ರಹಿತವಾದ ಆರು ಕಾರಕಗಳಲ್ಲಿ ಷಷ್ಠಿಯೂ ಸೇರುವುದೇ ಇಲ್ಲವೆ ಎಂಬ ಸಮಸ್ಯೆಗೆ ಅವರಿಂದ ಪರಿಹಾರ ಸೂಚಿತವಾಗಿಲ್ಲ.[೧೨]

ಕೇಶಿರಾಜನೂ ತೃತೀಯೆಗೆ ಕರ್ತೃಕಾರಕತ್ವವನ್ನು ಹೇಳಿದ್ದಾನೆ. ('ತೃತೀಯೆ ಪೇೞಲ್ ಪಡೆಗುಂ ಕರ್ತೃಕರಣ ಹೇತು ಸ್ಥಿತಿಯೊಳ್' – ಸೂ. ೧೨೮. ಉದಾ. ಕಾವ್ಯಮೆನ್ನಿಂ ಪೇೞೆ ಪಟ್ಟುದು.)

(ಆಧುನಿಕ ಭಾಷಾ ಶಾಸ್ತ್ರಜ್ಞರ ಪ್ರಕಾರ, ಕನ್ನಡದಲ್ಲಿ ಪ್ರಥಮಾ ವಿಭಕ್ತಿಯಿದ್ದರೂ ಅದನ್ನು ಸಂಕೇತಿಸುವ ಪ್ರತ್ಯಯ ನುಡಿಯ ಜಾಯಮಾನಕ್ಕೆ ಹೊರತು. ನಾಮಪ್ರಕೃತಿಯೇ ಪ್ರಥಮೆಯ ಅರ್ಥದಲ್ಲಿ ಪ್ರಯೋಗವಾಗುತ್ತದೆ. ಮಾರ್ಗಕಾರನ ಲಕ್ಷ್ಯಪದ್ಯದಲ್ಲಿಯೇ – 'ನರಪತಿ ಬಂದಂ' – ಎಂಬ ಪ್ರಯೋಗ ಇದಕ್ಕೆ ನಿದರ್ಶನ. ಅಲ್ಲದೆ, ವಾಕ್ಯದ

---

೧೨. "In Kavirajamarga Nrpatunga enumerates six Karakas and seven vibhaktis. He begins his enumeration with Karmakaraka instead of Kartrkaraka. This is because the order followed is that of vibhaktis. Accoring to Sanskrit grammarians, the first case termination does not convey any Karaka. The second conveys Karma, the Karana and Karta and so on. The verbal termination conveys Karta in active construction. Therefore the first case termination is added purely for technocal reasons........ a plan of reference to Karma on this basis cannot hold good to Kannada. The demarcation of Karakas as in Sanskrit cannot also be applied mutatis mutandis to Kannada." - Influences of Sanskrit and prakrit Grammars on Kannada Grammarians' : Paper by Sri K.T. Pandurangi, M.A. ; Vide proceedings of the Seminar on Grammatical "Theories in Kannada" (October 1965), Annamalai University, Annamalainagar.

ಕ್ರಿಯಾಪದದಲ್ಲಿಯ ಧಾತುವಿಗೆ ಹತ್ತಿರುವ ಅಖ್ಯಾತ ಪ್ರತ್ಯಯವೇ ಕರ್ತೃಸೂಚಕವೂ ಆಗಿ ಕೆಲಸ ಮಾಡುತ್ತದೆ : (ಬರು + ಅನ್, ಆಳ್, ಉದು, ಅರ್, ಉವು, ಇತ್ಯಾದಿ. 'ಬಂದನ್' ಎಂದರೆ 'ಅವನ್ ಬಂದನ್' ಎಂದೇ ಅರ್ಥ. ಹೀಗಿರುತ್ತ, ಕನ್ನಡದಲ್ಲಿ ಸಹಜವಾಗಿಯೆ (ಮೇಲೆ ಶ್ರೀಪಾಂಡುರಂಗಿಯವರು ಸಂಸ್ಕೃತ ವ್ಯಾಕರಣ ವಿಷಯಕವಾಗಿ ಹೇಳಿರುವಂತೆ) ಪ್ರಥಮಾ ಮೂಲಕವಾದ ಕರ್ತೃಕಾರತ್ವಕ್ಕೆ ಎಡೆಯಿಲ್ಲವೆಂದು ಕಂಡುಬರುತ್ತದೆ. ಮಾರ್ಗಕಾರನು ಇದನ್ನೆಲ್ಲ ಮನಗಂಡೆ 'ಕರ್ತೃ'ವನ್ನು 'ಕಾರವರ್ಗ'ದಿಂದ ಹೊರತುಪಡಿಸಿರಬೇಕೆಂದು ನಮಗೆ ತೋರುತ್ತದೆ.) 'ಕವಿರಾಜಮಾರ್ಗ'ವನ್ನು ಆಳವಾಗಿ ಅಭ್ಯಾಸಮಾಡಿರುವ ದಿ॥ ವಿದ್ವಾನ್ ಮುಳಿಯ ತಿಮ್ಮಪ್ಪಯ್ಯನವರು ಈ ಸಂಬಂಧದಲ್ಲಿ ಮಾಡಿರುವ ವಿವೇಚನೆ ('ಕವಿರಾಜಮಾರ್ಗ ವಿವೇಕ' ಭಾಗ–೨ ಅಪ್ರಕಟಿತ) ಮನನೀಯವಾಗಿದೆ. ಅವರ ತೀರ್ಮಾನವು ನಮ್ಮ ತೀರ್ಮಾನಕ್ಕೆ ಪೋಷಕವಾಗಿರುವುದರಿಂದಲೂ ಅವರ ವಾದಸರಣಿ ಯುಕ್ತಿಯುಕ್ತವಾಗಿದ್ದು ಸ್ವಾರಸ್ಯವಾಗಿರುವುದರಿಂದಲೂ 'ಕಾರಕ' ಸಂಬಂಧವಾದ ಅವರ ವಿವೇಚನೆಯ ಕೆಲವು ಭಾಗಗಳನ್ನು ಇಲ್ಲಿ ಉದ್ಧರಿಸಿಕೊಟ್ಟಿದೆ.

'ಕಾರಕ' 'ಲಿಂಗ' 'ವಿಭಕ್ತಿ' – ಈ ಪದಗಳ ಅರ್ಥ ನಿರ್ವಚನವನ್ನು ಮಾಡಿ, ಮಾರ್ಗಕಾರನು ಕಾರಕಯುಕ್ತ ವಿಭಕ್ತ್ಯನುಕ್ರಮಕ್ಕೆ ಕೊಟ್ಟಿರುವ ಲಕ್ಷ್ಯಪದದ ಆಶಯವನ್ನು ಮುಳಿಯ ತಿಮ್ಮಪ್ಪಯ್ಯನವರು ಹೀಗೆ ತಿಳಿಸಿದ್ದಾರೆ :

"ಸ್ವಲಿಂಗಾಂತರ್ಗತವಾದ ಅರ್ಥವನ್ನು ಆಯಾ ಕಾರಕಾರ್ಥವನ್ನಾಗಿ ವಿಭಾಜಿಸಿ, ಅದನ್ನು ಆಯಾ ಕಾರಕ ಸಂಬಂಧಕ್ಕನುವಾಗಿ ಕ್ರಿಯಾಪದದತ್ತ ಕೊಂಡೊಯ್ಯುವ ಅಕ್ಷರ ವರ್ಗವೇ ವಿಭಕ್ತಿಪ್ರತ್ಯಯ. ಉದಾ. 'ನರಪತಿ ಬಂದಂ' ಎಂಬಲ್ಲಿ ಕರ್ತೃತ್ವ ಸಂಬಂಧದಿಂದ ಪದವು ತನ್ನ ಪ್ರತ್ಯಯಮೂಲಕವಾಗಿ ಕ್ರಿಯಾಪದವನ್ನೊಂದುತ್ತಿದೆ. ಅದರಂತೆ 'ನೃಪನಂ ಕಾಣ್ಬುದು ನರೇಂದ್ರನಿಂ ಧರಣಿ ಸನಾಥೆ (ಯಾದಳ್), ಭೂಪತಿಗೆ ಕಪ್ಪಮನೀಗೆ, ಅವನೀಶನತ್ತಣಿಂ ಪರಿಭವಮಂ ಕಟಿಲ್ಚುವುದು, ಅಧೀಶ್ವರನಾ ದಯೆ ಸಾಲ್ಗುಂ, ಮಹೀಶ್ವರನೊಳ್ ಇದು ಅಪ್ಪುದು' ಎಂಬಲ್ಲಿ ಕ್ರಮವಾಗಿ ಕರ್ಮ, ಕರಣ, ಸಂಪ್ರದಾನ, ಅಪಾದಾನ, ಸಂಬಂಧ, ಅಧಿಕರಣಗಳೆಂಬ ಸಂಬಂಧ ಮೂಲಕವಾಗಿ ನಾಮಪದವು ಕ್ರಿಯಾಪದವನ್ನೊಂದುವ ವ್ಯಾಕರಣಮಾರ್ಗವನ್ನು ಕಾಣಬಹುದು... ಸಂಸ್ಕೃತ

ವ್ಯಾಕರಣಾನುಸಾರವಾಗಿ ನೋಡಿದರೆ 'ಕರ್ತೃ' ಮೊದಲಾಗಿ 'ಸಂಬಂಧ' (ಷಷ್ಠೀವಿಭಕ್ತಿ ಪ್ರತ್ಯಯದಿಂದ ಸೂಚಿತವಾಗುವ ಪದ)ವನ್ನುಳಿದು ಆರು ಕಾರಕಗಳು ಈ ಗ್ರಂಥಕಾರನ 'ಕಾರಕಮಾಱು' ಎಂಬ ಹೇಳಿಕೆಗಳೇನೊ ಸರಿಯಾಗುತ್ತಿದೆ"

– ಎಂದು ಹೇಳಿ, ಮದ್ರಾಸು ಮುದ್ರಣದ ಸಂಪಾದಕರ ಟಿಪ್ಪಣಿಯನ್ನು ಕುರಿತು ಹೀಗೆ ಟೀಕಿಸಿದ್ದಾರೆ :

"ಸಂಪಾದಕರು ತಮ್ಮ ಅಭಿಪ್ರಾಯಗಳೆರಡರೊಳಗೆ ಮೊದಲಿನದನ್ನು ತಳ್ಳಿ ಮತ್ತಿನದನ್ನು ನೆಲೆಗೊಳಿಸಿದಂತೆ ನಮಗೆ ಕಾಣುವುದು. ಷಷ್ಠಿಗೆ ಕಾರಕತ್ವವಿಲ್ಲದಿರುವುದು ಸಂಸ್ಕೃತವ್ಯಾಕರಣ ಪದ್ಧತಿಗನುವಾಗಿ. ಅದನ್ನು ಅನುಸರಿಸಿದಲ್ಲಿ 'ವಿಭಕ್ತಿಗಳಾಱು' ಎನ್ನುವುದು ಹೇಗೆ? ಸಂಸ್ಕೃತದಲ್ಲಿ ನಾಮವಿಭಕ್ತಿಗಳು ಆರಲ್ಲ, ಏಳು. ಅವರು ತಮ್ಮ ಆ ಸಂದೇಹ ನಿವೃತ್ತಿಯನ್ನು, "ಆದರೆ ಲಕ್ಷ್ಯದಲ್ಲಿ ಷಷ್ಠಿಯ ವಿಭಕ್ತಿಯನ್ನು ಕಾರಕಕ್ಕೆ ಉದಾಹರಣೆಯಾಗಿ ಕವಿಯು ಕೊಟ್ಟಿರುವನು" ಎಂಬುದರಿಂದ ಮಾಡಿಕೊಳ್ಳುತ್ತಾರೆ. ಷಷ್ಠೀವಿಭಕ್ತಿಯನ್ನು ಕ್ರಮವಾಗಿ ಕಾರಕಾಧಾರವೆನ್ನಿಸಿದ ವಿಭಕ್ತಿ ನಿರೂಪಣೆಯಲ್ಲಿ ಒಟ್ಟಿಗೆ ಸೇರಿಸಿದುದು ಮಾತ್ರ – ಎಂದೇಕೆ ಭಾವಿಸಬಾರದು ? ಸಂಬಂಧದ ಷಷ್ಠಿಗೆ ಕಾರಕತ್ವವಿಲ್ಲವಾದರೂ ಕಾರಕಗಳ ಸಾಲಿನಲ್ಲಿರುವುದರಿಂದ ಅದನ್ನು ಅವುಗಳೊಡನೆ ನಿರೂಪಿಸಿದ್ದಾನೆ ಎಂದೇ ಭಾವಿಸತಕ್ಕದ್ದು. ಷಷ್ಠಿಗೆ ಸಂಬಂಧವಾಚಕತೆ ಮಾತ್ರವೇ ಇರುವುದು, ಕಾರಕತ್ವವಿಲ್ಲ ಎಂಬ ಸಂಸ್ಕೃತ ವೈಯಾಕರಣ ಮಾರ್ಗವನ್ನೊಂದಿದರೆ 'ವಿಭಕ್ತಿಗಳಾಱು' ಎನ್ನುವುದಾದರೂ ಹೇಗೆ ? ಷಷ್ಠಿಗೆ ವಿಭಕ್ತಿ ಪ್ರತ್ಯಯವೂ ಇಲ್ಲದಾಗದು. ಆ ವಿಭಕ್ತಿಯ ಸ್ವರೂಪವನ್ನೂ ತಿಳಿಸಲಿಕ್ಕಾಗಿ ಷಷ್ಠಿಯನ್ನೂ ಅಲ್ಲಿ ಸೂಚಿಸಿರಬೇಕು, ಎನ್ನುವ".

ಮುಳಿಯ ತಿಮ್ಮಪ್ಪಯ್ಯನವರು ತಮ್ಮ ಸೂಕ್ಷ್ಮವಾದ ವಿವೇಚನೆಯನ್ನು ಮುಂದುವರಿಸಿ, ಮಾರ್ಗಕಾರನ ನಿಲುವೇನಿರಬಹುದೆಂಬುದನ್ನು ಹೀಗೆ ಅನುಮಾನಿಸಿದ್ದಾರೆ :

"ಗ್ರಂಥಕಾರನು 'ಕಾರಕಮಾಱು ಕರ್ಮಕರಣಾದಿಕದಿಂ' ಎಂದೂ 'ಪ್ರಥಮಾದಿಭೇದ ನಿರ್ಧಾರಣದಿಂದದಂ ಪಿಡಿದು ನಿಲ್ವ ವಿಭಕ್ತಿಗಳೇೞ್ ನಿಕ್ಕುಂ' ಎಂದಿದ್ದಾನಷ್ಟೆ. ಇದನ್ನು ಅವಗಾಹಿಸಿ ನೋಡಿದಲ್ಲಿ ಅವನೆಣಿಕೆಯಂತೆ 'ಕರ್ಮವನ್ನು ಹಿಡಿದು ಮೊದಲ್ಗೊಂಡು 'ಅಧಿಕರಣ'ದವರೆಗಿನವೆಲ್ಲ – ಎಂದರೆ 'ಸಂಬಂಧ' (ಷಷ್ಠಿ) ಸಹಿತವಾಗಿ – ಕಾರಕಗಳು ಎಂಬ ಭಾವನೆ ಹೊಳೆಯುತ್ತದೆ. ಅಲ್ಲವಾಗಿದ್ದರೆ, 'ಕಾರಕಮಾಱು ಕರ್ತೃಕರ್ಮಾದಿಕದಿಂ' ಎನ್ನಬೇಕಾಗಿತ್ತು. ಹಾಗೆಂದರೆ, ಛಂದೋಭಂಗವಾಗುತ್ತಿತ್ತು ಎಂದೆನ್ನಬಾರದು. 'ಇಲ್ಲಿಗಿದು ತಕ್ಕುದಿಲ್ಲಿಗೆ ಪೊಲ್ಲದೆಂದಱಿದು' ಪದಗಳನ್ನು ಬಳಸಬೇಕು

ಎಂದು ಬೋಧಿಸಿದ 'ವಾಗಧಿಪ'ನಿಗೆ ತಕ್ಕಂತೆ ಪದಗಳನ್ನು ಪ್ರಯೋಗಿಸಲು ತಿಳಿಯುತ್ತಿದ್ದಿಲ್ಲವೆ ? ನಾವು ಮೇಲೆ ಸೂಚಿಸಿದುದು ಅರ್ಥಾನುಸಾರವಾಗಿ ಮಾತ್ರವಲ್ಲದೆ ಛಂದೋಭಂಗವನ್ನು ಅಲ್ಲಗಳೆದಲ್ಲ. ಅದರಿಂದ, ಅವನ ಭಾವನೆಯಕಲ್ಲಿ ಪ್ರಥಮಾ ವಿಭಕ್ತಿ ಪ್ರತ್ಯಯಯುತ 'ಕರ್ತೃ' ಪದವೊಂದು ಮಾತ್ರ 'ಕಾರಕ'ವಲ್ಲ ; ಉಳಿದುವೆಲ್ಲ ಕಾರಕಗಳು ಎಂಬ ಭಾವನೆ ಇದ್ದಂತೆ ತೋರುತ್ತದೆ. ಮತ್ತಿನ ಕನ್ನಡ ವೈಯಾಕರಣರು ಈ ಭಾವನೆಯನ್ನು ಸಂಸ್ಕೃತಾನುಸಾರವಾಗಿ ಒಪ್ಪದಿದ್ದರೂ, ಅಭಿನ್ನವಾದ ದೇಸಿಯಲ್ಲಿ ಯತಿಭಂಗವನ್ನು ಗುಣವನ್ನಾಗಿ ಬಳಸಂದ ಪೂರ್ವಾಚಾರ್ಯರನ್ನು ಅನುಸರಿಸಿದಂತೆ, ಅಭಿನ್ನವಾದ ದೇಸಿಯೆಂದೇ ಕಾರಕನಿರ್ಣಯವನ್ನು ಹೀಗೆ ಮಾಡಿದುದಾಗಿರಬೇಕು. ಈ ನಿರ್ಧಾರದಲ್ಲಿ ಸಕಾರಣತೆಯೂ ಇಲ್ಲವೆಂದಲ್ಲ. 'ಕಾರಕಂ' ಎಂಬ ಪದವು ಸಂಸ್ಕೃತ ವ್ಯಾಕರಣಾನುಸಾರವಾದ ವ್ಯುತ್ಪತ್ತಿಯಂತೆ 'ಮಾಡಿಸುವ ವ್ಯಕ್ತಿ'ಯನ್ನು ಸೂಚಿಸುವುದಲ್ಲದೆ, 'ಮಾಡುವ ವ್ಯಕ್ತಿ'ಯನ್ನಲ್ಲ, ('ಕಾರಯತಿ ಇತಿ ಕಾರಕಃ'). 'ಕರೋತಿ ಇತಿ ಕರ್ತಾ' ಎಂದು 'ಕರ್ತೃ'ಪದವು ರೂಪಿತವಾಗಿದೆ. ಇಂಥ 'ಕರ್ತೃ' ಎಂಬ ಪದವು ಕಾರವೆನ್ನಿಸುವುದು ಹೇಗೆ? 'ನರಪತಿ ಬಂದಂ' ಎಂಬ ದೃಷ್ಟಾಂತವನ್ನು ನೋಡಿರಿ. ಅದಕ್ಕೆ "ನರಪತಿಯು ಬರುವಿಕೆ ಎಂಬ ಕಾರ್ಯವನ್ನು ಬಿಟ್ಟು 'ಅಧೀಶ್ವರನಾ ದಯೆಸಾಲ್ಗುಂ' ಎಂಬುದನ್ನು ಮನನವೆಸಗುವ. ಇಲ್ಲಿ 'ಅಧೀಶ್ವರನಾ' ಎಂಬ ಷಷ್ಠೀವಿಭಕ್ತಿಯುತವಾದ ಪದವು 'ಸಾಲ್ಗುಂ' ಎಂಬ ಕ್ರಿಯೆಯು ಕಾರಕವಲ್ಲವೆಂಬುದೇನೋ ಸರಿ. ಆ ಕ್ರಿಯೆಗೆ ಕರ್ತೃ 'ದಯೆ'. ಅಂತಹ ಕರ್ತೃರೂಪದ ದಯೆ ಅಧೀಶ್ವರನ ಸಂಬಂಧವಾದುದು. ಮೇಲಿನ ವಿವೇಚನೆಗನುವಾಗಿ 'ಕರ್ತ'ಕಾರಕವಾಗದು ಎಂಬುದು ಸರಿಯಾದರೆ, ಈ ವಾಕ್ಯದಲ್ಲಿ ಕಾರಕವೇ ಇಲ್ಲವೆನ್ನಿಸುತ್ತಿದೆ. ಅದರಿಂದ ಮುಂದಿನ ನಾಮಪದಕ್ಕೆ ತನ್ನ ಸಂಬಂಧವನ್ನು ಮಾತ್ರ ಕೊಡುವ 'ಅಧೀಶ್ವರನಾ' ಎಂಬ ಪದವು ಆ ಸ್ವಸಂಬಂಧಿಯಾದ 'ದಯೆ' ಎಂಬ ಕರ್ತೃವಿನ ಮೂಲಕವಾಗಿ 'ಸಾಲ್ಗುಂ' ಎಂಬುದಕ್ಕೆ ಕರ್ತೃವಾಗಲಾರದು. ಅದರಿಂದಲೇ ಷಷ್ಠೀವಿಭಕ್ತಿ ಯುಕ್ತಪದವು ಮುಂದಿನ ನಾಮಪದಕ್ಕೆ ತನ್ನ ಸಂಬಂಧವನ್ನಿತ್ತು ಆ ಮೂಲಕವಾಗಿ ಕ್ರಿಯೆಗೆ ಕಾರಕವಾಗುವುದು. ಅದನ್ನು ಬೇಕಾದರೆ 'ಸಂಬದ್ಧಕಾರಕ' ಎಂದು ಕರೆಯಬಹುದು. ಇಷ್ಟು ಮಾತ್ರವಲ್ಲ. ಪ್ರಾಕೃತ ದೇಶಿಗಳಲ್ಲಿ ಷಷ್ಠೀವಿಭಕ್ತಿ ಪದಕ್ಕೆ ಕರ್ಮಾದಿಯಾದ ಕೆಲವು ಕಾರಕಗಳ ಅಧಿಕಾರವೂ ಇದ್ದಂತೆ ಗೊತ್ತಾಗುತ್ತಿದೆ....[೧೩]

---

೧೩. ಇಲ್ಲಿ ತಿಮ್ಮಪ್ಪಯ್ಯನವರು ಲಕ್ಷ್ಮೀಧರನ 'ಷಡ್ಭಾಷಾಚಂದ್ರಿಕೆ'ಯಿಂದ ಶ್ಲೋಕಖಂಡಗಳನ್ನು ಎತ್ತಿಕೊಟ್ಟಿದ್ದಾರೆ. ಗ್ರಂಥವಿಸ್ತಾರ ಭಯದಿಂದ ಅವನು ನಾವಿಲ್ಲಿ ಉದ್ಧರಿಸುತ್ತಿಲ್ಲ. – ಸಂ.

ಕನ್ನಡ ವೈಯಾಕರಣರೂ ಈ ವಿಚಾರವನ್ನು 'ವಿಭಕ್ತಿಪಲ್ಲಟ' ಎಂಬ ಹೆಸರಿನಿಂದ ವಿಸ್ತರಿಸಿದ್ದಾರಷ್ಟೆ. ಇದು ದೇಸಿಯಲ್ಲಿ ಪುರಾತನ ಕಾಲದಿಂದಲೂ ನಡೆದುಬಂದು ಈಗಲೂ ನೆಲೆಗೊಂಡಿರುವ ಪದ್ಧತಿಯೆಂಬುದನ್ನು ಮರೆಯಬಾರದು. ಮಾತ್ರವೇ ಅಲ್ಲ ; ಈ ವಿಚಾರವನ್ನೆಲ್ಲ ಮಥನವೆಸಗಿಯೆ ಆಗಿರಬೇಕು. ನಾಗವರ್ಮನು ತನ್ನ ಭಾಷಾಭೂಷಣದಲ್ಲಿ 'ಕಾರಕ'ವನ್ನು ಲಕ್ಷಿಸುವ ರೀತಿಯನ್ನೀಕ್ಷಿಸಿರಿ :

"ಸೂತ್ರ : ಅಥ ಕಾರಕಂ ನಿರೂಪ್ಯತೇ

ವೃತ್ತಿ : ಸಂಜ್ಞಾಸಂಧಿನಿಯಮಾನಂತರಂ ಕರ್ತೃ ಕರ್ಮ ಕರಣ ಸಂಪ್ರದಾನಾಪಾದನಾ ಸ್ವಾಮ್ಯದಿಕರಣಾಖ್ಯಂ ಕಾರಕಂ ಯಥಾಕ್ರಮಂ ನಿರೂಪ್ಯತೆ".

ಈ ಸೂತ್ರ ವೃತ್ತಿಗಳಿಂದ ಸ್ವಾಮಿ ಸಂಬಂಧದ ಷಷ್ಠಿಯೂ ಕಾರಕವೆಂದು ಸೂಚಿಸಿದಂತಾಗುತ್ತಿದೆ. ಆದರೆ, ಅದರೊಡನೆ ಕರ್ತೃವೂ ಕಾರಕವೆಂಬದನ್ನು ಸಂಸ್ಕೃತ ವೈಯಾಕರಣ ಮಾರ್ಗದಲ್ಲಿ ಅವನೇ ಸೂಚಿಸಿದ್ದಾನೆ. ಇಲ್ಲಿ 'ಕರ್ಮಕರಣಾದಿಕದಿಂ' ಎಂಬ ಗ್ರಂಥಕಾರನ ಹೇಳಿಕೆಯನ್ನಾಧರಿಸಿ ಕಾರಕ ಕರ್ತೃಗಳ ವ್ಯುತ್ಪತ್ತಿ ಕ್ರಮವನ್ನು ಬಿಡಿಸಿ, ಕರ್ತೃ ಕಾರಕವಾಗದೆಂದೂ ಕರ್ಮಾದಿಗಳು ಮಾತ್ರವೇ ಕಾರಕಗಳೆಂದೂ ನಿರ್ಧರಿಸಿಕೊಂಡುದು ನಾವೆ. ಇದರ ತಪ್ಪೊಪ್ಪೊಗಳನ್ನು ವಿದ್ವಾಂಸರೇ ನಿರ್ಧರಿಸಿ ನಿರೂಪಿಸಬೇಕು."

ಮೇಲಿನ ವಿಚಾರ ವಿಮರ್ಶೆಯು ಫಲಿತಾಂಶವಾಗಿ ನಾವು ನಿರ್ಣಯಿಸಬೇಕಾದದ್ದು – ಕನ್ನಡ ವ್ಯಾಕರಣದಲ್ಲಿ ಕಾರಗಳೆಷ್ಟು, ವಿಭಕ್ತಿಗಳೆಷ್ಟು ಎಂಬುದನ್ನಲ್ಲ. ಅಲ್ಲದೆ, ವಿಭಕ್ತಿ ಪ್ರತ್ಯಯಗಳು ಪಲ್ಲಟವಾಗುವುವಾದರೂ ಕಾರಗಳು ನಿಯತ. ('ಇಂತು ನುಡಿವ ಬಿನ್ನಣದಿಂ ಕಾರಕಮಂ ನಿಯತಾರ್ಥಮೆಂದಱಿವುದು' ಎಂಬ ಕೇಶಿ ರಾಜನ ಉಕ್ತಿಯನ್ನು ಇಲ್ಲಿ ಗಮನಿಸಬಹುದು. ಶ.ಮ.ದ.ಸೂ. ೧೩೬, ಪ್ರಯೋಗಾಂತ್ಯದ ವಾಕ್ಯ). ಈ ಬಗೆಗೆ ಮಾರ್ಗಕಾರನ ಮತವೇನೆಂಬುದಷ್ಟೆ ನಮಗೆ ಪ್ರಕೃತವಾದದ್ದು. ಅವನ ಮತದಂತೆ – ಕಾರಕಗಳು ಆರು, ಅವುಗಳಲ್ಲಿ ಕರ್ತೃ ಸೇರುವುದಿಲ್ಲ ; ಷಷ್ಠಿಗೂ ಕಾರಕತ್ವ ಉಂಟು. ಪ್ರಥಮಾದಿಯಾಗಿ ವಿಭಕ್ತಿಗಳು ಏಳು. (ಹೀಗಿದ್ದರೂ, ಲಕ್ಷ್ಯದಲ್ಲಿ ಪ್ರಥಮಾ ವಿಭಕ್ತಿ ಪ್ರತ್ಯಯವನ್ನು ಮಾರ್ಗಕಾರನು ನಿರ್ದೇಶಿಸಿಲ್ಲ. ಪ್ರಕೃತಿಯೇ ಪ್ರಥಮಾರ್ಥದಲ್ಲಿ ಪ್ರಯೋಗವಾಗಿರುವುದರಿಂದ, ಅದಕ್ಕೆ ಪ್ರತ್ಯಯದ ಅಗತ್ಯತೆ ಇಲ್ಲವೆಂಬ ಆಧುನಿಕ ಭಾಷಾಶಾಸ್ತ್ರ ಸಮ್ಮತವಾದ ಅಭಿಪ್ರಾಯ ಮಾರ್ಗಕಾರನಿಗಿದ್ದಿತೇ ಎಂಬುದು ವಿಚಾರಣೀಯ).

ಪದ್ಯ ೧೧೬ : 'ಬರಮೆಮಗೀಗೆ ದೇವತೆಗಳ್' ಎಂಬುದೂ 'ಕರುಣಿಪ್ಪುದಕ್ಕೆ... ಸಂತತಿಯುಂ' ಎಂಬುದೂ ಕಾರಕ ದೋಷವೆಂದು ಹೇಳಿ, 'ಬರವನಮೋಘಮೀಗೆ...' ಮತ್ತು 'ಕರುಣಿಪ್ಪುದಕ್ಕೆ.... ಸಂತತಿಗೆ' ಎಂಬುದು 'ಅದುಷ್ಟಕಾರಕ'ವೆಂದೂ ತಿಳಿಸಿದ್ದಾನೆ. (ಕಾರಕಮಾಱು ಕರ್ಮಕರಣಾದಿಕದಿಂ ಎಂದು ಲಕ್ಷಣ ಪದ್ಯದಲ್ಲಿ ಹೇಳಿರುವ ಮೇರೆಗೆ, ಲಕ್ಷ್ಯ ಪದ್ಯದಲ್ಲಿ ಕರ್ಮಕಾರಕದಿಂದಲೇ ದೋಷನಿದರ್ಶನಕ್ಕೆ ತೊಡಗಿರುವುದು ಗಮನಾರ್ಹ). 'ಈಗೆ' (ಕೊಡಲಿ) ಎಂಬ ಕ್ರಿಯಾಪದಕ್ಕೆ 'ದೇವತೆಗಳ್' ಎಂಬುದು ಕರ್ತೃಸ್ಥಾನದಲ್ಲಿದ್ದು, 'ಬರಂ' (ವರವು) ಎಂಬುದು ಕರ್ಮಕಾರಕ (ಸಂಬಂಧ)ವನ್ನು ಹೊಂದಬೇಕಾದ್ದರಿಂದ ಈಗ ಇರುವಂತೆ ಅದು ದುಷ್ಟ. 'ಬರವಂ' ಎಂದು ಕರ್ಮಕಾರಕ ಸೂಚಕವಾದ ದ್ವಿತೀಯಾ ವಿಭಕ್ತಿ ಪ್ರತ್ಯಯವನ್ನು ಹೊಂದಿದಾಗ ಅದು ಅದುಷ್ಟವೆನ್ನಿಸುತ್ತದೆ. (ಮೇಲಣ ಇನ್ನೊಂದು ನಿದರ್ಶನವನ್ನೂ ಇದೇ ರೀತಿ ಸಮನ್ವಯ ಮಾಡಿಕೊಳ್ಳಬೇಕು). (ಇನ್ನುಳಿದ ಕಾರಗಳಿಗೆ ಉದಾಹರಣೆಗಳನ್ನು ಕೊಟ್ಟಿಲ್ಲ) ನಿಕ್ಕುವಂ = ನಿಶ್ಚಯ, ದಿಟ, ಸತ್ಯ.

ಪದ್ಯ ೧೧೭ : 'ಬರಮೆಮಗೀಗೆ' ಎಂಬ ದುಷ್ಟ ಪ್ರಯೋಗವನ್ನು ಇನ್ನೊಂದು ರೀತಿಯಲ್ಲಿ ದೋಷರಹಿತವನ್ನಾಗಿ ಮಾಡಬಹುದೆಂಬುದನ್ನು ಈ ಪದ್ಯದಲ್ಲಿ ಸೂಚಿಸಿದ್ದಾನೆ. 'ಬರಮೀಗೆ' ಎಂಬಲ್ಲಿ 'ಬರಂ' ಎಂಬ ಪದದ ಮುಂದೆ (ಆ ಕಾರಕ 'ಸಕ್ಕದವೇನೊ' – ಸಂಸ್ಕೃತವಾದರೂ ಬಾಧಕವಿಲ್ಲ) ಕ್ರಿಯಾಪದವನ್ನು ತಗುಳ್ಚಿ ಕ್ರಿಯಾಸಮಾಸವನ್ನು (ಬರಮಂ + ಈಗೆ) ಮಾಡಿಕೊಂಡರೆ ದೋಷವಾಗದು. (ಬರಮೀಗೆಮಗೆ ದೇವತೆಗಳ್' ಎಂದು ಹೇಳಬಹುದು). ('ವರವನ್ನು ಎಮಗೆ ಈಯಲಿ ದೇವತೆಗಳು' ಅಥವಾ 'ವರವೀಯಲಿ ಎಮಗೆ ದೇವತೆಗಳು' – ಈ ಎರಡೂ ಸಾಧು ಪ್ರಯೋಗಗಳು).

ಪದ್ಯ ೧೧೮ : ಈ ಪದ್ಯದಲ್ಲಿ 'ವಚನ'ದ ಗುಣದೋಷಗಳನ್ನು ಕಾಣಿಸಿದೆ. 'ಪಾವುಡಂ ನೃಪತಿಗೆ ಬಂದುವು' ; 'ಆನೆಗಳ್ ಈ ಪ್ರದೇಶದೊಳ್ ನಿಂದುದು' – ಇವೆರಡೂ ವಚನ ದೋಷಗಳು. ಪದ್ಯದ ಉತ್ತರಾರ್ಧದಲ್ಲಿ ಈ ದೋಷವನ್ನು ಹೀಗೆ ಸರಿಪಡಿಸಿದೆ : 'ಪಾವುಡಂ ನೃಪತಿಗೆ ಬಂದುದು; ಆನೆಗಳ್ ಈ ಪ್ರದೇಶದೊಳ್ ನಿಂದುವು.' ಕರ್ತೃಪದವು ಯಾವ ವಚನದಲ್ಲಿರುತ್ತದೆಯೋ ಅದೇ ವಚನದಲ್ಲಿ ಕ್ರಿಯಾಪದವೂ

ಇರಬೇಕೆಂಬುದು ಈ ದೃಷ್ಟಾಂತಗಳಿಂದ ಸ್ಪಷ್ಟವಾಗುತ್ತದೆ. (ಬಹುತೇಕ ಎಲ್ಲ ಭಾಷೆಗಳಿಗೂ ಅನ್ವಯವಾಗುವ ಸಾಮಾನ್ಯ ನಿಯಮವಿದು.)

ಪಾವುಡಂ = (ಸಂ., ಪ್ರಾಭೃತ) ಉಪಾಯನ, ಕಾಣಿಕೆ. ವಚನದೋಷ ವಿಶೇಷಮನ್ಯೈಪುಣೋಕ್ತಿಯಿಂ = (ವಿಶೇಷಂ + ಅನ್ಯೈಪುಣೋಕ್ತಿಯಿಂ) ಉಕ್ತಿಯಲ್ಲಿ ನಿಪುಣತೆಯಿಲ್ಲದ್ದರಿಂದ ಉಂಟಾದ ವಚನದೋಷಪ್ರಕಾರ.

ಪದ್ಯ ೧೧೯–೧೨೦ : ಈ ಎರಡು ಪದ್ಯಗಳಲ್ಲಿ 'ಜಾತ್ಯೇಕ ವಚನ' ಪ್ರಯೋಗಕ್ಕೂ 'ಸಂಖ್ಯಾ ಬಹುವಚನ' ಪ್ರಯೋಗಕ್ಕೂ ಲಕ್ಷ್ಯಲಕ್ಷಣ ಸಮನ್ವಯವನ್ನು ಕಾಣಿಸಿದೆ.

ಪ. ೧೧೯ರ ಪೂರ್ವಾರ್ಧದ ವಿವರಣೆ : ಯಾವುದೇ ಪ್ರಾಣಿಜಾತಿಯ ವಿಭಾಗವನ್ನು ಎಂದರೆ ಒಟ್ಟು ಜಾತಿಯನ್ನು ಅಥವಾ ಸಮುದಾಯವನ್ನು ಗಮನದಲ್ಲಿರಿಸಿಕೊಂಡು ಹೇಳುವಾಗ, ಅನೇಕ ವಾಕ್ಯಗಳಲ್ಲಿ ಅಥವಾ ಉಕ್ತಿಗಳಲ್ಲಿ ಹೇಳಿದರೆ 'ಗುಣ' ಎನ್ನಬಹುದಾದ ಬಹುತ್ವವು (ಎಂದರೆ ಬಹುವಚನವು) ಏಕವಚನದಲ್ಲಿಯೂ 'ದೊರೆವೆತ್ತು ಕೂಡುಗುಂ' (ಚೆನ್ನಾಗಿ ಹೊಂದಿಕೊಳ್ಳುತ್ತದೆ).

ಉದಾಹರಣೆ (ಪ.೧೨೦) : 'ಕುದುರೆ ಆ ದೆಸೆಯ ಬಿಲ್ಲವರಂ ತಗುಳ್ದುವು', 'ಸುಟಿದಾನೆನಿಂದು ಮೆಟ್ಟಿದುವು, ಎಲೆ, ನೋಡಿಂ' – ಇಲ್ಲಿ ಕುದುರೆ ಆನೆ ಎಂಬ ಕರ್ತೃಪದಗಳು ಏಕವಚನದಲ್ಲಿದ್ದರೂ ಜಾತಿವಾಚಕವಾದ್ದರಿಂದ, 'ಬಗೆಬಗೆಯ ಅನೇಕ ಕುದುರೆಗಳು' ಇತ್ಯಾದಿಯಾಗಿ ಅನೇಕ ವಾಕ್ಯಗಳಲ್ಲಿ ಹೇಳಬಹುದಾದ ಬಹುತ್ವದ ಅರ್ಥವನ್ನೆ ಒಳಗೊಂಡು, ಬಹುವಚನದ ಕ್ರಿಯಾಪದದೊಂದಿಗೆ 'ದೊರೆವೆತ್ತು' ಕೂಡಿಕೊಂಡಿದೆ. ಕನ್ನಡದ ದೇಸೀ ಪ್ರಯೋಗದಲ್ಲಿ ಇದು ದೋಷವೆನಿಸದೆ ಗುಣವೇ ಆಗುವುದು. ಹೇಗೆಂದರೆ – 'ಕುದುರೆ ತಗುಳ್ದುದು' ಎಂದು ಏಕವಚನ ಪ್ರಯೋಗವಾದರೆ, 'ಒಂದೇ ಕುದುರೆ' ಎಂದಾಗಿ ಅರ್ಥ ಕೆಡುವುದು ; 'ಕುದುರೆಗಳ್ ತಗುಳ್ದುವು' ಎಂದರೆ, ಕೆಲವೋ ಹಲವೋ ಕುದುರೆಗಳಾಗಬಹುದು. ಜಾತ್ಯೇಕ ವಚನ ಪ್ರಯೋಗದಿಂದ, 'ಒಂದನ್ನೂ ಬಿಡದೆ ಎಲ್ಲ ಕುದುರೆಗಳು' ಎಂದಾಗಿ ಅರ್ಥಸೌಂದರ್ಯವು ನೆಲೆಗೊಳ್ಳುವುದು. (ಆಂಗ್ಲಭಾಷೆಯಲ್ಲಿಯೂ ಇದು Collective singular ಎಂದು ರೂಢಿಗೊಂಡಿದೆ). (ನೋಡಿ : ಶ.ಮ.ದ., ಸೂ. ೧೩೮–೧೩೯)

ಪ.೧೧೯ರ ಉತ್ತರಾರ್ಧ : ಜಾತಿವಾಚಕವಾದ ಏಕವಚನವೆ ಬಹುತ್ವ

ಸೂಚಕವಾದ ಸಂಖ್ಯಾಪದದಿಂದ ವಿಶಿಷ್ಟವಾದಾಗ, ಬಹುವಚನದ ಅರ್ಥದಲ್ಲಿ ಏಕವಚನದ ಪ್ರಯೋಗವು ('ಏಕವಬಹುತ್ವವಿಪರ್ಯಯಂ') ಮೇಲ್ಕಂಡ ಗುಣವನ್ನು ವಿಕಲ್ಪವಾಗಿ ಹೊಂದಬಹುದೆ ಹೊರತು ಸಾಮಾನ್ಯವಾಗಿ ದೋಷವೆ ಎನಿಸುವುದು.

ಉದಾ. (ಪ.೧೨೦) : 'ಕುದುರೆ ನೂಱಱೊಳ್ ಆ ಬಲದ ಆನೆ ಪತ್ತು ತಾಗಿದುವು' ಎಂದರೆ ದೋಷ ; ಏಕೆಂದರೆ, 'ಪಿರಿದು ಸಂಖ್ಯೆಯೊಳ್ ಏಕಬಹುತ್ವ ಸಂಗದಿಂ.' 'ನೂರು, ಹತ್ತು' ಎಂಬ ಸಂಖ್ಯಾವಾಚಕಗಳು ಒಂದು ಕಡೆ ಹಿಂದಿನ 'ಕುದುರೆ ಆನೆ' ಎಂಬ ಏಕವಚನದೊಂದಿಗೂ, ಇನ್ನೊಂದು ಕಡೆ ಮುಂದಿನ 'ತಾಗಿದುವು' ಎಂಬ ಬಹುವಚನದ ಕ್ರಿಯೆಯೊಂದಿಗೂ ಸಂಗವಡೆದಿವೆ. ಈ ರೀತಿ, 'ಪಿರಿದು ಸಂಖ್ಯೆ'ಯಲ್ಲಿ ಏಕಕಾಲದಲ್ಲಿ ಏಕವಚನ ಬಹುವಚನಗಳ ಸಂಘಟನೆ ದೋಷ. (ಕೇವಲ 'ಆನೆ ಪತ್ತು' ಎಂದರೆ ದೋಷವಾಗದು ; 'ತಾಗಿದುವು' ಎಂಬ ಕ್ರಿಯಾಪದದೊಂದಿಗೆ ಕಾರಕವಾದಾಗಲೇ ದೋಷ.)

ಪದ್ಯ ೧೨೧ : ಪೂರ್ವಾರ್ಧದ ಅನ್ವಯಪೂರ್ವಕ ಅರ್ಥ : 'ಎರಡು ಸಮುಚ್ಚಯಯುಕ್ತ ಪದಗಳ ಉಕ್ತಿ ಮೊದಲು ಬೆರಸಿ ಬಂದಿದ್ದು, (ಆ ಎರಡು ಪದಗಳಲ್ಲಿ) ಒಂದೇ ವಿಭಕ್ತಿ (ಇಲ್ಲಿ ವಿಭಕ್ತಿ ಎಂದರೆ ವಚನಸೂಚಕ ಪ್ರತ್ಯಯ) ಕೂಡಿ ಕಾಣಬರದಿದ್ದರೂ, ಅವು ಏಕವಾಕ್ಯದಲ್ಲಿ 'ಕಾರಕ ಸಂಪದ'ವನ್ನು ಪಡೆಯುವುವು. ಉತ್ತರಾರ್ಧದಲ್ಲಿ ಲಕ್ಷ್ಯವಿದೆ : 'ನರಪತಿಯೂ ನೃಪಾಂಗನೆಯರೂ ನೆರೆದು ಅಟ್ಟೆಯಿಂ (ಪ್ರೀತಿಯಿಂದ) ಅಡಿಪೋದರು ; ಆ ಪರಿಜನವೂ ಮಹೋತ್ಸವದಲ್ಲಿ ಒಂದಿದುದು' (ಕೂಡಿಕೊಂಡಿತು ; ಭಾಗಿಯಾಯಿತು). – 'ಎಂಬುದು. ಇದು, ಅಲ್ಪದೂಷಿತಂ' (ಇಲ್ಲಿ ಕಾಣಬರುವ ವಚನಸಂಬಂಧವಾದ ವ್ಯಾಕರಣದೋಷ ಅಲ್ಪ : ಕಾರಕ ದೃಷ್ಟಿಯಿಂದ ಅರ್ಥಸಂಪತ್ತು ಕೂಡಿಬಂದಿರುವುದರಿಂದ ದೋಷ ಗಮನಾರ್ಹವಲ್ಲ – ಎಂದು ಮಾರ್ಗಕಾರನ ಅಭಿಪ್ರಾಯ.

ಮೇಲಿನ ದೃಷ್ಟಾಂತದಲ್ಲಿ, 'ನರಪತಿ ಆಡಿ ಪೋದಂ, ನೃಪಾಂಗನೆಯರ್ ಆಡಿಪೋದರ್ ; ಪರಿಜನಂ ಮಹೋತ್ಸವದೊಳ್ ಒಂದಿದುದು' – ಎಂಬೀ ಬೇರೆ ಬೇರೆ ವಾಕ್ಯಗಳು ಸಮುಚ್ಚಯ ('ಉಂ') ಬಲದಿಂದ ಏಕವಾಕ್ಯವಾಗಿ ಪರಿಣಮಿಸಿದೆ. 'ನರಪತಿ' ಏಕವಚನ ; 'ನೃಪಾಂಗನೆಯರ್'

ಬಹುವಚನ ; ಕ್ರಿಯಾಪದವು ಬಹುವಚನದಲ್ಲಿದ್ದು, ಬಹುವಚನದ ಕರ್ತೃವಿನೊಂದಿಗೆ (ನೃಪಾಂಗನೆಯರ್) ಅನ್ವಯವಾಗುತ್ತದೆ. ಆದರೆ ಏಕವಚನದ ಕರ್ತೃವಿನೊಂದಿಗೆ (ನರಪತಿ) ಅನ್ವಯವಾಗುವುದಿಲ್ಲ. ವ್ಯಾಕರಣವು ಸರಿಹೋಗಬೇಕೆಂದು ಮೇಲೆ ಸೂಚಿಸಿರುವ ರೀತಿಯಲ್ಲಿ ಬೇರೆ ಬೇರೆ ವಾಕ್ಯಗಳಾಗಿ ಒಡೆದರೆ, 'ನರಪತಿ ತನ್ನ ಪಾಡಿಗೆ ತಾನು ಆಡಿಹೋದ', 'ನೃಪಾಂಗನೆಯರು ತಮ್ಮ ಮಟ್ಟಿಗೆ ತಾವು ಆಡಿ ಹೋದರು' ಎಂದಾಗಿ ಅರ್ಥ ಸೌಂದರ್ಯಕ್ಕೇ ಊನಬರುತ್ತದೆ. ಆದ್ದರಿಂದ ಎರಡು ಕರ್ತೃಗಳನ್ನು 'ಉಂ' ಎಂಬ ಸಮುಚ್ಚಯದಿಂದ ಬೆರಸಿದರೆ, ವಚನವಿಭಕ್ತಿಗಳು (ಪ್ರತ್ಯಯಗಳು) ಕೂಡಿಬರದಿದ್ದರೂ, 'ನರಪತಿಯೂ ನೃಪಾಂಗನೆಯರೂ ಒಟ್ಟಿಗೆ ನೆರೆದು ಆಡಿಹೋದರು' ಎಂಬ ಉದ್ದಿಷ್ಟಾರ್ಥವು ಸುವ್ಯಕ್ತವಾಗುತ್ತದೆ.[೧೪]

---

೧೪. ಮಾರ್ಗಕಾರನು ಕರ್ತೃವನ್ನು ಸೇರಿಸಿಲ್ಲ ಎಂದು ಹಿಂದೆ ಕಂಡುಕೊಂಡಿದ್ದೇವೆ. ಇಲ್ಲಿ, 'ನರಪತಿ ಮತ್ತು ನೃಪಾಂಗನೆಯರ್' – ಇವೆರಡೂ ಕರ್ತೃಗಳು ; ಇವು 'ಕಾರಕಸಂಪದಮಂ ತಗುಳ್ಚುಗುಂ' ಎಂದದ್ದರಿಂದ ಕರ್ತೃವಿಗೆ ಕಾರಕತ್ವವನ್ನು ಆರೋಪಿಸಿದಂತಾಗುವುದಲ್ಲವೆ ? – ಎಂಬ ಸಂದೇಹ ತಲೆದೋರುವುದು ಸಹಜ. ಮುಳಿಯ ತಿಮ್ಮಪ್ಪಯ್ಯನವರು ತಮ್ಮದೇ ಆದ ಜಾಣ್ಮೆಯ ರೀತಿಯಲ್ಲಿ ಈ ಸಂದೇಹವನ್ನು ನಿವಾರಿಸಲು ಪ್ರಯತ್ನಪಟ್ಟಿದ್ದಾರೆ. ಅವರ ವಾದದ ಸಾರಾಂಶ : ಕ್ರಿಯಾಪದವು ಬಹುವಚನದಲ್ಲಿರುವುದರಿಂದ 'ನರಪತಿ' ಎಂಬುದೊಂದೇ ಏಕವಾಕ್ಯದಲ್ಲಿ ಅದರ ಕರ್ತೃವಾಗಲಾರದು. "ಅದನ್ನು ಉಳಿದ ಕರ್ತೃಪದದ ಅಥವಾ ಕರ್ತೃಪದಗಳ ಜತೆಗೆ ಸೇರಿಸುವುದು ಆ ಸಮುಚ್ಚಯಪದ. ಹಾಗೆ ಸಮುಚ್ಚಯ ಪದಗಳ ಕೂಟದಿಂದ ಆಯಾ ಪದಗಳು ಏಕವಾಕ್ಯದಲ್ಲಿ ತಂತಮ್ಮ ಕರ್ತೃತ್ವವನ್ನುಳಿದು ಕಾರಕಗಳೇ ಆಗಿ ಪರಿಣಮಿಸುವುದು ನ್ಯಾಯವಿದೆ. ಎಂದರೆ ಕ್ರಿಯೆಯನ್ನು ಒಂದೊಂದಾಗಿ ಮಾಡಲಾರದೆ ಎರಡೂ ಕೂಡಿ ಮಾಡಿಸುವ ಕಾರಕತ್ವವನ್ನೊಂದಿದುವು ಎನ್ನಬೇಕು."

'ನರಪತಿ ಆಡಿಪೋದಂ,' 'ನೃಪಾಂಗನೆಯರ್ ಆಡಿಪೋದರ್' ಎಂಬುದಾಗಿ ಬೇರೆ ಬೇರೆ ವಾಕ್ಯಗಳಲ್ಲಿಯಾಗಿದ್ದರೆ, ನಾವು ಹಿಂದೆ ಸೂಚಿಸಿರುವ ಪ್ರಕಾರ (ಪು. ೧೬೮, ೧೭೨ – ನೋಡಿ), ಈ ಕರ್ತೃಪದಗಳು ಕಾರಕಗಳೆನಿಸುವುದಿಲ್ಲ. ಆದರೆ, ಸಮುಚ್ಚಯ ವಶದಿಂದ ಎರಡು ಕರ್ತೃಗಳೂ ಒಂದೇ ವಾಕ್ಯದಲ್ಲಿ ಸೇರ್ಪಡೆಯಾಗಿರುವುದರಿಂದ, ಏಕವಚನದ 'ನರಪತಿ' ಎಂಬ ಕರ್ತೃಪದವು 'ಆಡಿಪೋದರ್' ಎಂಬ ಬಹುವಚನದ ಕ್ರಿಯೆಯೊಂದಿಗೆ ಸಂಬಂಧಪಡೆದಿದೆ. ಕ್ರಿಯೋಪದದ 'ಅರ್' ಎಂಬ ಪ್ರತ್ಯಯ 'ನರಪತಿ' ಎಂಬ ಕರ್ತೃವನ್ನು ಎಷ್ಟು ಮಾತ್ರಕ್ಕೂ ಸೂಚಿಸುವುದಿಲ್ಲ. ಇಲ್ಲಿ, ಸಮುಚ್ಚಯದ ಬಲದಿಂದ 'ನರಪತಿ' ಎಂಬ ಕರ್ತೃವಿಗೂ 'ಆಡಿಪೋಗು' ಎಂಬ ಕ್ರಿಯೆಗೂ ನ್ಯಾಯವಾಗಿ ಇಲ್ಲದ ಸಂಬಂಧವೊಂದು ಏರ್ಪಟ್ಟಿದೆ. ಇದೆ ಇಲ್ಲಿನ 'ಕಾರಕ ಸಂಪದ' – ಇದು ನಮ್ಮ ವಿವರಣೆ.

ಪದ್ಯ ೧೨೨ : 'ಎಣಿಕೆಗೆ ಅನುಸಾರವಾಗಿ ಕೂಡಿಕೊಂಡು ಬರುವ ಪದವೊಂದು ನಡುವೆ ಬಂದು, ವಿಶೇಷ್ಯವನ್ನೂ ವಿಶೇಷಣವನ್ನೂ ಹೊಂದಿಕೆಯಾಗುವಂತೆ ಸೇರಿಸದಿದ್ದರೂ ಅದು ಕಾರಕದೋಷವಲ್ಲ'. (ಇಲ್ಲಿ ಲಕ್ಷ್ಯಪದ್ಯವನ್ನು ಪ. ೧೨೩ – ಗಮನಿಸಬೇಕು : ಗುಣಯುತನಪ್ಪನಂ ಸುಭಟನಪ್ಪನಂ... ಇತ್ಯಾದಿ ವಿಶೇಷಣ ಮಾಲೆಯಲ್ಲಿ 'ಅಪ್ಪನಂ' ಎಂಬ ಪದವು 'ಎಡೆಗೊಂಡು' ಬಂದಿದೆ. ಪ್ರತಿವಿಶೇಷಣದ ಮುಂದೆಯೂ ಇರಬೇಕಾದ ವಿಶೇಷ್ಯವು ಯಾವುದೆಂಬುದು ಪದ್ಯದಲ್ಲಿ ಎಲ್ಲಿಯೂ ಉಕ್ತವಾಗಿಲ್ಲ. 'ಅದೆ ತಾಣದೊಳ್' ಎಂದರೆ 'ಆ ವಿಶೇಷ್ಯವು ಇರಬೇಕಾದ ಎಡೆಯಲ್ಲಿ' 'ಪದಾಂತರೀಕರಣ'ವಾಗಿದೆ. ಎಂದರೆ 'ಅಪ್ಪನಂ' ಎಂಬ ಬೇರೆಯ ಪದದಿಂದ ಸೂಚಿತವಾಗಿದೆ.) ಹೀಗೆ 'ಅಂತು ಅದೆ ತಾಣದೊಳ್ ಪದಾಂತರೀಕರಣಂ ಆದೊಡಂ ಮಹಾ ಗುಣಮನೆ ತರ್ಕುಂ' ; 'ಏಕಬಹುಭೇದವಿಕಲ್ಪಮಂ ಅಲ್ಲಿ ನೋಡಲಿಂ' (ನೋಡಲಿಂ = ನೋಡಬೇಡಿ). ಇಲ್ಲಿ ಬೇರೆ ಬೇರೆ ವಿಶೇಷಣಗಳು ಬಹುವಚನವನ್ನು ಸೂಚಿಸುತ್ತಿದ್ದರೂ, ಎಲ್ಲ ವಿಶೇಷಣಗಳಿಗೂ ಸರ್ವಸಮಾನವಾಗಿ ತಗುಳಿಕೊಂಡಿರುವ 'ಅಪ್ಪನಂ' ಎಂಬ ಕರ್ಮಕಾರಕವು ಏಕವಚನದಲ್ಲಿದ್ದರೂ, ಇದು ಕಾರಕದೋಷವಲ್ಲ ; ಇದು 'ಮಹಾಗುಣ'ವೇ ಆಗಿದೆ ; ವಚನಭೇದವನ್ನು ಗಮನಿಸಬೇಕಾಗಿಲ್ಲ.

ಪದ್ಯ ೧೨೪ : ಈ ಲಕ್ಷ್ಯಪದ್ಯದಲ್ಲಿ, 'ಮುಗಿಲ್ಗಳಂ' 'ಪೆರ್ಮಟೆಯುಂ' ಮುಂತಾಗಿ ಕರ್ತೃಗಳಾಗಿರುವ ವಿಶೇಷ್ಯಗಳೆಲ್ಲವೂ ತಮ್ಮ ತಮ್ಮ ('ನೆಗೆದ', 'ಸುರಿವ' ಇತ್ಯಾದಿ) ವಿಶೇಷಣಗಳೊಡನೆ ಬೇರೆ ಬೇರೆ ವಚನಗಳಲ್ಲಿದ್ದರೂ 'ತೋಱಿ' ಎಂಬ ಕ್ರಿಯೆಯೊಂದಿಗೆ (ಏಕ ಬಹುತ್ವ ವಿಕಲ್ಪವನ್ನು ಹೊಂದಿದ್ದರೂ) ಸಮುಚ್ಚಯ ಬಲದಿಂದ ಕಾರಕತ್ವವನ್ನು ಹೊಂದಿವೆ.

ಪದ್ಯ ೧೨೫ : ಇದುವರೆಗೆ ಹೇಳಿದ ಕಾರಕ ಗುಣದೋಷಗಳನ್ನು ಪರಿಭಾವಿಸಿ ಇಂಥ ಬೇರೆಯವುಗಳನ್ನು ಕವಿಗಳು ಕೃತಿಗಳ ಪರಿಶೀಲನೆಯಿಂದ ತಿಳಿದುಕೊಳ್ಳಲಿ ಎಂದು ಸೂಚಿಸಿದ್ದಾನೆ.

ಪದ್ಯ : ೧೨೬ – ೧೩೦ : ಈ ಪದ್ಯಗಳಲ್ಲಿ ಮಾರ್ಗಕಾರನು ಗುರುಲಘು ದೋಷಗಳ ಲಕ್ಷ್ಯಲಕ್ಷಣಗಳನ್ನು ಕೊಟ್ಟಿದ್ದಾನೆ. ಛಂದೋದೋಷಕ್ಕೆ ಸಂಬಂಧಪಟ್ಟ ವಿವೇಚನೆಯಿದು. ಗುರು ಇರಬಾರದ (ಎಂದರೆ ಲಘು ಇರಬೇಕಾದ) ಕಡೆ ಗುರುವನ್ನು ಇಟ್ಟರೆ ದು ಗುರುದೋಷ ; ಅದೇ

ರೀತಿಯಲ್ಲಿ ಲಘು ಇರಬಾರದ (ಎಂದರೆ ಗುರು ಇರಬೇಕಾದ) ಕಡೆ ಲಘುವನ್ನು ಉಪಯೋಗಿಸಿದರೆ ಅದು ಲಘುದೋಷ.

ಗುರುದೋಷಕ್ಕೆ ಉದಾಹರಣೆ (ಪ. ೧೨೮) : (ಇದು 'ಮಣಿಭೂಷಣ' ವೃತ್ತ) ಈ ವೃತ್ತದ ಗಣಪ್ರಸ್ತಾರ :

– U – | UUU | – UU | – UU | – U – |

ಪಾದ ೧ರ ಪ್ರಸ್ತಾರ :

– U – | UUU | – UU | – –U | –UU |

ಪಾದ ೪ರ ಪ್ರಸ್ತಾರ :

UU– | UUU | UUU | – UU | – U – |

೧ನೆಯ ಪಾದದಲ್ಲಿ ಕೊನೆಯ ಗಣದಲ್ಲಿಯೂ, ೪ನೆಯ ಪಾದದಲ್ಲಿ ಮೊದಲನೆಯ ಹಾಗೂ ಮೂರನೆಯ ಗಣಗಳಲ್ಯೊ ಗುರುಇರಬೇಕಾದ ಕಡೆ ಲಘುಪ್ರಯೋಗವಾಗಿರುವುದನ್ನು ಕಾಣಬಹುದು. **ಆದ್ದರಿಂದ ನಿಜವಾಗಿ ಇದು ಲಘುದೋಷಕ್ಕೆ ಉದಾಹರಣೆ.**

ಲಘುದೋಷಕ್ಕೆ ಉದಾಹರಣೆ (ಪ.೧೩೦) : (ಇದು 'ಮಂಗಳ' ವೃತ್ತ)[೧೫] ಈ ವೃತ್ತದ ಗಣಪ್ರಸ್ತಾರ :

UUU | –UU | U – U | U – U | U – U | –

ಈಗಿರುವಂತೆ ಈ ವೃತ್ತದಲ್ಲಿ ಛಂದೋದೋಷವಾವುದೂ ಇಲ್ಲ ; ಎರಡು ಮುದ್ರಿತ ಪ್ರತಿಗಳ ಪಾಠವೂ ಒಂದೇ ತೆರನಾಗಿದೆ. ಮಾರ್ಗಕಾರನು – 'ಸಾಯಲಾಬಲಮೆಲ್ಲಂ' (೧ನೆಯ ಪಾದ), 'ಬೀಳ್ವವೋಲ್' (೩ನೆಯ ಪಾದ), 'ತಿರವೇೞ್' ಎಂದು ಛಂದೋದೋಷವಾಗುವಂತೆಯೆ ಬರೆದಿದ್ದಿರಬೇಕು. (ತದನುಗುಣವಾಗಿ ಪದ್ಯದ ಪಾಠವನ್ನು ನಾವೀಗ ತಿದ್ದಿಕೊಳ್ಳಬೇಕು). ಪಂಡಿತ ಪ್ರತಿಕಾರನೊಬ್ಬನು ಈ ಪದ್ಯವು ಛಂದೋದೋಷಕ್ಕೆ ಲಕ್ಷ್ಯ ಎಂಬುದನ್ನು ಬಗೆಯದೆ, ಗುರುವಾಗಿದ್ದ ಅಕ್ಷರಗಳನ್ನೆಲ್ಲ ಲಘುವಾಗಿ ಮಾರ್ಪಡಿಸಿರಬೇಕು. ಮೇಲೆ ಸೂಚಿಸಿರುವಂತೆ ಪಾಠವನ್ನು ತಿದ್ದಿದರೆ, ಲಘು ಇರಬೇಕಾದೆಡೆಯಲ್ಲಿ ಗುರು ಪ್ರಯೋಗವಾಗಿರುವುದನ್ನು ಕಾಣಬಹುದು. **ಆಗ, ಇದು ವಾಸ್ತವವಾಗಿ**

---

೧೫. 'ಈ ವೃತ್ತದ ಹೆಸರು ಯಾವ ಛಂದಶಾಸ್ತ್ರದಲ್ಲಿಯೂ ಉಕ್ತವಾಗಿಲ್ಲ' ಎಂದು ಮದ್ರಾಸು ಮುದ್ರಣದ ಸಂಪಾದಕರು ಸೂಚಿಸಿದ್ದಾರೆ. (ಮ.ಮು., ಪು.೨೭, ಅಡಿಟಿಪ್ಪಣಿ)

**ಗುರುದೋಷಕ್ಕೆ ಉದಾಹರಣೆಯಾಗಿ ಕಂಡುಬರುತ್ತದೆ.**

ಪ್ರತಿಕಾರರ ದೋಷದಿಂದಲೋ ಮತ್ತಾವ ಕಾರಮದಿಂದಲೋ ಲಕ್ಷ್ಯಪದ್ಯಗಳು (೧೨೮ ಮತ್ತು ೧೩೦) ಹಿಂದುಮುಂದಾಗಿರುವಂತೆ ಕಂಡುಬರುತ್ತದೆ.

(ಮೇಲೆ ಸೂಚಿಸಿರುವಂತೆ ತಿದ್ದುಪಡಿಗಳನ್ನು ಮಾಡಿಕೊಳ್ಳದೆ ಹೋದರೆ, ಲಕ್ಷ್ಯಲಕ್ಷಣ ಸಮನ್ವಯ ಮಾಡಲಾಗುವುದಿಲ್ಲ).

ಪದ್ಯ ೧೨೯ : ಕುಱಿಪು = ಲಕ್ಷಣ, ಕುರುಹು. ಕುಱಿಗೊಂಡು = ಗುರಿಯಾಗಿಟ್ಟುಕೊಂಡು, ಲಕ್ಷಿಸಿ, ಗಮನಿಸಿ, ಪಿಂಗಿಸು = ಹೋಗಲಾಡಿಸು, ಕಳೆ.

ಪದ್ಯ ೧೩೧ : ಈ ಪದ್ಯದಲ್ಲಿ 'ಸಮುಚ್ಚಯ ದೋಷ'ವನ್ನು ಪ್ರಸ್ತಾವಮಾಡಲಾಗಿದೆ. ಕಾರಕಗಳನ್ನು ಸಮುಚ್ಚಯಗಳೊಂದಿಗೆ ಪ್ರಯೋಗಿಸುವಾಗ ಸಮುಚ್ಚಯ ವಿಕಲ್ಪವಾಡುವುದರಿಂದಲೂ, 'ಸಮುಚ್ಚಯ ಯುಗ್ಮ'ಗಳಲ್ಲಿ ಕ್ರಮಭಂಗವಾಗುವುದರಿಂದಲೂ ಈ ದೋಷ ಸಂಘಟಿಸುತ್ತದೆ. ಲಕ್ಷ್ಯಪದ್ಯದಿಂದ (೧೩೨) ಇದು ಸ್ಪಷ್ಟವಾಗುತ್ತದೆ : 'ದೇವರುಂ ಗೊರವರುಂ ಗುಣವೃದ್ಧರ್ ಅನಾರತಂ ಕಾವರ್ ಅಕ್ಕೆ ಅರಸನಂ ಪ್ರಜೆಯಂ ಪರಿವಾರಮಂ.' ಇದು ದೋಷಯುಕ್ತವಾದ ಪ್ರಯೋಗ. ಮಾರ್ಗಕಾರನೇ ತಿದ್ದಿ ಬರೆದಿರುವ ಲಕ್ಷ್ಯದಿಂದ (ಪ. ೧೩೩) ದೋಷವೇನೆಂಬುದು ಸ್ಪಷ್ಟವಾಗುತ್ತದೆ ; 'ನೃಪನುಮಂ ಪ್ರಜೆಯುಮಂ ಪರಿವಾರಮುಮಂ ಆ ಗೊರವರುಂ ಸುರರುಂ ಗುಣವೃದ್ಧರುಂ ರಾಗಪರರಾಗಿಸುಗೆ.' ದೇವರುಂ – ಗೊರವರುಂ – ಗುಣವೃದ್ಧರ್ : ಇದೊಂದು ಕರ್ತೃಪದಗಳ ಸಮುಚ್ಚಯ; 'ಗುಣವೃದ್ಧರ್' ಎಂಬುದಕ್ಕೆ 'ಉಂ' ಎಂಬ ಸಮುಚ್ಚಯ ಸೇರದಿರುವುದು ಒಂದು ದೋಷ. ಅರಸನಂ – ಪ್ರಜೆಯಂ – ಪರಿವಾರಮಂ : ಇದು ಇನ್ನೊಂದು ಕರ್ಮಕಾರಕಗಳ ಸಮುಚ್ಚಯ ; ಮೂರು ಕರ್ಮಪದಗಳಿಗೂ 'ಉಂ' ಸೇರದಿರುವುದು ಮತ್ತೊಂದು ದೋಷ. ದುಷ್ಟವಾದ ಲಕ್ಷ್ಯದಲ್ಲಿ – 'ದೇವರು ಅರಸನನ್ನೂ, ಗೊರವರು ಪ್ರಜೆಯನ್ನೂ, ಗುಣವೃದ್ಧರು ಪರಿವಾರವನ್ನೂ ಕಾಪಾಡಲಿ' ಎಂಬ ಕ್ರಮಕಲ್ಪನೆಯಿದೆ. ತಿದ್ದಿದ ಲಕ್ಷ್ಯದಲ್ಲಿ, 'ನೃಪವನ್ನು ಗೊರವರೂ ಪ್ರಜೆಯನ್ನು ಸುರರೂ ಪರಿವಾರವನ್ನು ಗುಣವೃದ್ಧರೂ ರಾಗಪರರಾಗಿಸಲಿ' ಎಂದು ಕ್ರಮದಲ್ಲಿ ವ್ಯತ್ಯಾಸಮಾಡಲಾಗಿದೆ. ಸಮುಚ್ಚಯ ಯುಗ್ಮಗಳಲ್ಲಿ ಕರ್ತೃ–

ಕರ್ಮಗಳ ಕ್ರಮಭಂಗವಾದರೆ ಅರ್ಥಪ್ರತೀತಿಗೆ ಭಂಗವುಂಟಾಗುತ್ತದೆ. (ಹಿಂದೆ, ಚ್ಯುತ ಯಥಾಸಂಖ್ಯ ದೋಷದಲ್ಲಿಯೂ ಈ ಕ್ರಮಭಂಗವನ್ನು ಕಾಣಿಸಿದೆ. ಪ. ೮೬–೮೯ ನೋಡಿ).

ಕೀೞಿಕೊಳ್ = (ಧಾ., ಕೀೞು *(=ಕೇೞು?) ಸಂಗ್ರಹಿಸು, ಬೇರ್ಪಡಿಸು (?) ನೆಲ್ಲು = ಬತ್ತ. ಪೊಳ್ = ಹೊಳ್ಳುಗಾಳು, ಜೊಳ್ಳು. ಗೊರವ = ಗುರು, ಮುನಿ (?) ; ಶೈವಭಿಕ್ಷುಕ, ಬೈರಾಗಿ. (ಈಚಿನ ಕಾವ್ಯಪ್ರಯೋಗಗಳಲ್ಲಿ 'ಗೊರವ' ಎಂಬುದಕ್ಕೆ 'ಶಿವ' ಎಂಬ ಅರ್ಥವೂ ಬಂದಿದೆ. 'ಗೊರವ' : 'ಗುರವಃ' ಎಂಬ ಸಂಸ್ಕೃತ ಬಹುವಚನ ಶಬ್ದದ ರೂಪಾಂತರವೆಂಬ ಊಹೆಯೂ ಇದೆ. ಏವ = ಅಸಹ್ಯಕರವಾದದ್ದು, ಜಿಗುಪ್ಸೆಯುಂಟುಮಾಡತಕ್ಕದ್ದು.

ಪದ್ಯ ೧೩೪ : ಈ ಪದ್ಯದಲ್ಲಿ ಸಮುಚ್ಚಯ ಗುಣದೋಷ ವಿಚಾರವನ್ನು ಮುಂದುವರಿಸಲಾಗಿದೆ. ಈ ಮುಂಚಿನ ಲಕ್ಷ್ಯಗಳಲ್ಲಿ ಹಲವು ಕಾರಕಗಳಲ್ಲಿ ಒಂದು ಕ್ರಿಯಾಪದವು ಪ್ರವರ್ತಿಸಿದಾಗ ಸಮುಚ್ಚಯ ದೋಷವು ಹೇಗೆ ಸಂಘಟಿಸುತ್ತದೆಯೆಂಬುದನ್ನು ನಿರ್ದೇಶಿಸಿದೆ. ಈ ಪದ್ಯದ ಲಕ್ಷ್ಯಭಾಗದಲ್ಲಿ,[೧೬] 'ಕಾರಕದಲ್ಲಿ ಕ್ರಿಯೆ ತಳ್ತು (ಜೊತೆಗೂಡಿ), ಬೇರೆಬೇರೆಯಾಗಿ ನಿಂತ ಸಂದರ್ಭದಲ್ಲಿ, ಈ ಮೊದಲು ತಿಳಿಯಹೇಳಿದ ಅವಗುಣವೇ (ಎಂದರೆ, ಸಮುಚ್ಚಯಾಭಾವದ ದೋಷವೇ) ಗುಣವಾಗಿ

---

* ವಿಶೇಷ ಟಿಪ್ಪಣಿ ೧, ೪ (ಅನುಬಂಧ – ೮) ನೋಡಿ (ಆವೃತ್ತಿ ೧೯೬೮)

೧೬ : ಎರಡು ಮುದ್ರಿತ ಪ್ರತಿಗಳಲ್ಲಿಯೂ ಇರುವ ಪಾಠ :

"ಸಾಱುಗಾನೆಯವರೆಲ್ಲರುಮಂ ನೃಪಾನಾನೆ ಮ
ತ್ತೇಱುವೆ ಪಣಿದೊಡಾನೆಯನೆಂಬುದು ದೂಷಿತಂ."

ಮದ್ರಾಸು ಮುದ್ರಣದಲ್ಲಿ ಮಾತ್ರ 'ನೃ ಪನಾನೆ' ಎಂಬಲ್ಲಿ 'ನೃಪತಾನೆ' ಎಂಬ ಪಾಠವಿದೆ. 'ಏಱುವೆಂ' ಎಂದು ಪಾಠವನ್ನು ಇಟ್ಟುಕೊಂಡರೆ, ಅದಕ್ಕೆ ಉತ್ತಮ ಪುರುಷದ ಕರ್ತೃ ಯಾವುದೂ ಇಲ್ಲ. 'ಏಱುವಂ' ಎಂದು ತಿದ್ದಿದರೆ, 'ನೃಪತಾನೆ' ಕರ್ತೃವಾಗುತ್ತದೆ. ಮಾರ್ಗಕಾರನು ಪದ್ಯದ ಪೂರ್ವಾರ್ಧದಲ್ಲಿ 'ಅವಗುಣಂ ಗುಣರೂಪದೆ ಪೊರ್ದುಗುಂ' ಎದು ಸ್ಪಷ್ಟವಾಗಿ ಹೇಳಿರುವುದರಿಂದ 'ಎಂಬುದು ದೂಷಿತಂ' ಎಂಬ ಪಾಠ ಅವನ ಆಶಯಕ್ಕೆ ಭಂಗ ತರುತ್ತದೆ ; ಆದ್ದರಿಂದ, 'ಎಂಬುದದೂಷಿತಂ' (ಎಂಬುದು + ಅದೂಷಿತಂ) ಎಂಬ ಅಲ್ಪವ್ಯತ್ಯಾಸವನ್ನು ಮಾಡಿದೆ. ದ್ವಿತೀಯಾಕ್ಷರ ಪ್ರಾಸ ಶಕಟರೇಫವಾದ್ದರಿಂದ, 'ಸಾಱುಗೆ' ಎಂಬ ಪದವನ್ನು 'ಸಾರುಗೆ' (ಸಮೀಪಿಸಲಿ) ಎಂದು ಬೇರೆಯ ಅರ್ಥಬರುವಂತೆ ಮಾರ್ಪಡಿಸಲು ಅವಕಾಶವಿಲ್ಲ.

ಪರಿಣಮಿಸುವುದು' ಎಂಬ ವಾಕ್ಯರಚನಾ ವೈಶಿಷ್ಟ್ಯವನ್ನು ಮಾರ್ಗಕಾರನು ಸ್ಪಷ್ಟಪಡಿಸಿದ್ದಾನೆ.

ಲಕ್ಷ್ಯಭಾಗದ ಅನ್ವಯ : 'ಆನೆಯವರೆಲ್ಲರುಮಂ ಸಾಱುಗೆ ; ಆನೆಯಂ ಪಣಿದೊಡೆ, ನೃಪ ತಾನೆ ಮತ್ತೇಱುವಂ' ಇದು (ಸೇನಾಧಿಕಾರಿಯೊಬ್ಬನ ಅಣತಿಯಂತಿದೆ : 'ಆನೆಯವರೆಲ್ಲರಿಗೂ ಘೋಷಿಸಲಿ (ಡಂಗೂರದ ಮೂಲಕ ಸಾರಲಿ) ; ಆನೆಯನ್ನು ಸಜ್ಜುಗೊಳಿಸಿದರೆ, ಅದನ್ನು ನೃಪನು ತಾನೇ ಮತ್ತೆ ಏರುವನು' – ಇದಿಷ್ಟು ಲಕ್ಷ್ಯದ ತಾತ್ಪರ್ಯ. ('ಆ ನೆ ಯ ವ ರೆ ಲ್ಲ ರು ಮಂ' ತಿಳಿಯಬೇಕು). ಇಲ್ಲಿ ಕ್ರಿಯೆ (ಸಾಱುಗೆ, ಪಣಿದೊಡೆ, ಏಱುವಂ – ಎಂಬ ಕ್ರಿಯಾಪದಗಳು) ಬೇರೆ ಬೇರೆ ಕಾರಕಗಳನ್ನು ತಳ್ತು ಬೇರೆ ಬೇರೆ ನಿಂತು, ಸಮುಚ್ಚಯದ ಅಭಾವದಿಂದ ಬೇರೆ ಬೇರೆ ವಾಕ್ಯಗಳಾಗಿದ್ದರೂ, ಏಕವಾಕ್ಯದಂತೆಯೇ ಅಖಂಡವಾದ ಅರ್ಥಪ್ರತೀತಿಯನ್ನು ಕೊಡುವ ಗುಣರೂಪವನ್ನೆ ಹೊಂದಿದೆ – ಎಂದು ಅರಿಯಬೇಕು.

ಪದ್ಯ ೧೩೫–೧೩೬ : ಈ ಎರಡು ಪದ್ಯಗಳಲ್ಲಿ 'ವಿಕಲ್ಪ'ದ (alternation) ದೋಷಕ್ಕೂ ಗುಣಕ್ಕೂ ಲಕ್ಷ್ಯಗಳನ್ನು ಕೊಟ್ಟಿದೆ. ಲಕ್ಷ್ಯಗಳಿಂದ ಲಕ್ಷಣದ ಸ್ವರೂಪವನ್ನು ಅರಿತುಕೊಳ್ಳಬೇಕು.

"ಅವರೆಲ್ಲರುಂ ಒಸೆಗೆ ಮೇಣ್, ಮುನಿಗೆ ಮೇಣ್, ಬಗ್ಗಿಸುಗೆ ಮತ್ತೆ, ಮಾನಸರ್ ನೆಟ್ಟನೆ ಪೂಣ್ದುದಂ ಪುಸಿವರಾಗಿರದೆ ಉಟಿಯಲಾಗದು" – ಇದು ದೋಷಕ್ಕೆ ಉದಾಹರಣೆ. 'ಮೇಣ್' (ಇಲ್ಲವೆ, ಅಥವಾ) ಎಂಬ ವಿಕಲ್ಪಾರ್ಥವನ್ನು ಕೊಡುವ ಪದವನ್ನು ಬಳಸುವಲ್ಲಿ 'ಮತ್ತೆ' (ಇನ್ನು, ಪುನಃ) ಎಂಬ ಬೇರೆಯ ಪದವನ್ನು ಬಳಸಿರುವುದರಿಂದ ವಿಕಲ್ಪಾರ್ಥ ಪ್ರತೀತಿಗೆ ಕೊನೆಯಲ್ಲಿ ಭಂಗವುಂಟಾಗಿದೆ. ಮುಂದಿನ ಲಕ್ಷ್ಯಪದ್ಯದಲ್ಲಿ ಈ ದೋಷವನ್ನು ಸರಿಪಡಿಸಿರುವ ರೀತಿಯನ್ನು ಗಮನಿಸಿ: 'ಅವರೆಲ್ಲರುಂ ಪಟಿಗೆ ಮೇಣ್ ಪೊಗಟ್ಗೆ ಮೇಣ್, ನೆವಮಿಲ್ಲ ದೊಡಿಂತು ಕೈಗಟಿಯೆ ಬಗ್ಗಿಸುವಗೆ ಮೇಣ್, ಅಂತುಂ ಆನುಟಿವೆನಲ್ಲೆಂ.'

ಒಸೆ = ಸಂತೋಷಿಸು, ಪ್ರೀತಿಸು ('ಪ್ರಸನ್ನತ್ವೇ' : ಶ.ಮ.ದ.) ಬಗ್ಗಿಸು = ಝುಂಕಿಸು, ಆಕ್ಷೇಪಿಸು. ಪೂಣ್ = ಪ್ರತಿಜ್ಞೆಮಾಡು. ಪಟಿ = ನಿಂದಿಸು. ಕೈಗಟಿ = ಮಿತಿಮೀರು ('ಅತಿಕ್ರಮಣೇ' = ಶ.ಮ.ದ)

ಪದ್ಯ ೧೩೮ : ಇದರಲ್ಲಿ 'ಅವಧಾರಣೆ' ಹಾಗೂ 'ವಿಶಂಕೆ'ಯ ಗುಣದೋಷಗಳನ್ನು

ನಿರೂಪಿಸಿದೆ. ‘ಅವಧಾರಣವು (ಒತ್ತಿ ಹೇಳುವುದು, emphasis) ಅನ್ವಯ (ವಂಶ), ಜಾತಿ, ಗುಣ, ಕ್ರಿಯೆ ಇವುಗಳನ್ನು ಅವಲಂಬಿಸಿರುತ್ತದೆ.’ ವ್ಯಕ್ತಿ ವಿಶಿಷ್ಟವಾದ ಲಕ್ಷಣವನ್ನು ಒತ್ತಿ ಇಲ್ಲವೆ ಎತ್ತಿ ಹೇಳಬೇಕಾದ ಸಂದರ್ಭದಲ್ಲಿ ‘ಅವಧಾರಣ’ವನ್ನು ಪ್ರಯೋಗಿಸುವುದು ರೂಢಿ. ಸಂಸ್ಕೃತದಲ್ಲಿ ‘ಏವಂ’, ‘ಮಾತ್ರಂ’ ಮುಂತಾದ ಅವ್ಯಯಗಳ ತೆರದಲ್ಲಿ ‘ಕನ್ನಡದ ‘ಎ’, ‘ಏ’ ಎಂಬ ಅಕ್ಷರಗಳನ್ನು ಬಳಸಲಾಗುತ್ತದೆ. ಪದ್ಯದ ಉತ್ತರಾರ್ಧ ‘ವಿಶಂಕಾ’ ಗುಣದೋಷಕ್ಕೆ ಸಂಬಂಧಪಟ್ಟದ್ದು. ‘ನಯ ನಿಯೋಗ ವಿಕಲ್ಪನೆ’ = ಅದೋ ಇದೋ ವಿಕಲ್ಪನೆ ಮಾಡುವಲ್ಲಿ, ಸಂದೇಹಾರ್ಥವೃತ್ತಿಯನ್ನು ಸುಸಂಬದ್ಧವಾಗಿ ಪದದಿಂದ ಪದಕ್ಕೆ ಕೊಂಡೊಯ್ಯುವುದು. (?) ‘ವಿಶಂಕೆ’ ಎಂದರೆ ‘ಸಂದೇಹ’ ಸೂಚನೆ.

ಪದ್ಯ ೧೩೯–೧೪೦ : ‘ಅವಧಾರಣೆ’ಯ ‘ದೋಷ–ಗುಣ’ಗಳಿಗೆ ಲಕ್ಷ್ಯಗಳು : ‘ಕುಲಜನೀತನೆ ಪಂಡಿತನೀತಂ ಉಜ್ಜ್ವಲ ಯಶೋಧಿಕನೀತನೆ ತಿಬ್ಬಂ’. – ಒಬ್ಬ ವ್ಯಕ್ತಿಯ ವಂಶ ಜಾತಿ ಗುಣಗಳನ್ನು ಇಲ್ಲಿ ಒತ್ತಿ ಹೇಳುವಾಗ ಎರಡನ್ನು ಒತ್ತಿ ಹೇಳಿ ಒಂದನ್ನು ‘ಪಂಡಿತನೀತಂ’ ಎಂದು ಅವಧಾರಣ ಮಾಡದಿರುವುದು ದೋಷ. ಇದರಿಂದ, ವಾಕ್ಯಬಂಧವು ಶಿಥಿಲವಾಗಿರುವುದು ಮಾತ್ರವಲ್ಲ, ವ್ಯಕ್ತಿಯ ವ್ಯಕ್ತಿತ್ವವೇ ಮುಕ್ಕಾದಂತೆ ಭಾಸವಾಗುತ್ತದೆ. ಇದು ‘ಅಲಸಿ ಪೇಟ್ವಿ ಅವಧಾರಣದೋಷ.’ ತಿಬ್ಬ (ತ್ಭ) = ತೀವ್ರ ; ಬೇಗನೆ.

ಮಾರ್ಗಕಾರನೆ ತಿದ್ದಿರುವ ಲಕ್ಷ್ಯ : ‘ಶೂರನೀತನೆ, ಪಂಡಿತನೀತನೇ, ಹಾಲಿನಂತೆ ಬೆಳ್ಳಗಿರುವ ಹೆಚ್ಚಾದ ಯಶಸ್ಸುಳ್ಳವನೀತನೇ.’

ಪದ್ಯ ೧೪೧–೧೪೨ : ‘ವಿಶಂಕೆ’ಯ ‘ದೋಷ–ಗುಣ’ಗಳಿಗೆ ಲಕ್ಷ್ಯಗಳು. ‘ದಿವಿಜಯನೋ ಫಣಿನಾಯಕನೋ ಮನೋಭವಂ ಇವಂ ಕರಂ ಒಪ್ಪಿದಂ.’ ‘ಅವಧಾರಣೆ’ಯಂತೆ ಇಲ್ಲಿಯೂ ‘ವಿಶಂಕೆ’ಯನ್ನು ಸೂಚಿಸುವ ‘ಓ’ ಎಂಬಕ್ಷರವನ್ನು ಒಬ್ಬ ವ್ಯಕ್ತಿಯನ್ನೇ ಕುರಿತು ಸಂದೇಹವನ್ನು ವ್ಯಕ್ತಪಡಿಸುವ ಎಲ್ಲ ಪದಗಳಿಗೂ ಹತ್ತಿಸಬೇಕು. ಈಗ ಇರುವಂತೆ, ‘ದಿವಿಜನೋ ಫಣಿನಾಯಕನೋ’ ಎಂಬ ವಿಶಂಕಾ ಸೂಚಕ ಪದದ್ವಯವು ಬೇರೆಯಾಗಿ ನಿಂತು ‘ಮನೋಭವಂ ಕರಂ ಒಪ್ಪಿದಂ’ ಎಂದು ವರ್ಣಿಸಬೇಕಾದ ವ್ಯಕ್ತಿಯನ್ನು ಮನ್ಮಥನೆಂದೇ ಹೇಳಿದಂತಾಗಿದೆ. ಆ ವ್ಯಕ್ತಿ. ಮನ್ಮಥನೂ ಅಲ್ಲ ; ಮನ್ಮಥನಿರಬಹುದೆ ಎಂಬ

ಸಂದೇಹಕ್ಕೆಡೆಗೊಡುವಂಥವನು. ಹೀಗೆ, ಕುರಿತ ಆಶಯಕ್ಕೇ ಭಂಗ ಬರುತ್ತಿದೆ. ಸಂದೇಹಸೂಚನೆಯಾದ ಮೇಲೆ, ಅದು ಪರಿಹಾರವೂ ಆಗಬೇಕು. ('ಇಟ್ಟ ವಿಶಂಕೆಯ ಪಾಟಿಯಂ ತವಿಸಿ ನಿಲ್ಕೆ)'. ಈ ದೋಷವನ್ನು ತಿದ್ದಿರುವ ಲಕ್ಷ್ಯಪದ್ಯದಲ್ಲಿ, ಸಂದೇಹವನ್ನು ಸೂಚಿಸಿದ ಮೇಲೆ ಅದನ್ನು ಪರಿಹರಿಸುವ ವಿವರಣೆಯೂ ಬಂದಿರುವುದನ್ನು ಗಮನಿಸಬೇಕು.

ಪಾಳಿ = ಕ್ರಮ, ನಿರಿಗೆ, ತವಿಸು = ಹೋಗಲಾಡಿಸು, ನಾಶಪಡಿಸು, ಕ್ಷೀಣಿಸುವಂತೆಮಾಡು ('ಕ್ಷಯೇ' – ಶ.ಮ.ದ.)

ಪದ್ಯ ೧೪೩ : 'ಗ್ರಾಹ್ಯವಾದ ರೀತಿಯಲ್ಲಿ ವಿಚಾರಮಾಡಿದರೆ, ಗುಣದೋಷಗಳ ಸಮುದಾಯ ಅಳತೆಗೆ ಮೀರಿದ್ದು. ಇನ್ನು, ವೃತ್ತಿ (ವಿವರಣ) ಸಮೇತವಾಗಿ ಉಪಮಿತೋಕ್ತಿಯ (ಉಪಮಾವಾಚಕ ಸಂಬಂಧವಾದ) ಗುಣಾವಗುಣಗಳನ್ನು ಹೇಳುತ್ತೇನೆ.' – ಇದು ಪದ್ಯದ ತಾತ್ಪರ್ಯ.

ಪದ್ಯ ೧೪೪–೧೪೬ : ಈ ಮೂರು ಪದ್ಯಗಳಲ್ಲಿ, ಮೊದಲು 'ಉಪಮಿತೋಕ್ತಿ' ಪ್ರಯೋಗದ ದೋಷಕ್ಕೆ ಲಕ್ಷ್ಯವನ್ನು ಕೊಟ್ಟು, ಬಳಿಕ ಉಳಿದೆರಡು ಪದ್ಯಗಳಲ್ಲಿ ಕ್ರಮವಾಗಿ ಈ ಸಂಬಂಧವಾದ ದೋಷ–ಗುಣ ಸ್ವರೂಪವನ್ನು ವಿವರಿಸಿದ್ದಾನೆ. 'ಉಪಮಿತಾಕ್ಷರಮೆಲ್ಲಿಯುಂ ಏಕರೂಪಪರಿವೃತ್ತಿ'ಯಲ್ಲಿದ್ದರೆ ಅದು ಸರಿಯಾದ ಕ್ರಮ (ಪ.೧೪೬). ಕನ್ನಡದಲ್ಲಿ ಆ ಉಪಮಿತಾಕ್ಷರಗಳು (ಉಪಮಾವಾಚಕಗಳು) 'ಅಂತೆ, ಅಂತಿರೆ, ವೊಲ್ ವೋಲ್, ಅಂತೆವೋಲ್ ಎಂದು ಮುಂತಾಗಿವೆ. ಉಪಮೇಯಕ್ಕೆ ಬೇರೆ ಬೇರೆ ಉಪಮಾನಗಳನ್ನು ಕೊಡುವಾಗ ಎಲ್ಲವನ್ನೂ ಒಂದೇ ಬಗೆಯ 'ನಿಯಮಿತಾಕ್ಷರ'ದಿಂದ ನಿರ್ದೇಶಿಸಬೇಕು ; ಇದು 'ಗುಣೋದಯಕಾರಣಂ'. ಬೇರೆ ಬೇರೆ ಉಪಮಾವಾಚಕಗಳನ್ನು ಉಪಯೋಗಿಸುವುದು ದೋಷ. ಲಕ್ಷ್ಯಪದ್ಯದಲ್ಲಿ (ಪ.೧೪೪) 'ಅಂತಿರೆ', 'ವೋಲಿರೆ' ಎಂಬುದಾಗಿ ಎರಡು ಬಗೆಯ 'ಉಪಮೋಕ್ತಿ'ಗಳನ್ನು ಉಪಯೋಗಿಸಿದೆ. ಇದು ದೋಷ. "ನಿರ್ದಿಷ್ಟ ಉಪಮಾವಾಚಕಗಳಿಂದ 'ಉಪಮಾಪ್ರತಿಜ್ಞೆ'ಯನ್ನು ತಿದ್ದುವುದಕ್ಕೆ ಅವಕಾಶವಿದ್ದರೂ ಅದನ್ನು ತಿದ್ದದಿರುವುದು ದೋಷ" (ಪ.೧೪೫). ಲಕ್ಷ್ಯದಲ್ಲಿ, 'ವೋಲಿರೆ' ಎಂಬ ಪದದೆಡೆಯಲ್ಲಿ ಛಂದಸ್ಸು ಕೆಡದಂತೆ 'ಅಂತಿರೆ' ಎಂಬ ಪದವನ್ನು ಪ್ರಯೋಗಮಾಡುವುದಕ್ಕೆ ಅವಕಾಶವಿದೆ.

ಕೇತು = ಧ್ವಜ, ಬಾವುಟ. ಜಳದ = ಮೋಡ. ಹಸ್ತಿ = ಆನೆ. ಪತ್ತಿ =

ಕಾಲಾಳು ; ಕಾಲಾಳಿನ ಸೈನ್ಯ, ಪದಾತಿದಳ. ಕಾರ್ = ಮಳೆ (ಗಾಲ). ಆಹವ = ಯುದ್ಧ.

ಪದ್ಯ ೧೪೭ : ನೃಪತುಂಗದೇವ ಮಾರ್ಗಕ್ರಮ = ನೃಪತುಂಗದೇವನು ಅನುಮೋದಿಸಿರುವ ಕಾವ್ಯಶಾಸ್ತ್ರಪದ್ಧತಿ : ಇದನ್ನು ಅನುಸರಿಸಿರುವ ಕವಿಗಳು ಸಾಮಾನ್ಯರು ಸಾಧಿಸಲಾಗದ ಕಾವ್ಯಸಿದ್ಧಿಯನ್ನು ಸುರಕ್ಷಿತವಾಗಿ ಪಡೆಯುವರೆಂಬ ನಂಬುಗೆಯನ್ನು ಇಲ್ಲಿ ಮಾರ್ಗಕಾರನು ವ್ಯಕ್ತಪಡಿಸಿದ್ದಾನೆ.

ಪದ್ಯ ೧೪೮ : ಅತಿಶಯಧವಳೋರ್ವಿಪೋದಿತಾಳಂಕೃತಿಮತಿ (ಅತಿಶಯಧವಳ + ಉರ್ವಿಪ + ಉದಿತ + ಅಳಂಕೃತಿಮತಿ) = ಅತಿಶಯಧವಳ ಬಿರುದಾಂಕಿತನಾದ ನೃಪತುಂಗ ನೃಪನಿಂದ ಉದಿಸಿದ (ಎಂದರೆ, ಅವನ ನಿಮಿತ್ತವಾಗಿ ಹುಟ್ಟಿದ, ಅವನು ಅನುಮೋದಿಸಿರುವ) ಅಲಂಕಾರಶಾಸ್ತ್ರದ ಜ್ಞಾನ, ತಿಳಿವಳಿಕೆ. ನಿರಂತರ ಪ್ರತೀತಂ = ಎಡೆಬಿಡದ, ಯಾವಾಗಲೂ ಇರತಕ್ಕ, ವಿಶದತೆಯನ್ನುಳ್ಳದ್ದು. ಶ್ರುತಿಯುವತಿ = ಸರಸ್ವತಿ (?)

ಪದ್ಯ ೧೪೯ : ಕಾವ್ಯರಚನೆಯಲ್ಲಿ 'ನೀತಿ ನಿರಂತರ ಕ್ರಮ' ವಾವುದೆಂಬುದನ್ನು ಮಾರ್ಗಕಾರನು ಬಹು ಮನೋಜ್ಞವಾಗಿ ಇದರಲ್ಲಿ ನಿರೂಪಿಸಿದ್ದಾನೆ.[೧೭] ಕುರಿತ ಭಾವಕ್ಕೆ ಅನುಗುಣವಾಗಿ ನುಡಿಗಳು ಕೂಡಿಬರಬೇಕು ; ಅವು ಹೇಳಬೇಕೆಂದಿರುವ 'ಬಗೆ'ಯನ್ನು (ಭಾವವನ್ನು) ಮೀರದಂತಿರಬೇಕು (ಎಂದರೆ ಒಂದು ನುಡಿಯೂ ವ್ಯರ್ಥವಾಗಿ ಬಳಕೆಯಾಗಕೂಡದು); ಆ ಕನ್ನಡ ಮಾತುಗಳಲ್ಲಿ ನಾಣ್ನುಡಿಯ ಬೆಡಗಿರಬೇಕು : (ಇದು ಮಾರ್ಗಕಾರನ ಮನಸ್ಸಿನಲ್ಲಿರುವ 'ದೇಸಿ'ಯ ರೀತಿ ಎಂದು ಗ್ರಹಿಸಬಹುದು); (ಕನ್ನಡ ನುಡಿಯೊಂದಿಗೆ) ಬಳಸುವ ಸಂಸ್ಕೃತದ ಪದಗಳು ಕರ್ಕಶವಾದ ಪರುಷಾಕ್ಷರಗಳಿಂದ ಕೂಡಿರಕೂಡದು, ಮತ್ತು ಅವುಗಳ ಪ್ರಮಾಣ ಮಿತವಾಗಿರಬೇಕು (ಹವಣಾಗಿರಬೇಕು) ; ಒಟ್ಟಿನ ರಚನೆ 'ಮೆಲ್ಪು'ವೆತ್ತಿರಬೇಕು, ಮೃದುಬಂಧದಿಂದ ಕೂಡಿರಬೇಕು. ಹೀಗೆ, ಸಹಜವಾಗಿ ಕೋಮಲವಾಗಿ ಬಳ್ಳಿ ಕುಡಿಚಾಚುವಂತೆ ನಿರರ್ಗಳವಾದ

---

೧೭. ಇದರೊಂದಿಗೆ ಪಂಪನ ಉಕ್ತಿಯನ್ನು ಹೋಲಿಸಬಹುದು :
ಬಗೆ ಪೊಸತಪ್ಪುದಾಗಿ ಮೃದುಬಂಧದೊಳೊಂದುವುದೊಂದಿ ದೇಸಿಯೊಳ್
ಪುಗುವುದು ಪೊ(ಕ್ಕು) ಮಾರ್ಗದೊಳೆ ತಳ್ವುದು ತಳ್ತೊಡೆ ಕಾವ್ಯಬಂಧಮೊ
ಪ್ಪುಗುಮೆಳಮಾವು ಕೆಂದಳಿರ ಪೂವಿನ ಬಿಣ್ಪೊಱೆಯಿಂ ಬಱಲ್ದುತುಂ
ಬಿಗಳಿನೆ ತುಂಬಿ ಕೋಗಿಲೆಯ ಬಗ್ಗಿಸೆ ಸುಗ್ಗಿಯೊಳೊಪ್ಪುವಂತೆವೋಲ್.

ಓಟದಿಂದ ಕೂಡಿರುವ ಉಕ್ತಿರೀತಿ 'ರೀತಿ ನಿರಂತರಕ್ರಮ'. ('ನೀತಿ ನಿರಂತರ' : ನೃಪತುಂಗನ ಬಿರುದು) (ಪರಿಚ್ಛೇದ II ಪ.೪ನ್ನು ಹೋಲಿಸಿ).

ಪದ್ಯ ೧೫೦ : ಅನ್ವಯಕ್ರಮ : 'ಕವಿಪ್ರಕರಂ, ಶ್ರೀವಿಜಯ ಪ್ರಭೂತಮನಿದಂ, ಸಕಳಾಳಾಪ...ಚಿತ್ರಕೃತಿಯಂ, ಈ ಮಾಟ್ಕೆಯಿಂ, ವ್ಯಾವರ್ಣಿಸುತ್ತುಂ, ಕೈಕೊಳ್ವುದು'.

'ಶ್ರೀವಿಜಯನಿಂದ ರಚಿತವಾದ ಇದು ಅಪೂರ್ವಲಕ್ಷಣಗಳಿಂದ ಕೂಡಿರುವ ವೈವಿಧ್ಯಪೂರ್ಣವಾದ ಕೃತಿ (=ಚಿತ್ರಕೃತಿ) ; ಕಾವ್ಯಶಾಸ್ತ್ರದಲ್ಲಿ ಹೇಳಿರುವ ಎಲ್ಲ ಭೇದ ವಿಭೇದಗಳ ವಿವರಣೆಯನ್ನೂ (= ವ್ಯಾವೃತ್ತಿ) ಇದು ಒಳಗೊಂಡಿದೆ ; ಹಾಗೂ, ಚಿತ್ರಕಾರನು ಯಾವ ಪ್ರಕಾರದಲ್ಲಿ ಚಿತ್ರದ ಶ್ರೇಷ್ಠವಾದ ಭಾಗದಿಂದ ಬೆಳಗುವ ಬಣ್ಣ ಬಣ್ಣಗಳ ವಿನ್ಯಾಸವನ್ನು (= ವರ್ಣಕ್ರಮ) ಪ್ರದರ್ಶಿಸಿರುತ್ತಾನೆಯೋ ಆ ಪ್ರಕಾರದಲ್ಲಿ (ಕಾವ್ಯಕಲೆಯ) ಶ್ರೇಷ್ಠವಾದ ಭಾಗದ ಸಾರದಿಂದ ಬೆಳಗುವ 'ವರ್ಣಕ್ರಮಾವೃತ್ತಿಯಿಂದ' (ಅಕ್ಷರ ವಿನ್ಯಾಸ ಕ್ರಮದಿಂದಾದ ನಿರೂಪಣೆಯಿಂದ) ಸುವ್ಯಕ್ತವಾಗುವಂತೆ ಹೇಳಿದ ಕೃತಿಯಿದು ; 'ಈ ಮಾಟ್ಕೆಯಿಂದ' (ಈ ಪ್ರಕಾರವಾಗಿ ರಚಿತವಾದದ್ದೆಂಬ ದೃಷ್ಟಿಯಿಂದ) ಕೊಂಡಾಡುತ್ತ 'ಕವಿಪ್ರಕರ'ವು ಇದನ್ನು ('ಶ್ರೀವಿಜಯ ಪ್ರಭೂತಮನಿದಂ' = ಈ 'ಕವಿರಾಜಮಾರ್ಗ'ವನ್ನು) ಸ್ವೀಕರಿಸಬೇಕು'.

ಆಲಾಪ ಕಲೆ = (ಮಾತಿನ ಮೂಲಕ ಹೇಳುವ) ಕಾವ್ಯಕಲೆ, ಕಾವ್ಯಶಾಸ್ತ್ರ; 'ಅಲಂಕಾರಗ್ರಂಥ' ವ್ಯಾವೃತ್ತಿ = ವಿವರಣೆ. ಚಿತ್ರಕರ = ಚಿತ್ರಕಾರ ಪರಭಾಗ* = ಶ್ರೇಷ್ಠವಾದ ಭಾಗ. ವರ್ಣಕ್ರಮ = (ಶ್ಲೇಷಾರ್ಥ) ಬಣ್ಣಹಾಕುವ ಬಗೆ; ಅಕ್ಷರವಿನ್ಯಾಸ. ಚಿತ್ರಕೃತಿ = ವೈವಿಧ್ಯಪೂರ್ಣವಾದ, ವೈಚಿತ್ರ್ಯದಿಂದ ಕೂಡಿದ, ಅಪೂರ್ವತೆಯಿಂದ ವಿಸ್ಮಯಕಾರಿಯಾದ, ಗ್ರಂಥ (ವಾಚ್ಯಾರ್ಥ ಪ್ರಧಾನವಾದ, 'ಚಿತ್ರಕಾವ್ಯ' ಅಥವಾ 'ಅಧಮಕಾವ್ಯ' ಎಂದು ಅರ್ಥವಲ್ಲ.) ವ್ಯಾವರ್ಣಿಸು = ವಿಶೇಷವಾಗಿ ಬಣ್ಣಿಸು, ಕೊಂಡಾಡು. ಪ್ರಭೂತ = ಉಂಟಾದ, ಹುಟ್ಟಿದ.

---

* ಆದಿಪು – (೬–೫೧ವ), ಪಂ. ಭಾ. ೧೦–೩೧–ಹೆಚ್ಚಾದ ಕಾಂತಿ, ಶೋಭಾತಿಶಯ. (kgk. Edn. P.121 (ಶಬ್ಧಕೋಶ) ; ಸೊಗಸು – D.L.N. (ಪಂ.ರಾ. ೩–೬೭ವ) ಎಂದು ಟಿಪ್ಪಣಿ ಬರೆದಿದ್ದಾರೆ.

## ಪರಿಚ್ಛೇದ : ೨ (II)

ಪದ್ಯ ೧ : ಪರಮ ಶ್ರೀಕೃತಿವಧುವಾ.... ಪ್ರರೂಪಿತಂಗಳ್ = ಶ್ರೇಷ್ಠಳಾದ ಕಾವ್ಯಕನ್ನಕೆಯ ಒಡಲಿಗೆ ಚೆಲುವನ್ನು ಉಂಟುಮಾಡುವ ಗುಣಗಳೇ (ಆಕೆಯ) ಉತ್ತಮವಾದ 'ಅಲಂಕಾರ'ಗಳು (ಒಡವೆಗಳು) (ವಧುವಾ ಶರೀರ : ವಧುವ + ಆ ಶರೀರ, ವಧುವಾ ಶರೀರ ಎಂದು ಇಬ್ಬಗೆಯಾಗಿ ಪದವಿಭಾಗ ಮಾಡಬಹುದು).

ಪದ್ಯವು ದಂಡಿಯ ಶ್ಲೋಕದ ಪೂರ್ವಾರ್ಧದ ಭಾವಾನುವಾದ. ಆ ಶ್ಲೋಕ ಹೀಗಿದೆ:

"ಕಾವ್ಯಶೋಭಾಕರಾನ್ ಧರ್ಮಾನಲಂಕಾರಾನ್ ಪ್ರಚಕ್ಷತೇ ।
ತೇ ಚಾದ್ಯಾಪಿ ವಿಕಲ್ಪ್ಯಂತೇ ಕಸ್ತಾನ್ ಕಾರ್ತ್ಸ್ನ್ಯೇನ ವಕ್ಷ್ಯತಿ ॥"

– II, ೧

'ಕಾವ್ಯಕ್ಕೆ ಶೋಭೆಯನ್ನುಂಟು ಮಾಡುವ ಧರ್ಮಗಳನ್ನು ಅಲಂಕಾರಗಳೆಂದು ಹೇಳಲಾಗುತ್ತದೆ. ಇಂದಿಗೂ ಅವು ವಿಶೇಷವಾಗಿ ಕಲ್ಪಿತಗಳಾಗುತ್ತಲೇ ಇವೆ. ಅವುಗಳನ್ನು ಸಾಕಲ್ಯವಾಗಿ ಹೇಳಬಲ್ಲವರಾರು?' ದಂಡಿಯ ಹೇಳಿಕೆಯನ್ನು ಮಾರ್ಗಕಾರನು ರೂಪಕಾಲಂಕಾರದಿಂದ ನಿರೂಪಿಸಿರುವುದರಿಂದ ಅದಕ್ಕೆ ಹೆಚ್ಚಿನ ಸೌಂದರ್ಯವು ಒದಗಿದ್ದರೂ, 'ಧರ್ಮ' ಎನ್ನುವ ಮಾತಿನ ವಿಶಾಲವಾದ ಅರ್ಥವ್ಯಾಪ್ತಿಯನ್ನು 'ಗುಣ' ಎಂಬ ಮಾತು ಹೊಂದಿಲ್ಲ. ಆದರೆ, 'ಶರೀರ' ಎಂಬ ಪದದೊಂದಿಗೆ 'ಗುಣ' ಎಂಬ ಮಾತೇ ಹೆಚ್ಚು ಉಚಿತವೆಂದು ತೋರುತ್ತದೆ. ಅಲ್ಲದೆ, 'ದೋಷ'ವಲ್ಲದ 'ಗುಣ' ಕಾವ್ಯಕ್ಕೆ ಅಲಂಕಾರಪ್ರಾಯವಾದಾಗ ಅದು ಕಾವ್ಯದ ಧರ್ಮವೂ ಆಗಬಹುದು.

ಪದ್ಯ ೨ : ಮೇಲೆ ಉದಾಹರಿಸಿರುವ ದಂಡಿಯ ಶ್ಲೋಕದ ಉತ್ತರಾರ್ಧದ ಛಾಯೆ ಈ ಪದ್ಯದಲ್ಲಿ ಸ್ವಲ್ಪ ಹರಿದುಬಂದಿದೆ. 'ಅಲಂಕಾರವಿಭಾಗವು ವಿವಿಧ ಪ್ರಕಾರಗಳಾಗಿವೆ. ಶಬ್ದಾರ್ಥಭೇದಗಳಿಂದ ಅವು ಶಬ್ದಾಲಂಕಾರಗಳೆಂದೂ ಅರ್ಥಾಲಂಕಾರಗಳೆಂದೂ ಎರಡು ವಿಭಾಗಗಳೆನಿಸುವುವು.'

ಪದ್ಯ ೩ : ತಾತ್ಪರ್ಯ : 'ಇವುಗಳಲ್ಲಿ ಪ್ರಧಾನವಾದದ್ದು ಅರ್ಥಾಲಂಕಾರ. ಮೊದಲು ಶಬ್ದಾಲಂಕಾರವನ್ನು ತಿಳಿಸುತ್ತೇನೆ.'

ಪದ್ಯ ೪–೫ : ಶಬ್ದಾಲಂಕಾರ ಪ್ರಕರಣದ ವಿವರಣೆಗೆ ತೊಡಗುವ ಮುನ್ನ,

ಮಾರ್ಗಕಾರನು ಪದಪ್ರಯೋಗದ ಔಚಿತ್ಯದ ವಿಷಯವಾಗಿ ಕೆಲವು ಸಲಹೆ ಸೂಚನೆಗಳನ್ನು ನೀಡಿದ್ದಾನೆ : 'ಈ ಪದ ಇಲ್ಲಿಗೆ ಉಚಿತ, ಈ ಪದ ಇಲ್ಲಿಗೆ ಸರಿಯಲ್ಲ – ಎಂಬ ತಿಳಿವಳಿಕೆಯಿಂದ ಬಲ್ಲಮಟ್ಟಿಗೆ ನಿಶ್ಚಯಿಸಿ ('ಸಮುಚಿತ್') ಎಲ್ಲವೂ ಬತ್ತವನ್ನೂ ಮೊಸರನ್ನೂ ಬೆರಸಿಕುಡಿದಂತಾಗದೆ, ಗೊಂದಲಕ್ಕೆ ಒಳಗಾಗದೆ, ಬೇಸರಪಡದೆ ಮೆಲ್ನುಡಿಗಳನ್ನು ಉಪಯೋಗಿಸಬೇಕು.' (ಅವಲಕ್ಕಿ, ಅರಳು, ಅರಳಹಿಟ್ಟು, ರಾಗಿಯ ಹುರಿಹಿಟ್ಟು ಮುಂತಾದುವನ್ನು ಮೊಸರಿನೊಂದಿಗೆ ಕಲಸಿ ಸೇವಿಸಿದರೆ ತಿನ್ನಲು ಯೋಗ್ಯವಾಗಿರುತ್ತದೆ. ಬತ್ತವನ್ನು ಬೆರಸಿದ ಮೊಸರನ್ನು ಕುಡಿಯುವುದೂ ಕಷ್ಟ. ಕುಡಿದರೆ ಅರಗಿಸಿಕೊಳ್ಳುವುದೂ ಕಷ್ಟ ! ನೆಲ್ಲು ಮೊಸರುಗಳ ಬೆರಕೆಯಂತೆ, ನುಚಿತ ಪದಪ್ರಯೋಗ). ಇಷ್ಟು ಮಾತ್ರವಲ್ಲ. ಶಬ್ದಾರ್ಥ ಸಾಂಗತ್ಯವಿರಬೇಕು ; ಎಂದರೆ, ಕುರಿತ ಅರ್ಥಕ್ಕೂ ಬಳಸಿದ ಪದಕ್ಕೂ ಹೊಂದಿಕೆಯಿರಬೇಕು. 'ಪ್ರಕಟಗೊಂಡ ಅರ್ಥವು ಸಕ್ರಮವಾಗಿದ್ದರೂ ಕೂಡ, ಅದನ್ನು ವ್ಯಕ್ತಪಡಿಸುವ ಶಬ್ದವು ಅದರೊಡನೆ ಹೊಂದದಿದ್ದರೆ ಮುತ್ತನ್ನೂ ಮೆಣಸನ್ನೂ[೧೮] ಪೋಣಿಸಿದಂತಾಗುವುದು (ಮುತ್ತು ಹವಳ ಹೊಂದುವಂತೆ ಮುತ್ತು ಮೆಣಸು ಹೊಂದುವುವೆ?) ಆದ್ದರಿಂದ ಹೊಂದಿಕೆಯಾಗದ ಪದವನ್ನು ತೆಗೆದು ಹಾಕಬೇಕು.' ('ಕಟಿಲ್ಚಿ ಕಳೆಗೆ ಒಂದಿ ಮುಂದೆ ಬಾರದ ಪದಮಂ').

ಪದ್ಯ ೬ : 'ಲಘುಪದ'ದ ಮುಂದೆ 'ಒತ್ತಬರ್ಪ ಪದಮಂ' ಇರಿಸಕೂಡದು. 'ಲಘುಪದ' ಎಂದರೆ ತೇಲಿಸಿ ಹಗುರವಾಗಿ ಉಚ್ಚರಿಸಬಹುದಾದ, ಲಘುವಾದ ಅಕ್ಷರಗಳಿಂದ ಕೂಡಿದ, ಹ್ರಸ್ವಾಂತವಾದ ಕಿರುನುಡಿ. ಲಕ್ಷ್ಯಪದ್ಯದ (ಪ.೭)[೧೯] 'ಬರಿಸಿ', 'ಇರಿಸಿ', 'ಬೆಸಗೊಂಡು', 'ನುಡಿಯೆ'

---

೧೮. ಹೋಲಿಸಿ – 'ಪಟಿಗನ್ನಡದೆ ಪುದುಂಗೊಳೆ
ಕೊಟಿ ಸಕ್ಕದಮಂ ತಗುಳ್ಚಿ ಜಾಣ್ಕೆಡೆ ಮುತ್ತುಂ
ಮೆಣಸುಂ ಕೋದಂತಿರೆ ಪೇ
ಳ್ವಟೆಗವಿಗಳ ಕವಿತೆ ಬುಧರನೆರ್ದೆಗೊಳಿಸುಗುಮೇ"
ಕೇಶಿರಾಜನು ಈ ಪದ್ಯವನ್ನು ಉದಾಹರಿಸಿದ್ದಾನೆ. (ಸೂ. ೬೫)

೧೯. ಕೇಶಿರಾಜನು ಈ ಪದ್ಯವನ್ನು ಸಂಧಿದೋಷಕ್ಕೆ ಉದಾಹರಣೆಯಾಗಿ ಕೊಟ್ಟಿದ್ದಾನೆ. (ಶ.ಮ.ದ. – ಸೂ. ೫೯). (ಈ ಪದ್ಯದ ೪ನೆಯ ಪಂಕ್ತಿಯ – 'ಎಂಬುದು ದೂಷ್ಯಂ' ಎಂಬುದಕ್ಕೆ 'ಎಂಬುದಮಾರ್ಗಂ' ಎಂಬ ಪಾಠವಿದೆ).

ಮುಂತಾದ ಕನ್ನಡ ನುಡಿಗಳ್ನು ಗಮನಿಸಿದರೆ ಈ 'ಲಘುಪದ'ದ ಸ್ವರೂಪವು ಮನವರಿಕೆಯಾಗುತ್ತದೆ. 'ಒತ್ತಿ ಬರ್ಪಪದ' ಎಂದರೆ ಒತ್ತಕ್ಷರದಿಂದ ಮೊದಲಾಗುವ ದೀರ್ಘಪದ ಇಲ್ಲವೆ ಸಮಸ್ತಪದ;' 'ಕ್ಷಿತಿಪತಿ', 'ಪ್ರಿಯಕುಶಲವಾರ್ತೆ', 'ಪ್ರಭು', 'ಪ್ರರೂಢಮುದಂ' – ಇಂತಹ ಪದಗಳು. ಸಾಮಾನ್ಯವಾಗಿ ಇವೆಲ್ಲವೂ ಸಮಸಂಸ್ಕೃತಪದಗಳು. ಈ ಬಗೆಯ ಪದಗಳನ್ನು 'ಲಘುಪದ'ಗಳ ಮುಂದೆ ನಿಲಿಸಿದರೆ, 'ಮಗುವಿನ ತಲೆಯ ಮೇಲೆ ಬಾರವಾದ ಹೊರೆಯನ್ನು ಹೊರಿಸಿದಂತೆ 'ಅಸುಖಕರ'ವಾಗುವುದು ೨೦ ; ಇದು ದೂಷ್ಯ. ಬಿಣ್ಪೊಱೆ = ಭಾರವಾದ ಹೊರೆ.

ಪದ್ಯ ೮ : ಮೇಲೆ ವಿವರಿಸಿದ 'ದೂಷ್ಯ' ಪ್ರಯೋಗವನ್ನು 'ಮಾರ್ಗ' ಸಮ್ಮತವಾಗಿ ಮಾಡಿ, ಈ ಲಕ್ಷ್ಯಪದ್ಯದಲ್ಲಿ ಸರಿಪಡಿಸಲಾಗಿದೆ.

ಪದ್ಯ ೯–೧೨ : ಈ ನಾಲ್ಕು ಪದ್ಯಗಳಲ್ಲಿ ಕ್ರಿಯಾವಿಶೇಷಣವನ್ನು ಹೇಗೆ ಬಳಸಬೇಕೆಂಬುದನ್ನು ವಿವರಿಸಿದೆ.

(ಪ.೯) [(ಎರಡನೆಯ ಪಂಕ್ತಿಯ 'ಪೇೞ್ದದಱೊಳೆ' ಎಂಬಲ್ಲಿ ಪಾಠದೋಷವಿರಬಹುದು. ಮದ್ರಾಸು ಮುದ್ರಣದಲ್ಲಿ ಇದನ್ನು 'ಪೇೞ್ದುಮದಱೊಳೆ' ಎಂದು ತಿದ್ದಿರುವುದು ಗ್ರಾಹ್ಯವಾಗಿ ಕಾಣುತ್ತದೆ)].* ಒಂದು ಕ್ರಿಯೆಯೊಂದಿಗೆ ಎರಡು ಕ್ರಿಯಾ ವಿಶೇಷಣಗಳನ್ನು ಒಟ್ಟಿಗೆ ಪ್ರಯೋಗಿಸಕೂಡದು. ಹಾಗೆ ಮಾಡಿದರೆ 'ಎರಡಕ್ಕೆ ಬಿಟ್ಟ ಕಱುವಂ ಪೋಲ್ಗುಂ' ಲಕ್ಷ್ಯಪದ್ಯದಲ್ಲಿ (ಪ.೧೦) 'ಒಪ್ಪಿರೆ ವಿನದದಿಂದುರುಮುದದಿಂ' ಎಂಬುದೇ ಪ್ರಸಕ್ತ ವಾಕ್ಯ. ೧೧ನೆಯ ಪದ್ಯದಲ್ಲಿ ಇದನ್ನು ಹೇಗೆ ಸರಿಪಡಿಸಬೇಕೆಂಬುದನ್ನು ಸೂಚಿಸಿದ್ದಾನೆ : ಒಂದು ಕ್ರಿಯಾ ವಿಶೇಷಣವನ್ನು ಕ್ರಿಯೆಯೊಂದಿಗೆ ಸೇರಿಸಿ, ಮತ್ತೊಂದನ್ನು ವಿಶೇಷ್ಯಕ್ಕೆ (ನಾಮಪದಕ್ಕೆ) ಹೊಂದುವಂತೆ ವಿಶೇಷಣವಾಗಿ (ಗುಣವಾಚಕವಾಗಿ) ಮಾರ್ಪಡಿಸಿ, ಪ್ರಯೋಗಿಸುವುದು ಸರಿಯಾದ ಮಾರ್ಗ. ತಿದ್ದಿದ ಲಕ್ಷ್ಯಪದ್ಯದಲ್ಲಿ

---

೨೦. ಈ ಉಪಮಾನವಾಕ್ಯವನ್ನು ಕೇಶಿರಾಜನು ಉದಾಹರಿಸಿದ್ದಾನೆ. ಇದರ ಸೊಗಸು ಪರಿಭಾವಿಸತಕ್ಕದ್ದು.

* ಇಲ್ಲಿ ಪೇೞ್ದದಱೊಳೆ ಎಂದು ಪಾಠಾಂತರವನ್ನು ತಿದ್ದಿಕೊಂಡರೆ ಮೇಲು ಎಂದು ಬರೆದಿದ್ದಾನೆ.

(ಪ.೧೨) 'ಒಪ್ಪಿರೆ' ಎಂಬ ಕ್ರಿಯೆಯೊಂದಿಗೆ 'ವಿನೋದದಿಂ' ಎಂಬ ಒಂದೇ ಕ್ರಿಯಾವಿಶೇಷಣವನ್ನು ಉಳಿಸಿಕೊಂಡು 'ಉರುಮುದದಿಂ' ಎಂಬುದನ್ನು 'ಜನಿತ ಮುದಂ' ಎಂದು ನಾಮವಿಶೇಷಣವಾಗಿ ಮಾರ್ಪಡಿಸಿ, 'ಅರಸಂ' ಎಂಬ ವಿಶೇಷ್ಯಕ್ಕೆ ಅನ್ವಯವಾಗುವಂತೆ ಮಾಡಿದೆ. (ಎರಡು ಕ್ರಿಯಾ ವಿಶೇಷಣಗಳನ್ನೂ ಸಮುಚ್ಚಯಾತ್ಮಕವಾಗಿ – 'ವಿನೋದದಿಂದಲೂ ಮುದದಿಂದಲೂ ಒಪ್ಪಿರೆ' ಎಂಬಂತೆ ಹೇಳುವುದರ ಮೂಲಕವೂ ದೋಷವನ್ನು ಪರಿಹರಿಸಬಹುದು). (ಕರುವನ್ನು ಎರಡು ಹಸುಗಳ ಬಳಿಗೆ ಬಿಟ್ಟರೆ ತನ್ನ ತಾಯ ಬಳಿಗೇ ಧಾವಿಸುತ್ತದೆ ; ಇನ್ನೊಂದು ಹಸು ಕರುವಿಲ್ಲದೆ ನಿಂತಿರುತ್ತದೆ. ಕ್ರಿಯೆ ಒಂದು ಕ್ರಿಯಾ ವಿಶೇಷಣವನ್ನು ಮಾತ್ರ ಹೊಂದಲು ಸಮರ್ಥ ಎಂಬುದು ಮಾರ್ಗಕಾರನ ಅಭಿಪ್ರಾಯವಿರಬಹುದು).

ಪದ್ಯ ೧೩ : ಇನ್, ಅಂತೆ, ಮತ್ತೆ, ಬಱಿಕೆ, ಮಿಗೆ, ಮುನ್, ನಿಲೆ, ತಾನ್, ಮೇಣ್, ಪೆಱಂ, ಗಡಂ, ಗಳಂ, ಆದಂ, ಕೆನ್ನಂ, ನಿಲ್ – ಎಂಬೀತೆರನಾದ ಪದಗಳನ್ನು "ಎಂದುಂ ಅಲ್ಲದೆಡೆಗಳೊಳ್ ನಿಱಿಸಲ್ಕೆ ಕಲ್ಲದಿರಿಂ' ('ಅನಾವಶ್ಯಕವಾದ ಸ್ಥಳಗಳಲ್ಲಿ ಉಪಯೋಗಿಸುವುದನ್ನು ಕಲಿಯಬೇಡಿರಿ') ಎಂದು ಕವಿಗಳಿಗೆ ಎಚ್ಚರಿಕೆ ನೀಡಿದ್ದಾನೆ ಮಾರ್ಗಕಾರ. ಇಂಥ ಪದಗಳನ್ನು ಉಪಯೋಗಿಸಲೇಕೂಡದೆಂದು ಅವನ ಅಭಿಪ್ರಾಯವಲ್ಲ ; ವ್ಯರ್ಥವಾಗಿ, (ಪದ್ಯದಲ್ಲಿ) ಪಾದಪೂರಕ ಪದಗಳಾಗಿ ಉಪಯೋಗಿಸಕೂಡದೆಂಬುದಷ್ಟೇ ಅವನ ಆಶಯ.

ಪದ್ಯ ೧೪ : ಇದು ಮೇಲೆನ 'ವ್ಯರ್ಥಪದ ಪ್ರಯೋಗದೋಷ'ಕ್ಕೆ ಉದಾಹರಣೆಯಾಗಿ ಕಾಣುತ್ತದೆ. ಪದ್ಯದ ಅರ್ಥವನ್ನು ಪರಿಶೀಲಿಸಿದರೆ, ಇದರಲ್ಲಿ ಬಳಸಲಾದ 'ಮುನ್', 'ಎನ್', 'ಇನ್' ಎಂಬ ಪದಗಳು 'ವ್ಯರ್ಥವಾದ ಪಾದಪೂರಕ'ಗಳಾಗಿ ಕಾಣುವುದಿಲ್ಲ. ದೋಷವನ್ನು ತಿದ್ದಿಬರೆದ ಲಕ್ಷ್ಯವಿದು, ದೋಷಯುಕ್ತವಾದ ಲಕ್ಷ್ಯವು ಮೂಲಮಾತೃಕೆಯಲ್ಲಿದ್ದು ದೊರಕಿರುವ ಹಸ್ತಪ್ರತಿಗಳಲ್ಲಿ ಅದು ಬಿಟ್ಟುಹೋಗಿರಬೇಕು – ಎಂಬ ಡಿ. ಮುಳಿಯ ತಿಮ್ಮಪ್ಪಯ್ಯನವರ ಊಹೆ ಸರಿಯೆಂದು ಕಾಣುತ್ತದೆ.

ಚಪಲಾಧ್ವಜನೋಕ್ತಿ = (ಚಪಲ + ಅಧ್ವ + ಜನೋಕ್ತಿ) ಚಂಚಲ ಚಿತ್ತರಾದ ದಾರಹೋಕರ ಮಾತು ; ಅಧ್ವ =ಮಾರ್ಗ, ದಾರಿ.

('ಚಪಲಧ್ವಜನೋಕ್ತಿ' ಎಂದು ಪಾಠಾಂತರ : ಮದ್ರಾಸುಮುದ್ರಣ)[೨೧]

ಪದ್ಯ ೧೫–೧೪ : ದ್ವಿತೀಯ, ಷಷ್ಠೀ ಮತ್ತು ಸಂಭೋದನಾ ವಿಭಕ್ತಿ ಪ್ರತ್ಯಯಗಳನ್ನು ವಿಕಲ್ಪವಾಗಿ ದೀರ್ಘವಾಗಿ ಪ್ರಯೋಗಿಸುವ ವಿಚಾರ.

(೧) ದ್ವಿತೀಯೆಯಲ್ಲಿಯೂ ಷಷ್ಠಿಯಲ್ಲಿಯೂ ಗುರುಲಘು ಭೇದವುಂಟು (ಎಂದರೆ, ಹ್ರಸ್ವ ಸ್ವರಗಳು ದೀರ್ಘವಾಗಬಹುದು : ಅನ್(೦) > ಆನ್(೦) ; ಅ > ಆ). ಆದರೆ 'ಅನಿಯತ ವತ್ತಿಯನಱಿದು' (ಎಂದರೆ, ಈ ಗುರುಲಘು ಭೇದವು ವಿಕಲ್ಪ ಎಂಬುದನ್ನು ಅರಿತು) ನಿಪುಣನಾದವನು ಪೂರ್ವಕವಿಗಳ 'ಮಾರ್ಗಕ್ರಮ'ವನ್ನು ಅನುಸರಿಸಿ ಇದನ್ನು ಮಾಡತಕ್ಕದ್ದು (ಪ. ೧೫)

(೨) ಆದಿಸ್ವರವುಳ್ಳ ಪದವು ದ್ವಿತೀಯಾ ವಿಭಕ್ತಿಯುಳ್ಳ ಪದದ ಮುಂದೆ ಬಂದಾಗಲೂ, ಪಾದಾಂತದಲ್ಲಿಯೂ ದ್ವಿತೀಯಾ ವಿಭಕ್ತಿ ಪ್ರತ್ಯಯವು ದೀರ್ಘವಾಗಬಹುದು ; ಉಳಿದ ಕಡೆಗಳಲ್ಲಿ 'ಸ್ವಚ್ಛಂದಂ'. ಉದಾಹರಣೆ: ಪಾದಂತಕ್ಕೆ – ಕೀರ್ತಿಧ್ವಜನನ್ । ಕೀರ್ತಿಧ್ವಜನಾನ್ (ಪ. ೧೭).
ಆದಿಸ್ವರವುಳ್ಳ ಪದ ಪರವಾದಾಗ – ನೃಪನನ್, ಅಭಿನುತಮನನನ್, ಉಪಮೇತರನನ್ ಅನುಪಮೇತರನನ್, ಅಪಾರಕೀರ್ತಿಧ್ವಜನಂ > ನೃಪನಾನ್, ಅಭಿಮತನನಾನ್ ಇತ್ಯಾದಿ. (ಪ. ೧೮)

(೩) ಷಷ್ಠೀ ವಿಭಕ್ತಿ ಪ್ರತ್ಯಯವನ್ನುಳ್ಳ ಹಲವು ಪದಗಳನ್ನು ಒಡಗೂಡಿ ಹೇಳುವಾಗಲೂ, ಪಾದಾಂತದಲ್ಲಿಯೂ ಆ ಪ್ರತ್ಯಯವು ದೀರ್ಘವಾಗಬಹುದು ; ಉಳಿದ ಕಡೆಗಳಲ್ಲಿ ಯಥೇಷ್ಟ[೨೨] (ಅ>ಆ)

---

೨೧ ಈ ಪಾಠವನ್ನು ಆಧಾರವಾಗಿಟ್ಟುಕೊಂಡು "೨–೧೪ರಲ್ಲಿ ಒಬ್ಬ ರಾಜಕನ್ಯೆಯ ಸ್ವಯಂವರ ಸಂದರ್ಭವುಳ್ಳ ಪದ್ಯವಿದೆ. ಅದನ್ನು ಯಾವುದೋ ಮೊದಲಿನ ಕಾವ್ಯದಿಂದ ಎತ್ತಿರಬೇಕು. 'ಚಪಲಧ್ವಜ' ಎಂದರೆ ಅರ್ಜುನ ಎಂದಾದರೆ ಅದು ಹಿಂದೆ ಇದ್ದ ಕನ್ನಡ ಭಾರತವೊಂದರಿಂದ ತೆಗೆದುಕೊಂಡ ಪದ್ಯವಾಗಿರಬಹುದು'' ಎಂದು ಡಾ. ಮುಗಳಿಯವರ ಊಹೆ. (ಕ.ಸಾ.ಚ., ಪು. ೨೩). 'ಚಪಲಧ್ವಜನ + ಉಕ್ತಿ' = 'ಚಪಲಧ್ವಜನುಕ್ತಿ' ಎಂದು ಸಂಧಿಯಾಗಬೇಕು. ಈಗಿರುವಂತೆ ಸಮಾಸೋಕ್ತಿ ಸರಿಯಾಗಿದೆ. ಆದಕಾರಣ, ಈ ಊಹೆ ನಿಲ್ಲುವುದಿಲ್ಲ.

೨೨. ಲಕ್ಷಣ ಪದ್ಯದಲ್ಲಿ (೧೫) ದೀರ್ಘೀಕರಣಕ್ಕೆ 'ಅನಿಯತವೃತ್ತಿ'ಯನ್ನು ಹೇಳಿ, ಬಳಿಕ ಎರಡು ವಿಭಕ್ತಿಗಳಿಗೂ ಪ್ರತ್ಯೇಕವಾಗಿ ಲಕ್ಷಣವನ್ನು ಹೇಳುವಾಗ ದೀರ್ಘೀಕರಣದ ಸ್ಥಾನ ನಿರ್ದೇಶನಮಾಡಿ, ಉಳಿದ ಕಡೆಗಳಲ್ಲಿ 'ಸ್ವಚ್ಛಂದ' 'ಯಥೇಷ್ಟ' ಎಂದು ಹೇಳಿರುವುದು ದೋಷಯುಕ್ತವಾಗಿ ಕಾಣುತ್ತದೆ. ಈ ವಿಯವಾಗಿ ಕೇಳಿರಾಜನ ಉಕ್ತಿಗಳು

(ಪ.೨೦). ಲಕ್ಷ್ಯಗಳಾಗಿ ಕೊಟ್ಟಿರುವ ಎರಡು ಪದ್ಯಗಳಲ್ಲಿ (ಪ. ೨೧, ೨೨) ಷಷ್ಠೀ ದೀರ್ಘವು ಹಲವು ಪದಗಳು ಅನುಗೂಡಿ ಬಂದಾಗ ವಿಕಲ್ಪವಾಗಿಯೂ ('ನೃಪನಾ ನೃಪನಂದನನಾ ನೃಪವಧುವರ್' – 'ನೃಪನ ನರಪಾಲತನಯನ ನೃಪವಧುವರ್'), ಪಾದಾತದಲ್ಲಿ ಬಂದಾಗ ನಿಯತವಾಗಿಯೂ ಪ್ರಯೋಗವಾಗಿರುವುದು ಕಂಡುಬರುತ್ತದೆ. (ಕಂದ ಪದ್ಯದ ೨ನೆಯ – ೪ನೆಯ ಪಾದಾಂತಗಳು ಗುರುವಾಗಿರಬೇಕಾದ್ದರಿಂದ, ಪಾದವು ಷಷ್ಠೀ ವಿಭಕ್ತಿಯ ಪದಾಂತವಾಗಿದ್ದರೆ ಅಲ್ಲಿ ದೀರ್ಘವು ಅನಿವಾರ್ಯ; ವೃತ್ತಜಾತಿಗಳಿಗೂ ಇದು ಅನ್ವಯಿಸುತ್ತದೆ).

(೪) ಸಂಬೋಧನೆಯಲ್ಲಿಯೂ ದೀರ್ಘಸ್ವರದ ಪ್ರಯೋಗವುಂಟು. ಆದರೆ, ಅದು ಇಂಬಾಗಿರುವಲ್ಲಿ ಬರತಕ್ಕದ್ದು ; ಬಲ್ಲವರು ಅದನ್ನು ಹಲವೆಡೆಗಳಲ್ಲಿ ಅನುಚಿತವಾಗಿ ಬಳಸಿದರೆ ಅಳುತ್ತಾ ಕೂಡಿ ಕರೆದಂತೆ ಬಹು ವಿರಸವಾಗಿರುವುದೆಂದು ಉದಾಹರಣ ಪೂರ್ವಕ (ಪ.೨೪) ಮಾರ್ಗಕಾರನು ಎಚ್ಚರಿಕೆ ನೀಡಿದ್ದಾನೆ.

ಪದ್ಯ ೨೫–೨೬ : ಬಾಯಟೆ = ಮಿತಿಮೀರಿ ದುಃಖಿಸು, ಊಳ್ = ಕೂಗು, ಕೂಗಿಕರೆ. ಆಶೆಯುಳ್ಳವರೂ, ಹೆದರಿದವರೂ, ತಮ್ಮ ಇಷ್ಟ ಜನರ ಅಗಲಿಕೆಯಿಂದ ತುಂಬ ದುಃಖಗೊಂಡವರೂ 'ಬಾಯಟೆದೂಳ್ದು' ಈ ಯುಕ್ತವಾದ ಪುನರುಕ್ತಿಯನ್ನು ಹೇಳುವುದು 'ಮಾರ್ಗ'ವೆ ಆಗುವುದೆಂದು ಉದಾಹರಣ ಪೂರ್ವಕ (ಪ.೨೬) – 'ಪುನರುಕ್ತಿಪ್ರಯೋಗಕ್ರಮ'ವನ್ನು ಇಲ್ಲಿ ವಿವರಿಸಿದೆ.

ಪದ್ಯ ೨೭–೨೯ : ಈ ಪದ್ಯಗಳಲ್ಲಿ 'ಬಹುವಿಶೇಷಣಗಣ'ದ ಪ್ರಯೋಗದ ಗುಣದೋಷಗಳನ್ನು ಕುರಿತು ಹೇಳಿದೆ.

---

ಖಚಿತವಾಗಿವೆ. (ಸೂ. ೧೧೭, ೧೧೮). ಪ್ರಯೋಗಗಳನ್ನು ಕೊಡುವಾಗ, 'ವೋಲ್ ಪರಮಾದಲ್ಲಿಯುಂ ದೀರ್ಘಮುಂಟು – ಈಂದ ಪುಲಿಯಾವೋಲಿರ್ದಳ್, ನೊಂದ ಪುಲ್ಲೆಯಾವೋಲ್ ಒಳರ್ದನ್ (ಗುಣವರ್ಮನ ಹರಿವಂಶ ಪ್ರಯೋಗಂ)' ಎಂಬುದಾಗಿ ಹೆಚ್ಚಿನ ಪ್ರಯೋಗವೊಂದನ್ನು ಕೊಟ್ಟಿರುವುದು ಗಮನಾರ್ಹ.

'ಕವಿರಾಜಮಾರ್ಗ'ಕ್ಕೂ ಹಿಂದಿನ ಗದ್ಯ ಪದ್ಯ ಶಾಸನಗಳಲ್ಲಿ (ಪೂರ್ವದ ಹಳಗನ್ನಡದಲ್ಲಿ) ಈ ಎರಡು ವಿಭಕ್ತಿಗಳಲ್ಲಿಯೂ ದೀರ್ಘಸ್ವರದ ಪ್ರಯೋಗ ವಿಶೇಷವಾಗಿ ಕಂಡುಬರುತ್ತದೆ. ಅಂದಿನ ಬಳಕೆಮಾತಿನಲ್ಲಿಯೂ ಈ ಪ್ರಯೋಗವಿದ್ದಿರಬಹುದು. 'ಮಾರ್ಗಕಾರ'ನ ಲಕ್ಷ್ಯ ಲಕ್ಷಣಗಳು ಪದರಚನೆಗೆ ಮಾತ್ರ ಅನ್ವಯಿಸುವಂತೆ ಕಾಣುತ್ತದೆ.

ರೂಪಾಲಂಕಾರದಲ್ಲಿಯೂ, ವಿಶೇಷವಾದ ಉಕ್ತಿ ಪ್ರಯೋಗದಲ್ಲಿಯೂ ಅನೇಕ ವಿಶೇಷಣಗಳನ್ನು ಒಟ್ಟಿಗೆ ಬಳಸುವುದು ದೋಷವೆನಿಸದು. 'ನಾಡವರ್ಗಳ್' ಅನೇಕ ಗುಣಗಳಿಂದ ಕೂಡಿದ್ದರು ಎಂದು ವರ್ಣಿಸುವಲ್ಲಿ ವಿಶಿಷ್ಟವಾದ ಉದ್ದೇಶವಿದೆ ; ಆದ್ದರಿಂದ, ಇಲ್ಲಿ 'ಸುಭಟರ್ಕಳ್' ಇತ್ಯಾದಿಯಾಗಿ ಅನೇಕ ವಿಶೇಷಣಗಳನ್ನು ಬಳಸಿದೆ. (ಪ. ೨೮) ಇದೇ ರೀತಿಯಲ್ಲಿ, 'ಅಂಕಚಾರಣೆ'ಗಳಲ್ಲಿಯೂ ಅನೇಕ ವಿಶೇಷಣಗಳನ್ನು ಉಪಯೋಗಿಸಬಹುದು ; ಉಳಿದೆಡೆಗಳಲ್ಲಿ ಕೂಡದು (ಪ. ೨೯) ಅಂಕಚಾರಣೆ = ವ್ಯಕ್ತಿಯ ಅಥವಾ ಪದಾರ್ಥದ ಕುರುಹುಗಳನ್ನು, ವಿಶೇಷ ಲಕ್ಷಣಗಳನ್ನು, ನಿರೂಪಿಸುವುದು (?)

ಪದ್ಯ ೩೦ : 'ಪ್ರಾಸವು ಕನ್ನಡಕ್ಕೆ ಅತಿಶಯವಾದುದು' ಎಂದು ಹೇಳಿ, ಇಲ್ಲಿಂದ ಮುಂದಕ್ಕೆ ಕನ್ನಡದಲ್ಲಿ ಪ್ರಚುರವಾಗಿದ್ದ 'ಶಬ್ದಾಲಂಕಾರ'ಗಳನ್ನು ಮಾರ್ಗಕಾರನು ವಿವರಿಸುತ್ತಾ ಹೋಗುತ್ತಾನೆ. ಪ್ರಾಸವೂ ಶಬ್ದಾಲಂಕಾರದಲ್ಲಿಯೇ ಅಡಕವಾಗಿದೆ. ('ಯತಿಭಂಗ' ವಿಚಾರವನ್ನು ಪ್ರಸ್ತಾವಿಸುವಲ್ಲಿ, 'ದೇಸಿಯನೆ ನಿಜೆಸಿ ಖಂಡಪ್ರಾಸಮನತಿಶಯಮಿದೆಂದು ಯತಿಯಂ ಮಿಕ್ಕರ್' ಎಂದು ಮಾರ್ಗಕಾರನು ಹಿಂದೆ ಹೇಳಿರುವುದನ್ನು ಇಲ್ಲಿ ನೆನೆಯಬಹುದು.) (I–೭೫)

## ಪ್ರಾಸ ವಿಚಾರ

ಪದ್ಯ ೩೧ : ಇಲ್ಲಿ ಆರು ಬಗೆಯ ಪ್ರಾಸಗಳನ್ನು ಮಾರ್ಗಕಾರನು ಹೆಸರಿಸಿದ್ದಾನೆ. ಅವು ಯಾವುವೆಂದರೆ : ೧. ವಿನುತಪ್ರಾಸ ೨. ಶಾಂತಪ್ರಾಸ ೩. ವರ್ಗಪ್ರಾಸ ೪. ಸಮೀಪ ಪ್ರಾಸ ೫. ಅನು(ಗತ)ಪ್ರಾಸ ೬. ಅಂತ(ಗತ) ಪ್ರಾಸ

ಪದ್ಯ ೩೨–೩೪ : (೧) **ವಿನುತಪ್ರಾಸ :** ಪಾದದ ಎರಡನೆಯ ಅಕ್ಷರ ಯಾವುದೋ ಅದನ್ನು ಎಲ್ಲ ಪಾದಗಳಲ್ಲಿಯೂ ಇಡುವುದೆ ವಿನುತ ಪ್ರಾಸ. ಪರಿ. I–೭೫ನೆಯ ಪದ್ಯದಲ್ಲಿ ಹೆಸರಿಸಿರುವ 'ಖಂಡಪ್ರಾಸ'ವೂ ಬಹುಶಃ ಇದೇ ಎಂದು ತೋರುತ್ತದೆ. ಈಗ ಇದು ಸಹಜವಾಗಿಯೇ ಆದಿಪ್ರಾಸವೆಂದು ಪ್ರಸಿದ್ಧವಾಗಿದೆ. ಪದ್ಯದ ಕಡೆಯಲ್ಲಿ ಇದನ್ನು 'ಉರು'ಪ್ರಾಸ ಎಂದು ನಿರ್ದೇಶಿಸಿದೆ. 'ಉರು' (ಶ್ರೇಷ್ಠ) ಎಂಬುದು ವಿಶೇಷಣ ಪದವೇ ಇರಬೇಕು ಎಂದೆನ್ನುವಂತಿಲ್ಲ. ಏಕೆಂದರೆ ೩೪ನೆಯ ಪದ್ಯದಲ್ಲಿ ಹಿಂದಿನ ಲಕ್ಷ್ಯಪದ್ಯವನ್ನು ಅನುಲಕ್ಷಿಸಿ (ಪ.೩೩) 'ಎಂಬುದು ವಿನುತ ಪ್ರಾಸಂ'

ಎಂದು ಸ್ಪಷ್ಟವಾಗಿ ಹೇಳಿ, ಅದರಲ್ಲಿ 'ಸಂಬಂಧಾಕ್ಷರದೊಳೆಲ್ಲ ಮಾತ್ರೆಗಳುಂ ತಳ್ತು ಇಂಬಾಗಿ ಬೆರಸಿ ಶೋಭಾಡಂಬರಮಂ ಪಡೆಗುಂ' ಎಂದು ವಿವರಿಸಿದ್ದಾನೆ. ಲಕ್ಷ್ಯಪದ್ಯದಲ್ಲಿ, ಎಲ್ಲ ಪಾದಗಳಲ್ಲಿಯೂ 'ನೆ' ಕಾರವೇ ಇರುವುದು ಗಮನಾರ್ಹ ; ಇದೇ ಅದರ 'ಶೋಭಾಡಂಬರ'. ಎಲ್ಲ ಪದ್ಯ ರಚನೆಗಳಲ್ಲಿಯೂ ಈ ಬಗೆಯ ಪ್ರಾಸವನ್ನು ಕಾದುಕೊಳ್ಳುವುದು ಅಸಾಧ್ಯವೆಂದೇ ಇದು 'ವಿನುತ'.

ಪದ್ಯ ೩೫–೩೬ : (೨) **ಶಾಂತಪ್ರಾಸ :** ಸಂಯೋಗಾಕ್ಷರಗಳು (ಸಂಯುಕ್ತಾಕ್ಷರಗಳು) ಒಂದೊಂದೇ ಸ್ವರಗಳಿಂದ ಕೂಡಿಕೊಂಡಿದ್ದು, ಪ್ರಾಸಶ್ರೇಣಿಯಲ್ಲಿ ವಿಪರ್ಯಾಸಕ್ರಮವಿದ್ದರೆ, ಅದು ಶಾಂತಪ್ರಾಸವೆನಿಸುವುದು. ಲಕ್ಷ್ಯಪದ್ಯದಲ್ಲಿ[೨೩] (ಪ.೩೬), 'ತ್ತಿ–ತ್ತು–ತ್ತೀ–ತ್ರಿ' – ಇವು ಪ್ರಾಸಸ್ಥಾನದ ಸಂಯುಕ್ತಾಕ್ಷರಗಳು. ಈ ಸಂಯುಕ್ತಾಕ್ಷರಗಳಲ್ಲಿ ಪ್ರಥಮ ವ್ಯಂಜನಾಕ್ಷರವು ಎಲ್ಲೆಡೆಯೂ ಒಂದೇ ಬಗೆಯಾಗಿದ್ದರೂ, ತರುವಾಯದ ವ್ಯಂಜನ ಸ್ವರಾಕ್ಷರಗಳು ಬೇರೆಯಾಗಿರುವುದನ್ನು (ವಿಪರ್ಯಾಸಕ್ರಮದಲ್ಲಿರುವುದನ್ನು) ಕಾಣಬಹುದು. ಇದು ಶಾಂತಪ್ರಾಸದ ಲಕ್ಷಣ.

ಪ್ರಮಾದ ಫಲಕ = ಹಡಗಿನಲ್ಲಿ ಸಮುದ್ರ ಪ್ರಯಾಣ ಮಾಡುವಂದು ಯಾವುದಾದರೂ 'ಪ್ರಮಾದ' ಸಂಭವಿಸಿ, ಹಡಗು ಒಡೆದು ಪ್ರಯಾಣಿಕರು ನೀರುಪಾಲಾಗುಬೇಕಾದ ಅಪಾಯಸಂಭವವು ಒದಗಿದಾಗ ಜೀವವನ್ನು

---

೨೩. ಲಕ್ಷ್ಯಪದ್ಯದ 'ಪತ್ತಿ' ಎಬುದರ ಪಾಠ 'ಪತ್ತೀ' ಎಂದಿರಬಹುದೆಂದು ದಿ॥ ಮುಳಿಯ ತಿಮ್ಮಪ್ಪಯ್ಯನವರು ಸೂಚಿಸಿದ್ದಾರೆ. (ಕ.ರಾ.ವಿವೇಕ – ಭಾಗ ೨). ಹಾಗೆ ತಿದ್ದಿಕೊಳ್ಳುವುದು (ಮಾರ್ಗಕಾರನೇ II–೬ ರಲ್ಲಿ ವಿಧಿಸಿರುವ ಪ್ರಕಾರ) ಸಮರ್ಥನೀಯವಾಗಿ ಕಾಣುತ್ತದೆ.

"ಪದ್ಯವಿದರೊಳಗೆ, ತತ್ಪೂರ್ವದ ಹರ್ಷರಚಿತ 'ರತ್ನಾಳೀ ನಾಟಿಕೆ'ಯ ಕಥಾಂಶವೇ ಹೊಳೆಯುತ್ತಿದೆ. ನಾಟಕವೇ ಆಗಿ ಅಲ್ಲವೆ ಶ್ರವ್ಯಕಾವ್ಯವೇ ಆಗಿ ಯಾವನೋ ಕನ್ನಡ ಕವಿಯಿಂದ ಭಾಷಾಂತರಿತವಾದ ಪ್ರಬಂಧವೇ ಈ ಪದ್ಯದ ಆಕರವೆಂಬಲ್ಲಿ ಸಂಶಯವಿಲ್ಲ" ಎಂದು ತಿಮ್ಮಪ್ಪಯ್ಯನವರು ಹೇಳುತ್ತಾರೆ. ಆದರೆ, ಡಾ॥ ರಂ. ಶ್ರೀ. ಮುಗಳಿಯವರು "೨–೩೬ರಲ್ಲಿ ಹರ್ಷನ ರತ್ನಾವಲಿ ನಾಟಕದ ಕಥಾಂಶವಿದೆ. ಅದನ್ನು ನಾಟಕ ಇಲ್ಲವೆ ಕಾವ್ಯರೂಪಕ್ಕೆ ಇಳಿಸಿದ ಕನ್ನಡ ಕೃತಿ ಯಾವುದಾದರೂ ಇದ್ದಿತೇ? ನಮಗೆ ಈಗ ಎನಿಸುವುದೆಂದರೆ ರತ್ನಾವಳಿಯನ್ನೋದಿ ಬಲ್ಲ ಕವಿರಾಜಮಾರ್ಗಕಾರನೇ ಸ್ವತಂತ್ರವಾಗಿ ಅದನ್ನು ರಚಿಸಬಹುದು" ಎಂದು ಅಭಿಪ್ರಾಯಪಟ್ಟಿದ್ದಾರೆ. (ಕ.ಸಾ.ಚ., ಪು.೨೩) ಡಾ॥ ಮುಗಳಿಯವರ ಹೇಳಿಕೆಯೆ ಸರಿಯೆಂದು ನಮ್ಮ ಮತ.

ಸಂರಕ್ಷಿಸಿಕೊಳ್ಳಲು ಉಪಯೋಗಿಸುವ, ಫಲಕ (ಹಲಗೆ) (Life-saving plank). ಲಕ್ಷ್ಯಪದ್ಯದಲ್ಲಿ, ಸಿಂಹಳ ದ್ವೀಪದ ರಾಜಕುಮಾರಿಯಾದ ರತ್ನಾವಳಿಯೆ ಇಂಥ ಪ್ರಮಾದಫಲಕವನ್ನು ಹತ್ತಿ, ಬಹಳ ಉಗ್ರವಾದ ಮೊಸಳೆಗಳಿಂದ ಕೂಡಿ ಅಲ್ಲಕಲ್ಲೋಲವಾದ ಸಮುದ್ರದಲ್ಲಿ ಒಂದು ಬೊಂಬೆಯೋ ಎಂಬಂತೆ ಸುರಕ್ಷಿತವಾಗಿ ಬದುಕಿದಳು. ಹೀಗೆ ಬದುಕುವುದೂ ಸೋಜಿಗವೆ' ಎಂಬ ಕಥಾಂಶವಿದೆ. ಈ ಪದ್ಯದ ಅಕ್ಷರ ಸಂಯೋಜನೆ ಸಮುದ್ರದ ಕ್ಷೋಭೆಯನ್ನು ಸಮರ್ಥ ರೀತಿಯಲ್ಲಿ ವ್ಯಂಜಿಸುತ್ತಿದೆ ; ಕಡೆಯ ಪಾದ, ಅಪಾಯದ ಕ್ಷೋಭೆಗೆ ಸಿಲುಕಿದ ಕನ್ಯೆ ಶಾಂತಸ್ಥಿತಿಯನ್ನು ತಲುಪಿದ ಅಂಶವನ್ನು ಸೂಚಿಸುತ್ತಿದೆ. ಇದನ್ನು ಅನುಲಕ್ಷಿಸಿ, ಈ ಶಾಂತಭಾವವನ್ನು ಸೂಚಿಸುವ ಪದ್ಯದಲ್ಲಿ ಅಳವಟ್ಟ ಪ್ರಾಸವು 'ಶಾಂತ' ಎಂಬ ಹೆಸರಿಗೆ ಯೋಗ್ಯ – ಎಂಬ ದಿ॥ ತಿಮ್ಮಪ್ಪಯ್ಯನವರ ಊಹೆ ಮನೋಜ್ಞವಾಗಿದೆ ; ಆದರೆ ಅದನ್ನು ಸಮರ್ಥಿಸುವುದು ಕಷ್ಟ.

ಪದ್ಯ ೩೭–೩೮ : (೩) **ವರ್ಗಪ್ರಾಸ :** "ವರ್ಗಾಕ್ಷರಗಳು ನಾಲ್ಕೂ ನಿಯತ ಪ್ರಾಸಸ್ಥಾನದಲ್ಲಿ ಕ್ರಮವಾಗಿ ನೆಲೆಗೊಂಡಿದ್ದರೆ ಅದು 'ಪ್ರಾಕ್ತನೋಕ್ತ' ವರ್ಗಪ್ರಾಸವೆನಿಸುವುದು".

ಲಕ್ಷ್ಯಪದ್ಯದಲ್ಲಿ (ಪ.೩೮), 'ಕ' ವರ್ಗದ ನಾಲ್ಕು ಅಕ್ಷರಗಳೂ ಕ್ರಮವಾಗಿ ಪ್ರಾಸಸ್ಥಾನದಲ್ಲಿ ಬಂದಿವೆ. (ಇನ್ನುಳಿದ ಚ–ಟ–ತ–ಪ ವರ್ಗಾಕ್ಷರಗಳನ್ನೂ ಇದೇ ರೀತಿಯಲ್ಲಿ ಪ್ರಾಸಸ್ಥಾನದಲ್ಲಿ ಉಪಯೋಗಿಸಬಹುದೆಂದು ಊಹಿಸಿಕೊಳ್ಳಬೇಕು). 'ಪಾಕ್ತನೋಕ್ತವರ್ಗಪ್ರಾಸ' ಎಂದಿರುವುದರಿಂದ ಈ ವರ್ಗಪ್ರಾಸ ವಿಚಾರವನ್ನು ಮಾರ್ಗಕಾರನಿಗಿಂತ ಹಿಂದಿನ ಪೂರ್ವಾಚಾರ್ಯರು ಯಾರಾದರೂ ಒಂದು ಲಕ್ಷಣಗ್ರಂಥದಲ್ಲಿ ಹೇಳಿದ್ದರೇ ಎಂಬುದು ವಿಚಾರಣೀಯ. ಪ್ರಾಸವು ಕನ್ನಡಕ್ಕೆ ವಿಶಿಷ್ಟವಾದ್ದರಿಂದ, ಆ ಲಕ್ಷಣಗ್ರಂಥವೂ ಕನ್ನಡದ್ದಾಗಿರಬೇಕಾದುತ್ತದೆ. ಇವೆಲ್ಲಾ ಕೇವಲ ಊಹಾತ್ಮಕ.

ಪದ್ಯ ೩೯–೪೦ : (೪) **ಸಮೀಪಪ್ರಾಸ :** 'ಶ ಷ ಸ' ಎಂಬೀ ಮೂರುವರ್ಣಗಳು ಕ್ರಮವಾಗಿ ಪ್ರಾಸಸ್ಥಾನದಲ್ಲಿ ಬಂದರೆ, ಅದು ಸಮೀಪಪ್ರಾಸ. ಉಚ್ಚಾರಣೆಯ ದೃಷ್ಟಿಯಿಂದ ಈ ಮೂರು ಅಕ್ಷರಗಳೂ ಸಮೀಪ ಸಂಬಂಧವಾದ್ದರಿಂದ (?), ಪ್ರಾಸಕ್ಕೆ ಆ ಹೆಸರು ಬಂದಿರಬಹುದು. (೪ನೆಯ ಪಾದದಲ್ಲಿ 'ಸ' ಕಾರವೇ ಪುನರುಕ್ತವಾಗಿದೆ.)

ಪದ್ಯ ೪೧–೪೨ : (೫) **ಅನುಪ್ರಾಸ :** 'ಎಣೆಯಕ್ಕರಂ' (ಎಂದರೆ, ಸಮಾನಾಕ್ಷರಗಳು)

ಒಂದು ಇನ್ನೊಂದರಲ್ಲಿ ಅವಳಟ್ಟು (ಅನುಗೂಡಿ ಅಥವಾ ಜೊತೆಜೊತೆಯಾಗಿ) ಬಂದಲ್ಲಿ, ಅದು ಅನು(ಗತ) ಪ್ರಾಸವೆನಿಸುವುದು. ಲಕ್ಷ್ಯಪದ್ಯದಲ್ಲಿ (ಪ.೪೨), 'ನನ', 'ನನು', 'ನನುನ', 'ನಿನಿ', 'ನೆನೆ' – ಹೀಗೆ 'ನ' ಕಾರವು 'ಎಣೆಯುಕ್ಕರ'ವಾಗಿ ಸಾಲುವಿಡಿದು ಕಾಣಿಸಿಕೊಂಡಿರುವುದಲ್ಲದೆ, ಅದೇ 'ನ' ಕಾರವು ಪಾದದ ದ್ವಿತೀಯಾಕ್ಷರ ಪ್ರಾಸವಾಗಿಯೂ ಬಂದಿದೆ. ಇದು ಗಮನಾರ್ಹ.

ಪದ್ಯ ೪೩–೪೪ : (೬) **ಅಂತಪ್ರಾಸ :** ಪಾದದ ಕಡೆಯಲ್ಲಿ ಇಟ್ಟ ಅಕ್ಷರವನ್ನೇ ಮುಂದಣ ಪಾದಗಳ ಕಡೆಯಲ್ಲಿಯೂ ಇಟ್ಟರೆ, ಅದು ಅಂತಪ್ರಾಸ. ಲಕ್ಷ್ಯಪದ್ಯದಲ್ಲಿ (ಪ. ೪೪), ಪ್ರತಿಪಾದದ ಅಂತ್ಯದಲ್ಲಿಯೂ 'ತ್ತಂ' ಎಂಬ ಅನುಸ್ವಾರಯುಕ್ತ ಸಂಯುಕ್ತಾಕ್ಷರವು ಪ್ರಾಸವಾಗಿ ಬಂದಿರುವುದು ಕಂಡುಬರುತ್ತದೆ. (ಅಂತಪ್ರಾಸವಿದ್ದರೂ, ದ್ವಿತೀಯಾಕ್ಷರ ಪ್ರಾಸವನ್ನು ಬಿಡುವಂತಿಲ್ಲ. ಇಲ್ಲಿ 'ತ'ಕಾರವೇ ದ್ವಿತೀಯ ಪ್ರಾಸಾಕ್ಷರವಾಗಿರುವುದು ಬಹುಶಃ 'ಕಾಕತಾಳೀಯ' ಎಂದು ಕಾಣುತ್ತದೆ).

ಪದ್ಯ ೪೫ : ಪ್ರಾಸ, ಅನುಪ್ರಾಸ, ಅಂತಪ್ರಾಸ – ಇವು ಮೂರೂ ಕನ್ನಡಕ್ಕೆ 'ಅತಿಶಯಂಗಳ್' (ಎಂದರೆ, ಸಂಸ್ಕೃತ ಭಿನ್ನವಾಗಿ ಕನ್ನಡಕ್ಕೆ ಮಾತ್ರ ವಿಶಿಷ್ಟವಾದ ಶಬ್ದಾಲಂಕಾರಗಳು) ಎಂದು ಹೇಳಿ, ಇನ್ನುಳಿದ ಮೂರೂ (ಎಂದರೆ, ಶಾಂತ, ಸಮೀಪ. ವರ್ಗಪ್ರಾಸಗಳು) 'ಪ್ರಾಸಾಭಾಸಂಗಳ್' ಎಂದರೆ ಪ್ರಾಸದಂತೆ ತೋರುವವೇ ಹೊರತು ನಿಜವಾದ ಪ್ರಾಸಗಳಲ್ಲ ಎಂದು ಹೇಳಿದ ಮಾರ್ಗಕಾರನ ನಿರ್ಣಯೋಕ್ತಿ ಇಂದಿಗೂ ಊರ್ಜಿತವಾಗಿದೆ. (ಏಕೆಂದರೆ, ಆಧುನಿಕ ಕನ್ನಡ ಕವಿತೆಯಲ್ಲಿ ವಿಶೇಷವಾಗಿ ಕವಿಜನಪ್ರಿಯವಾಗಿರುವವು ಈ ಮೂರು ಬಗೆಯ ಪ್ರಾಸಗಳೆ).

ಪದ್ಯ ೪೬–೫೧ : ತಾತ್ಪರ್ಯ : ಕಾವ್ಯಮಾರ್ಗದ ಅನೇಕಾನೇಕ ಭೇದಗಳನ್ನು ಅರಿತುಕೊಂಡು ನಿಶ್ಚಯಿಸಲು ಯಾರಿಗೂ ಸಾಧ್ಯವಿಲ್ಲ. 'ಪೂರ್ವಶಾಸ್ತ್ರ'ದಲ್ಲಿ ಉಕ್ತವಾದ 'ಪದವಿಧಿ'ಯನ್ನು (ಪದಪ್ರಯೋಗ ಸಂಬಂಧವಾದ ನಿಯಮಗಳನ್ನು) ಲಕ್ಷಿಸಿ ('ಕುಱಿತು') ಸ್ಪಷ್ಟವಾಗುವಂತೆ ('ತೆಱೆದಿರೆ') ಕನ್ನಡದಲ್ಲಿ ಸಂಗ್ರಹವಾಗಿ ('ಇನಿಸಂ') ತಿಳಿಸುತ್ತೇನೆ. (ಪ.೪೬). ಎಲ್ಲ ಮನುಷ್ಯರ ಅಂಗೋಪಾಂಗಗಳೂ ಪ್ರತಿಯೊಬ್ಬ ಮನುಷ್ಯನಲ್ಲಿಯೂ ತಮ್ಮ ತಮ್ಮ ನಿಯತಸ್ಥಾನಗಳಲ್ಲಿದ್ದರೂ ಕೂಡ, ಮನುಷ್ಯರು ಒಬ್ಬರಂತೆ ಇನ್ನೊಬ್ಬರಿರುವುದಿಲ್ಲ (ಪ. ೪೭). ಅದೇ ರೀತಿಯಲ್ಲಿ, ಶ್ರೇಷ್ಠಕವಿಗಳ

ಪ್ರಯೋಗಗಳಿಂದ ಉಪಲಕ್ಷಿತಗಳಾದ ಮಾರ್ಗಗಳು (ಶಬ್ದಾಲಂಕಾರ ಪ್ರಯೋಗ ರೀತಿಗಳು) ಒಂದು ಇನ್ನೊಂದರೊಡನೆ ಸಮೀಪವರ್ತಿಯಾಗಿದ್ದು, ಶಬ್ದಾಲಂಕಾರದ ರಚನೆಗಳು ನೋಡುವುದಕ್ಕೆ ಒಂದೇ ಬಗೆಯಾಗಿ ಕಾಣುತ್ತವೆ. (ಪ. ೪೮). ಕವಿಪರಂಪರೆ ಲೋಕದಲ್ಲಿ ಅನಾದಿಕಾಲದಿಂದ ನಡೆದುಬಂದಿದೆ ; ಆದ್ದರಿಂದ ಕವಿಗಳ ವಿಶಿಷ್ಟ ಲಕ್ಷಣದ ಉಕ್ತಿಗಳಿಗೂ ಲೆಕ್ಕವಿಲ್ಲ ; ಕಾವ್ಯಮಾರ್ಗದ ಪ್ರಕಾರಗಳೂ ಭೇದಗಳೂ ಅನಂತ (ಪ. ೪೯). ಕಾವ್ಯಮಾರ್ಗದ ಉಕ್ತಿ ಪ್ರಭೇದಗಳು ವಿಶೇಷಗುಣಗಳಿಂದ ಕೂಡಿದ್ದರೂ, ಅವುಗಳ ಕ್ರಮ ಅನಿಶ್ಚಿತ ; ಯೋಚಿಸವುದಕ್ಕೂ ಹೇಳುವುದಕ್ಕೂ ಹೊರಟರೆ ಇತಿಮಿತಿಯಿಲ್ಲದವು ; ಹೀಗಿರುವುದರಿಂದ, ಅವುಗಳನ್ನೆಲ್ಲಾ ವಿಚಾರಮಾಡಿ ತಿಳಿಸಲು ಯಾರುತಾನೆ ಸಮರ್ಥರಾದಾರು? (ಪ. ೫೦). ಹಾಗಿದ್ದರೂ ಕೂಡ, ಪುರಾತನ ಕವಿಗಳು ಬಲ್ಲ 'ಉತ್ತರ' ಮತ್ತು 'ದಕ್ಷಿಣ' ಎಂಬ ಮಾರ್ಗಗಳಿಗಿರುವ ಭೇದವನ್ನು – ಪುರಾತನ ಕವಿಗಳು ಅರಿತು ಕಲ್ಪಿಸಿರುವ ಮಾರ್ಗಾಂತರವನ್ನು ಕುರಿತು ವಿಚಾರಮಾಡಿ ನಾನು ತಿಳಿದ ಮಟ್ಟಿಗೆ ಹೇಳುತ್ತೇನೆ." (ಪ. ೫೧)[೨೪].

ಪದ್ಯ ೪೬ : ಪೂರ್ವಶಾಸ್ತ್ರ ಪದವಿಧಿ : I–೪೨, ೪೮ ಪದ್ಯಗಳಿಂದ, ಕವಿರಾಜಮಾರ್ಗಕ್ಕಿಂತ ಹಿಂದೆ ಕನ್ನಡ ಲಕ್ಷಣ ಗ್ರಂಥವಾವುದೂ ಬಹುಶಃ ಇದ್ದಿರಲಾರದು ಎಂದು ಅನುಮಾನಿಸಲು ಅವಕಾಶವಿದೆ. ಆದ್ದರಿಂದ ಇಲ್ಲಿ 'ಪೂರ್ವಶಾಸ್ತ್ರ' ಎಂದರೆ ಭಾಮಹ ದಂಡಿ ಇವರ ಕಾವ್ಯಶಾಸ್ತ್ರಗಳನ್ನು ಅನುಲಕ್ಷಿಸಿಯೆ ಮಾರ್ಗಕಾರನು 'ಮಾರ್ಗಗತಿ'ಯ ಭೇದಗಳನ್ನು ಹೇಳಹೊರಟಿದ್ದಾನೆ ಎಂದು ಗ್ರಹಿಸಬೇಕು. ಅಲ್ಲದೆ, ಮಾರ್ಗ ವಿಚಾರದಲ್ಲಿ ಅವನು ದಂಡಿಯ 'ಕಾವ್ಯಾದರ್ಶ'ವನ್ನು ಅನುಸರಿಸಿರುವುದು ಸ್ಪಷ್ಟವಾಗಿದೆ.

---

೨೪. ಕವಿರಾಜಮಾರ್ಗಕಾರನು ಈ ಮೇಲಿನ ಪದ್ಯಗಳಲ್ಲಿ ಸೂಚಿಸಿ, ಮುಂದಿನ ಪದ್ಯಗಳಲ್ಲಿ ಸವಿವರವಾಗಿ ನಿರೂಪಿಸಿರುವ 'ಮಾರ್ಗದ್ವಯ' ವಿಚಾರವು ವಿದ್ವಾಂಸರಲ್ಲಿ ವಾದವಿವಾದಕ್ಕೆ ಎಡೆಗೊಟ್ಟಿದೆ. 'ಕವಿಮಾರ್ಗ'ದಲ್ಲಿಯೆ 'ಮಾರ್ಗ' ಎಂಬ ಪದಕ್ಕೆ ಸಂದರ್ಭಾನುಸಾರವಾಗಿ ಬೇರೆ ಬೇರೆ ಅರ್ಥಗಳಾಗುತ್ತಿವೆ. ಪ್ರಕೃತ ಸಂದರ್ಭದಲ್ಲಿ ಮಾರ್ಗಕಾರನು ದಂಡಿಯಿಂದ ಪ್ರೋಕ್ತವಾದ ವೈದರ್ಭ ಗೌಡೀಯ ಮಾರ್ಗದ್ವಯಗಳಿಗೆ ಸಂವಾದಿಗಳಾಗಿ ದಕ್ಷಿಣೋತ್ತರ ಮಾರ್ಗಗಳನ್ನು ಹೇಳಿದ್ದಾನೆ. ಈ ಮಾರ್ಗ ವಿಚಾರದ ಚರ್ಚೆಯನ್ನು 'ಪೀಠಿಕೆ'ಯಲ್ಲಿ ಪ್ರತ್ಯೇಕವಾಗಿ ವಿವೇಚಿಸಿದೆಯಾದ್ದರಿಂದ ಇಲ್ಲಿ ಅದರ ವಿವರಣೆಗೆ ತೊಡಗಿಲ್ಲ.

ಪದ್ಯ ೪೭–೪೮ : ಈ ಪದ್ಯಗಳ ಆಶಯವು ದಂಡಿಯ ಕಾವ್ಯಾದರ್ಶದಲ್ಲಿ ಬೇರೆಯ ರೀತಿಯಲ್ಲಿ ಉಕ್ತವಾಗಿದೆ. ದಂಡಿಯ ಶ್ಲೋಕ :

ಇಕ್ಷುಕ್ಷೀರ ಗುಡಾದೀನಾಂ ಮಾಧುರ್ಯಸ್ಯಾಂತರಂ ಮಹತ್ ।
ತಥಾ ಽಪಿ ನ ತದಾಖ್ಯಾತುಂ ಸರಸ್ವತ್ಯಾಪಿ ಶಕ್ಯತೇ ॥

– ಕಾವ್ಯಾದರ್ಶ (I–೧೦೨)

(ಕಬ್ಬು, ಹಾಲು, ಬೆಲ್ಲ ಮೊದಲಾದವುಗಳಲ್ಲಿನ ಸವಿಯಲ್ಲಿ ಒಂದೊಂದಕ್ಕೂ ಬಹಳ ಅಂತರವಿದೆ. ಅದನ್ನು ವಿವರಿಸಲು ಸರಸ್ವತಿಗೂ ಶಕ್ಯವಿಲ್ಲ)

(ಇಕ್ಷುಕ್ಷೀರ' ಎಂಬುದನ್ನು ಒಂದೇ ಸಮಸ್ತಪದವಾಗಿ ಇಟ್ಟುಕೊಂಡು 'ಕಬ್ಬಿನಹಾಲು' ಎಂದೂ ಅರ್ಥಮಾಡಬಹುದು. ಆಗ, ಸಂದರ್ಭೋಚಿತವಾಗಿ ಅರ್ಥಸ್ವಾರಸ್ಯ ಹೆಚ್ಚುವುದೆಂದು ನಮ್ಮ ತಿಳಿವಳಿಕೆ. ಕಬ್ಬಿನಹಾಲು ಒಂದೇ ಆದರೂ, ಅದರಿಂದಾದ ಬೆಲ್ಲ, ಸಕ್ಕರೆ, ಕಲ್ಲುಸಕ್ಕರೆ ಮುಂತಾದವುಗಳಲ್ಲಿ ಮಾಧುರ್ಯ ಭೇದಗಳು ಕಂಡುಬರುತ್ತವೆ. ಮಾರ್ಗಕಾರನು ಹೋಲಿಕೆಯನ್ನು ಮಾರ್ಪಡಿಸಿಕೊಂಡಿದ್ದರೂ ಬೇರೆಯ ಅಂದದಲ್ಲಿ ಇದೇ ಆಶಯವನ್ನು ಪರಿಪೋಷಿಸಿದ್ದಾನೆ. ಹಾಗೂ, ಈ ದೃಷ್ಟಾಂತವನ್ನು ಮಾರ್ಗ ವಿಚಾರ ಸಮಾಪ್ತಿವಾಕ್ಯದಲ್ಲಿ (ನೋಡಿ : II–೯೭) ಅಳವಡಿಸಿಕೊಂಡಿದ್ದಾನೆ.)

ಪದ್ಯ ೪೯ : 'ಕವಿಗಳುಮನಾದಿಲೋಕೋದ್ಭವರಪ್ಪುದಱಿಂ': "ಈ ಹೇಳಿಕೆಯಿಂದ, ಕ್ರಿಸ್ತಶಕದಿಂದಲೂ ಮೊದಲೆ ಕನ್ನಡದಲ್ಲಿ ಸಾಹಿತ್ಯವು ವಿಸ್ತರಿಸಿತ್ತೆಂಬುದು ನಿಸ್ಸಂದೇಹವಾಗಿ ಸೂಚಿತವಾಗುತ್ತದೆ" ಎಂದು ದಿ॥ ಮುಳಿಯ ತಿಮ್ಮಪ್ಪಯ್ಯನವರು ಅಭಿಪ್ರಾಯಪಟ್ಟಿದ್ದಾರೆ. ಮಾರ್ಗಕಾರನು ತನಗಿಂತಲೂ ಹಿಂದೆ ಇದ್ದ ಖ್ಯಾತಗದ್ಯಪದ್ಯ ಕವಿಗಳನ್ನು ಉಲ್ಲೇಖಿಸಿರುವನಷ್ಟೆ. (I–೨೯–೩೨). ಮೇಲಿನ ಉಕ್ತಿಯಲ್ಲಿ, 'ಕವಿಗಳು' ಎಂಬ ಸಾಮಾನ್ಯವಾಚಕದಿಂದ ಇವರಿಗಿಂತ ಹಿಂದೆ ಇದ್ದ ಸಂಸ್ಕೃತ ಪ್ರಾಕೃತ ಕನ್ನಡ ಇತ್ಯಾದಿಯಾಗಿ ಎಲ್ಲ ಭಾಷೆಗಳ ಕವಿಗಳನ್ನೂ ಉದ್ದೇಶಿಸಿರುವನೇ, ಇಲ್ಲವೆ ಕನ್ನಡ ಕವಿಗಳನ್ನು ಮಾತ್ರ ಕುರಿತಿರುವನೆ ಎಂಬುದನ್ನು ನಿಶ್ಚಿತವಾಗಿ ಹೇಳಲು ಸಾಧ್ಯವಿಲ್ಲ. ಅಲ್ಲದೆ –

ಅಸ್ತ್ಯನೇಕೋ ಗಿರಾಂ ಮಾರ್ಗಃ ಸೂಕ್ಷ್ಮಭೇದಃ ಪರಸ್ಪರಂ ।
ತತ್ರ ವೈದರ್ಭ ಗೌಡೀಯೌ ವರ್ಣ್ಯೇತೇ ಪ್ರಸ್ಫುಟಾಂತರೌ ॥

– ಕಾವ್ಯಾದರ್ಶ, I–೪೦

(ವಚೋಮಾರ್ಗ ಅಥವಾ ಮಾತಿನ ಮಾರ್ಗ (ರೀತಿ) ಅನೇಕ ; ಒಂದಕ್ಕೊಂದಕ್ಕೆ ಇರುವ ಭೇದಗಳು ಸೂಕ್ಷ್ಮ ; ಆದ್ದರಿಂದ, ಪ್ರಸ್ಫುಟ (ಚೆನ್ನಾಗಿ ಎದ್ದು ಕಾಣುವ)

ಭೇದಗಳನ್ನುಳ್ಳ 'ವೈಧರ್ಭ' ಮತ್ತು 'ಗೌಡೀಯ' ಎಂಬೆರೆಡು ಮಾರ್ಗಗಳನ್ನು ಮಾತ್ರ ವರ್ಣಿಸುತ್ತೇವೆ.)

ಇತಿ ಮಾರ್ಗದ್ವಯಂ ಭಿನ್ನಂ ತತ್ಸ್ವರೂಪನಿರೂಪಣಾತ್ ।
ತದ್ಭೇದಾಸ್ತು ನ ಶಕ್ಯಂತೇ ವಕ್ತುಂ ಪ್ರತಿಕವಿಸ್ಥಿತಾಃ ॥
– ಕಾವ್ಯಾದರ್ಶ, I–೧೦೧.

(ಹೀಗೆ, ಎರಡು ಮಾರ್ಗಗಳೂ ಬೇರೆಬೇರೆ. ಅವುಗಳ ಸ್ವರೂಪ ನಿರೂಪಣದಿಂದ ಇದು ಸುಸ್ಪಷ್ಟ. ಆದರೆ, ಪ್ರತಿ ಕವಿಯಲ್ಲಿಯೂ ಇರುವ ಭೇದಾಂತರಗಳನ್ನೆಲ್ಲವನ್ನೂ ಹೇಳಲು ಶಕ್ಯವಿಲ್ಲ).

– ಎಂಬ ದಂಡಿಯ ಶ್ಲೋಕಗಳ ಭಾವವನ್ನೇ ಮಾರ್ಗಕಾರನು ಇಲ್ಲಿ ಅನುವಾದಿಸುತ್ತಿರುವುದರಿಂದ, ಕವಿಸಾಮಾನ್ಯಾರ್ಥದಲ್ಲಿ 'ಕವಿಗಳುಂ' ಎಂಬ ಮಾತು ಪ್ರಯೋಗವಾಗಿದೆಯೆಂದು ನಮ್ಮ ಅಭಿಪ್ರಾಯ.

'ಅನಂತ ಭೇದವದಱಿಂ ಮಾರ್ಗಂ' : 'ಮಾರ್ಗಂ' ಎಂಬುದಕ್ಕೆ ಮದ್ರಾಸು ಮುದ್ರಣದಲ್ಲಿ 'ಮಾತುಂ' ಎಂಬ ಪಾಠಾಂತರವಿದೆ. ಮೂಲಶ್ಲೋಕದಲ್ಲಿ 'ಅನೇಕೋ ಗಿರಾಂ ಮಾರ್ಗಃ' ಎಂದಿರುವುದರಿಂದ 'ಮಾರ್ಗಂ' ಎಂಬ ಪಾಠವೆ ಗ್ರಾಹ್ಯ.

ಪದ್ಯ ೫೨–೫೩ : ಇಂತು ಕಾವ್ಯದ ಉಕ್ತಿಪ್ರಕಾರಗಳಲ್ಲಿ ಎರಡು 'ಮಾರ್ಗ'ಗಳು ಪ್ರಸಿದ್ಧವಾಗಿವೆ ; ಹಾಗೂ, 'ವಕ್ರ' ಮತ್ತು 'ಸ್ವಭಾವ' ಎಂಬ ನಿಯತಿಕ್ರಮಾನುಗುಣವಾಗಿ ಎರಡು ಉಕ್ತಿರೀತಿಗಳೂ ಹುಟ್ಟಿಕೊಂಡಿವೆ. ದಕ್ಷಿಣ ಮಾರ್ಗವನ್ನು ಬೇರ್ಪಡಿಸತಕ್ಕ ವಿಶಿಷ್ಟ ಗುಣವುಳ್ಳದ್ದು 'ಸ್ವಭಾವಾಖ್ಯಾನ' ಅಥವಾ 'ಸ್ವಭಾವೋಕ್ತಿ' ; ಅನೇಕ ಭೇದಗಳನ್ನುಳ್ಳ 'ವಕ್ರೋಕ್ತಿ' ಉತ್ತರ ಮಾರ್ಗದಲ್ಲಿ ಪ್ರಚುರವಾಗಿದೆ.[೨೫]

---

೨೫. ಕವಿರಾಜಮಾರ್ಗಕಾರನು ತನ್ನ ದಕ್ಷಿಣೋತ್ತರ ಮಾರ್ಗವಿವರಣೆಯಲ್ಲಿ ಪ್ರಧಾನವಾಗಿ ದಂಡಿಯ ಕಾವ್ಯಾದರ್ಶವನ್ನೇ ಅನುಸರಿಸಿದ್ದಾನೆ. ಆದರೆ, ಭಾಮಹನು ಹೇಳುವ ವಕ್ರೋಕ್ತಿ ಸ್ವಭಾವೋಕ್ತಿಗಳನ್ನು ಈ ಎರಡು ಮಾರ್ಗಗಳ 'ಭೇದಕಗುಣ'ಗಳೆಂದು ಹೇಳುವಲ್ಲಿ ಮಾರ್ಗಕಾರನ ಸಮನ್ವಯ ದೃಷ್ಟಿ ಕಂಡಬರುತ್ತದೆ. ಭಾಮಹನ ಪ್ರಕಾರ, "ಲೋಕೋತ್ತರವಾದ ಚಮತ್ಕಾರವು ಕಂಡುಬರುವ ಕಾವ್ಯ ಪ್ರಯೋಗಗಳು ಮಾತ್ರ ಅಲಂಕೃತವೆನ್ನಬಹುದು. ಈ ಲೋಕೋತ್ತರವಾದ ಚಮತ್ಕಾರವನ್ನೇ ಭಾಮಹನು ಸಾಮಾನ್ಯವಾಗಿ 'ವಕ್ರೋಕ್ತಿ'ಯೆನ್ನುತ್ತಾನೆ. ಆದ್ದರಿಂದ ವಕ್ರೋಕ್ತಿ ಅಥವಾ ಅತಿಶಯೋಕ್ತಿ ಭಾಮಹನ ಪ್ರಕಾರ ಅಲಂಕಾರಗಳೆಲ್ಲಕ್ಕೂ ಅನ್ವಯಿಸುವ ಸಾಮಾನ್ಯ ಲಕ್ಷಣ. ಲೋಕದಲ್ಲಿದ್ದಂತೆಯೇ ವಸ್ತುವನ್ನು ವಿವರವಾಗಿ ವರ್ಣಿಸುವುದರಿಂದ ಚಮತ್ಕಾರ

ಪದ್ಯ ೫೪ : ಇದರಲ್ಲಿ ದಕ್ಷಿಣ ಮಾರ್ಗದ ಹತ್ತು ಗುಣಗಳು ಉಕ್ತವಾಗಿವೆ. ದಂಡಿಯ ಪ್ರಕಾರ ಇವು 'ವೈದರ್ಭಮಾರ್ಗಸ್ಯ ಪ್ರಾಣಾ ದಶಗುಣಾಃ'. ಮಾರ್ಗಕಾರನು ಹೇಳುವ ಹತ್ತೂ ಗುಣಗಳನ್ನೂ ಅದಕ್ಕೆ ಸಂವಾದಿಗಳಾದ ಗುಣಗಳನ್ನೂ ಜೊತೆಜೊತೆಯಾಗಿ ಈ ಮುಂದೆ ಕಾಣಿಸಿದೆ : ಸಮ–ಸಮತಾ, ಮಧುರ–ಮಧುರ್ಯಂ, ನಿಬಿಡ–ಶ್ಲೇಷಃ, ಕಾಂತ–ಕಾಂತಿಃ, ಸುಕುಮಾರ–ಸುಕುಮಾರತಾ, ಸಮಾಹಿತ – ಸಮಾಧಿಃ, ಪ್ರಸನ್ನ–ಪ್ರಸಾದಃ, ಉದಾರ–ಉದಾರತ್ವಂ, ಪ್ರಮಿತಗ್ರಾಮ್ಯ – ಅರ್ಥ ವ್ಯಕ್ತಿಃ, ಓಜಸ್ವಿ – ಓಜಃ.[೨೬]

---

ಬಂದರೆ ಸ್ವಭಾವೋಕ್ತಿಯೆನಿಸುತ್ತದೆ. ಹೀಗೆ ವರ್ಣ್ಯವಾನ ವಿಷಯುದ ಸೌಂದರ್ಯೋತ್ಕರ್ಷಕ್ಕೆ ಕವಿಪ್ರತಿಭಾನಿರ್ವಾಹ್ಯವಾದ ವಕ್ರೋಕ್ತಿ, ಸ್ವಭಾವೋಕ್ತಿಗಳೇ ಕಾರಣ. ಕಾವ್ಯವಸ್ತುವಿನಲ್ಲಿ ಚಮತ್ಕಾರ ಬಂದರೆ ಸ್ವಭಾವೋಕ್ತಿಯೆನಿಸುತ್ತದೆ. ಹೀಗೆ ವರ್ಣ್ಯಮಾನ ವಿಷಯದ ಸೌಂದರ್ಯೋತ್ಕರ್ಷಕ್ಕೆ ಕವಿಪ್ರತಿಭಾನಿವಾರ್ಹಹ್ಯವಾದ ವಕ್ರೋಕ್ತಿ, ಸ್ವಭಾವೋಕ್ತಿಗಳೇ ಕಾರಣ. ಕಾವ್ಯವಸ್ತುವಿನಲ್ಲಿ ಶಾಸ್ತ್ರಕ್ಕೂ ಕಾವ್ಯಕ್ಕೂ ಭೇದವಿರುವಂತೆಯೇ ಕಾವ್ಯದ ಉಕ್ತಿಸ್ವರೂಪದಲ್ಲಿ ಅಥವಾ ವರ್ಣನಾಕ್ರಮದಲ್ಲಿಯೂ ಶಾಸ್ತ್ರದಲ್ಲಿಲ್ಲದ ವೈಶಿಷ್ಟ್ಯವೆಂದರೆ ಅಲಂಕಾರಗಳ ತತ್ತ್ವವಾದ ವಕ್ರೋಕ್ತಿ. 'ವಾಚಾಂ ವಕ್ರಾರ್ಥ ಶಬ್ದೋಕ್ತಿರಲಂಕಾರಾಯ ಕಲ್ಪತೇ'. ವಕ್ರೋಕ್ತಿಯಿಲ್ಲದೆ ಅಲಂಕಾರವಿಲ್ಲ... ಈ ವಕ್ರೋಕ್ತಿಯ ನಾನಾ ಬಗೆಯ ವಿಲಾಸವನ್ನು ರೂಪಕಾದಿ ಅಲಂಕಾರಗಳ ಮೂಲಕ ಬಾಮಹನು ತೋರಿಸಿದ್ದಾನೆ. .... ಅರ್ಥಪುಷ್ಟಿಯೂ ವಕ್ರೋಕ್ತಿಯೂ ಇಲ್ಲದ ಕಾವ್ಯ ಲಲಿತವಾಗಿಯೂ ಕೋಮಲವಾಗಿಯೂ ಇರುವ ಕಾರಮದಿಂದ ಕಿವಿಗಿಂಪಾದ ಹಾಡಿಗೆ ಸಮಾನವೇ ಹೊರತು ಕಾವ್ಯವೆನಿಸುವುದಿಲ್ಲ. ಅಂತೆಯೇ ಅವನು ವೈದರ್ಭವೆಂಬ ಕಾವ್ಯಪ್ರಕಾರವನ್ನು ಪ್ರತ್ಯೇಕವಾಗಿ ಒಪ್ಪುವುದಿಲ್ಲ. ಹಾಗಾದರೆ ಪ್ರಾಸಾದಿ ಶಬ್ದಾಡಂಬರವಿದ್ದರೆ ಕಾವ್ಯವೆನಿಸೀತೆ ಎಂದರೆ, ದನ್ನು ಕಾವ್ಯವೆನ್ನುವುದಿಲ್ಲ. 'ನಿತಾಂತ' ಮುಂತಾದ ಶಬ್ದಗಳಿಂದಲೇ ಕಾವ್ಯದಲ್ಲಿ ಅಲಂಕಾರವೆನಿಸಬಲ್ಲ ಸೌಂದರ್ಯ ಬರುವುದಿಲ್ಲವೆನ್ನುತ್ತಾನೆ. ವಕ್ರೋಕ್ತಿಯಿಲ್ಲದೆ ಎಂದರೆ ಅರ್ಥಪುಷ್ಟಿಯಿಲ್ಲದೆ ಕಾವ್ಯವಿಲ್ಲ. ಹೀಗೆ ಗೌಡೀಯ–ವೈದರ್ಭವೆಂಬ ಕಾವ್ಯಭೇದ ಕಲ್ಪನೆಯೇ ಭಾಮಹನ ಪ್ರಕಾರ ಗತಾನುಗತಿಕ ; ಹೆಡ್ಡರು ಮಾಡಿಕೊಂಡುದು." (ಡಾ॥ ಕೆ. ಕೃಷ್ಣಮೂರ್ತಿ; ಕನ್ನಡ ಕಾವ್ಯಾಲಂಕಾರ – ೧೯೬೧ ; ಪೀಠಿಕೆ, ಪು. XLii, XLiii)

ಭಾಮಹನ ಈ ಮಾರ್ಗದ್ವಯ ನಿರಾಕರಣೆಯ ಮಾತುಗಳನ್ನು ನಾಗವರ್ಮನು ಕಾವ್ಯಾವಲೋಕನದಲ್ಲಿ ಹೀಗೆ ಅನುವಾದಿಸಿದ್ದಾನೆ.

ವೈದರ್ಭ ಗೌಡ ಮಾರ್ಗವಿ
ಭೇದಂ ಬಗೆವೊಡೆ ಗತಾನುಗತಿಕಮಿದೆಂದೊ
ಲ್ದಾದರಿಪರ್ಕೆಲಬರ್ಸಂವಾದದೊಳೆರಡುಂ ಸಮರ್ಥಮಪ್ಪುದಜೆಂದಂ – ಕಾವ್ಯಾ., ಸೂ. ೧೨೫

(ನೋಡಿ : ಕಾವ್ಯಾಲಂ. I – ೩೧, ೩೨, ೩೩, ೩೪, ೩೫, ೩೭ ; II – ೮೪, ೮೫, ೮೬ ; ೯೩).

೨೬. ಭರತ, ದಂಡಿ, ವಾಮನ – ಇವರ ಪ್ರಕಾರ ಕಾವ್ಯಗುಣಗಳು ಹತ್ತು. ಭಾಮಹನು

ಪದ್ಯ ೫೫ : ಮೇಲ್ಕಂಡ ಗುಣಗಳ 'ವಿಷರ್ಯಯವೃತ್ತಿ'ಯೆ (ಎಂದರೆ ವ್ಯತಿರಿಕ್ತವಾದ ಪ್ರಯೋಗವೆ) ಉತ್ತರ ಮಾರ್ಗ. ('ಏಷಾಂ ವಿಪರ್ಯಯಃ ಪ್ರಾಯೋ ದೃಶ್ಯತೇ ಗೌಡವರ್ತ್ಮನಿ' – ದಂಡಿ.) ಈ ಪದ್ಯದ ತಾತ್ಪರ್ಯವನ್ನು ಗಮನಿಸುವುದು ಎರಡು ದೃಷ್ಟಿಗಳಿಂದ ಆವಶ್ಯಕ : (೧) 'ತದ್ಭವದೊಳ್' ಎಂಬ ಪದದ ಅರ್ಥನಿರ್ಣಯ ; (೨) ಉತ್ತರ ಮಾರ್ಗಗತ ಗುಣ ನಿರ್ಣಯ. ಪದ್ಯದ ತಾತ್ಪರ್ಯ : "ಅವುಗಳ (ಎಂದರೆ, ಮೇಲೆ ಹೇಳಿದ ದಕ್ಷಿಣ ಮಾರ್ಗದ ಗುಣಗಳ) ವಿಪರ್ಯಯವಾದ ಪ್ರಯೋಗದಿಂದ ಸಂಘಟಿತವಾಗಿ ಭಿನ್ನಗುಣವೆಂದು ತೋರುವ ವಿಕಲ್ಪ ರೂಪವೆ ('ಪ್ರವಿಭಕ್ತ ವಿಕಲ್ಪಂ') ಉತ್ತರಮಾರ್ಗ. ಹೀಗೆ 'ಸವಿಶೇಷ'ವಾದ ಆ (ಉತ್ತರ ಮಾರ್ಗದ) ಗುಣವನ್ನು ಅತಿಶಯಧವಳೋಕ್ತಿಕ್ರಮವನ್ನು ಅನುಸರಿಸಿ, 'ತದ್ಭವದೊಳ್' (ಎಂದರೆ ದಕ್ಷಿಣ ಮಾರ್ಗಜನ್ಯ ರೀತಿಯಲ್ಲಿ) ತಿಳಿಸುತ್ತೇನೆ."[೨೭]

೧. 'ತದ್ಭವದೋಳ್': ಈ ಪದದ ಅರ್ಥನಿರ್ಣಯವನ್ನು ಮದ್ರಾಸು ಮುದ್ರಣದ ಸಂಪಾದಕರು ಹೀಗೆ ಮಾಡಿದ್ದಾರೆ (ಅವತರಣಿಕೆ. viii) : "... 'ಅಱಿಪುವೆಂ ತದ್ಭವದೊಳ್' ಎಂಬ ಪದ್ಯದಲ್ಲಿ ತಬ್ಧವ ಶಬ್ದಕ್ಕೆ ತತ್ಸಮ ತದ್ಭವ ಶಬ್ಧವೆಂದು ಅರ್ಥಮಾಡುವುದು ಅಪ್ರಾಕರಣಿಕವಾದುದು. ಹಿಂದೆ ದಕ್ಷಿಣೋತ್ತರ ಮಾರ್ಗಗಳ ಲಕ್ಷಣವನ್ನು ಹೇಳಿರುವುದರಿಂದ ಈ ಪದ್ಯದ ಉತ್ತರಾರ್ಧದಲ್ಲಿ 'ಅದನ್ನು ಅತಿಶಯಧವಳೋಕ್ತಿಕ್ರಮದಿಂ ಅಱಿ ಪುವೆಂ' ಎಂದು ಇಷ್ಟನ್ನೇ ಹೇಳಬೇಕಾಗಿರುವಾಗ 'ಅದನ್ನು' ಎಂಬುದಕ್ಕೆ ಬದಲಾಗಿ 'ಅದರಲ್ಲಿ ಹುಟ್ಟಿದ' ಎಂಬ ಕ್ಲಿಷ್ಟಾನ್ವಯವುಳ್ಳ (ತದ್ಭವದೊಳ್) ಶಬ್ದವನ್ನು ಪ್ರಯೋಗಿಸಿರುವ ಈ ಕವಿಯು, ಆ ಮಾರ್ಗದ್ವಯ ಲಕ್ಷಣವನ್ನು ಅತಿಶಯಧವಳೋಕ್ತಿಕ್ರಮದಲ್ಲಿ (ತತ್) ಆ ಕವಿಮಾರ್ಗದಿಂದ (ಭವದೊಳ್) ಹುಟ್ಟಿದ ಈ ಗ್ರಂಥದಲ್ಲಿ ಹೇಳುವೆನು

---

ಮಾಧುರ್ಯ, ಓಜಸ್ಸು, ಪ್ರಸಾದ ಎಂಬ ಮೂರು ಗುಣಗಳನ್ನು ಮಾತ್ರ ಸಂಕ್ಷೇಪವಾಗಿ ವಿವರಿಸಿದ್ದಾನೆ. (ಕಾವ್ಯಾಲಂಕಾರ, II–೧, ೨, ೩,). ಅವನ ಮತದಂತೆ, ಸಮಾಸಗಳ ಅಲ್ಪಪ್ರಯೋಗದಿಂದ 'ಮಾಧುರ್ಯ'ವೂ, ಸಕಲ ಸುಲಭಗ್ರಾಹ್ಯವಾದ ಅರ್ಥಪ್ರತೀತಿಯಿಂದ 'ಪ್ರಸಾದ'ವೂ, ಸಮಾಸಬಾಹುಳ್ಯದಿಂದ 'ಓಜಸ್ಸೂ' ಸಿದ್ಧಿಸುವುವು. 'ಗುಣ' ವಿಚಾರದಲ್ಲಿ ಮಾರ್ಗಕಾರನು ದಂಡಿಯನ್ನೇ ಅನುಸರಿಸಿದ್ದಾನೆ.

೨೭. "ಸವಿಶೇಷಗುಣವಾದ ಆ ಉತ್ತರ ಮಾರ್ಗವನ್ನು ತಜ್ಜನ್ಯ (ತದ್ಭವ)ವಾದ ಲಕ್ಷ್ಯಸಂದರ್ಭದಲ್ಲಿ ವಿವರಿಸುವೆನು." – ಇದು ಮುಳಿಯ ತಿಮ್ಮಪ್ಪಯ್ಯನವರ ವಿವರಣೆ.

ಎಂಬ ನಿಜತತ್ವಾಂಶವನ್ನು ಇಲ್ಲಿ ಸೂಚಿಸುವನೆಂದು ತಾತ್ಪರ್ಯವನ್ನು ಹೇಳಬಹುದು. ಈ ಗ್ರಂಥಕ್ಕೆ ಮೂಲಗ್ರಂಥವು ಮತ್ತೊಂದಿತ್ತೆಂದು ಸೂಚಿಸುವ ಇದು ಕೂಡ, ಶ್ರೀವಿಜಯನ ಕವಿಮಾರ್ಗವೆಂಬ ಗ್ರಂಥವನ್ನು ಈ ಕವಿರಾಜಮಾರ್ಗ ಗ್ರಂಥವು ಅನುಸರಿಸಿದೆ ಎಂಬುದನ್ನು ತಿಳಿಸುವುದರ ಮೂಲಕ ಕವಿಮಾರ್ಗದ ಅಸ್ತಿತ್ವಕ್ಕೆ ಸಹಕಾರಿಯಾಗುವುದು."

ದುರ್ಗಸಿಂಹನು ತನ್ನ 'ಪಂಚತಂತ್ರ'ದಲ್ಲಿ ಉಲ್ಲೇಖಿಸಿರುವ 'ಶ್ರೀವಿಜಯರ ಕವಿಮಾರ್ಗಂ' ಎಂಬ ಗ್ರಂಥವು ಪ್ರಸ್ತುತ 'ಕವಿರಾಜಮಾರ್ಗ'ದಿಂದ ಭಿನ್ನವಾದ ಬೇರೊಂದು ಗ್ರಂಥವೇ ? ಹಾಗಿದ್ದ ಪಕ್ಷದಲ್ಲಿ ಅದರಿಂದ ಈ ಗ್ರಂಥ ಹುಟ್ಟಿದೆಯೆ? – ಎಂಬೀ ಚರ್ಚೆ ಇಲ್ಲಿ (ಕರ್ತೃ ವಿಷಯಕ ಚರ್ಚೆಯನ್ನು ಪೀಠಿಕೆಯಲ್ಲಿ ಮಾಡಿರುವ ಕಾರಣ) ಅಪ್ರಸಕ್ತ. ಪ್ರಸ್ತುತ ಪದ್ಯದ ಹಿಂದಿನ ಪದ್ಯದಲ್ಲಿ 'ದಕ್ಷಿಣ ಮಾರ್ಗ'ದ ಉಲ್ಲೇಖವಿದೆಯೆ ಹೊರತು 'ಕವಿಮಾರ್ಗ'ದ ಉಲ್ಲೇಖವಿಲ್ಲ; ಈಅದಕ್ಕೂ ಮುಂಚೆಯಾದರೂ ಗ್ರಂಥದ ಯಾವ ಕಡೆಯಲ್ಲಿಯೂ 'ತತ್' ಗ್ರಂಥದ ('ಕವಿಮಾರ್ಗ'ದ) ಉಲ್ಲೇಖವಿಲ್ಲ. ಹೀಗಿರುವಲ್ಲಿ, 'ತತ್' ಎಂಬುದಕ್ಕೆ 'ಕವಿಮಾರ್ಗ' ಎಂದು ಅರ್ಥಾನ್ವಯಮಾಡುವುದು ಊಹೆಗೂ ನಿಲುಕದ್ದು. ಆದ್ದರಿಂದ, ಸಮೀಪಗತವಾದ 'ದಕ್ಷಿಣ ಮಾರ್ಗ'ವನ್ನು ನಿರ್ದೇಶಿಸುವ ಸರ್ವನಾಮವಾಗಿ 'ತತ್' ಶಬ್ದವು ಪ್ರಯೋಗವಾಗಿದೆಯೆಂದು ಅರ್ಥ ಮಾಡುವುದೇ ಸಾಧು.[೨೮]

೨. ಮಾರ್ಗಕಾರನು ಉತ್ತರ ಮಾರ್ಗದ ಗುಣವನ್ನು ಪ್ರತ್ಯೇಕವಾಗಿ

---

೨೮. ಈ ಬಗೆಗೆ, ಮುಳಿಯ ತಿಮ್ಮಪ್ಪಯ್ಯನವರು ಮದ್ರಾಸು ಮುದ್ರಣದ ಸಂಪಾದಕರ ಅಭಿಪ್ರಾಯವನ್ನು ನಿರಾಕರಿಸುವರಾದರೂ, ನಮ್ಮ ಅಭಿಪ್ರಾಯಕ್ಕೆ ತುಸ ಭಿನ್ನವಾದ ಅಭಿಪ್ರಾಯವನ್ನು ಹೊಂದಿದ್ದಾರೆ. ಅವರ ವಿವರಣೆ ಇಂತಿದೆ : "ಗ್ರಂಥಕಾರನು ಈ ಪದ್ಯದಿಂದಲೆ ಮುಂದೆ ಪ್ರಥಮತಃ ದಕ್ಷಿಣ ಮಾರ್ಗದ, ಮತ್ತೆ ಉತ್ತರಮಾರ್ಗದ ಗುಣಗಳಿಗೆ ವಿಶಿಷ್ಟ ಲಕ್ಷಣ ಲಕ್ಷ್ಯಗಳನ್ನು ಹೇಳಲಾರಂಭಿಸುತ್ತಾನೆ. ಉತ್ತರ ಮಾರ್ಗಲಕ್ಷಣಕ್ಕನುವಾದ ಲಕ್ಷ್ಯವನ್ನು 'ತದ್ಭವದೊಳ್' ಎಂದರೆ ಆ ಉತ್ತರಮಾರ್ಗಭವಗುಣ ಸಂದರ್ಭದಲ್ಲಿ ಹೇಳುವೆನು ಎಂದೇ ಅರ್ಥ."

ದಿ॥ ಬಿ.ಎಂ. ಶ್ರೀ.ಯವರು 'ತದ್ಭವದೊಳ್' ಎಂಬುದರ ಪಾಠವು 'ತದ್ದ್ವಯದೊಳ್' ಎಂದಿರಬಹುದೆಂದು ಊಹಿಸಿದ್ದಾರೆ. ಇದನ್ನು ಒಪ್ಪಿಕೊಂಡರೆ "ಸವಿಶೇಷಗುಣವನ್ನು 'ಆ ಎರಡರಲ್ಲಿ' (ಎಂದರೆ ಉಭಯಮಾರ್ಗಗಳಲ್ಲಿ) ತಿಳಿಸುತ್ತೇನೆ" ಎಂದು ಅರ್ಥ ಮಾಡಬಹುದು.

ಲಕ್ಷಣ ದ್ವಾರವಾಗಿ ವಿವರಿಸಿಲ್ಲ. ದಕ್ಷಿಣ ಮಾರ್ಗದ ಲಕ್ಷ್ಯಗಳನ್ನು ಕೊಟ್ಟು, ಅವೇ ಉತ್ತರ ಮಾರ್ಗದಲ್ಲಿ ಹೇಗೆ 'ವಿಪರ್ಯಯವೃತ್ತ'ಯಲ್ಲಿ ಪ್ರಯೋಗವಾಗುತ್ತದೆ ಎಂಬುದನ್ನು ತೋರಿಸಿದ್ದಾನೆ. ಇಂತು, ದಕ್ಷಿಣಮಾರ್ಗ ಲಕ್ಷ್ಯಸಂದರ್ಭದಲ್ಲಿಯೇ ಉತ್ತರಮಾರ್ಗಗುಣವನ್ನೂ ನಿರ್ದೇಶಿಸಿರುವುದರಿಂದ, 'ದಕ್ಷಿಣ ಮಾರ್ಗಜನ್ಯ' ರೀತಿಯಲ್ಲಿ (ತದ್ಭವದೊಳ್) ಉತ್ತರ ಮಾರ್ಗದ 'ಸವಿಶೇಷಗುಣ'ವನ್ನು ಅರುಹಿದ್ದಾನೆ ಎಂದು ತಿಳಿಯಬೇಕು.

ಪದ್ಯ ೫೬–೫೮ : ಸಮ (ಬಂಧ) (ದಕ್ಷಿಣ ಮಾರ್ಗ) : 'ಸಮನಿಸಿ ಕಿವಿಗೆ ಎಡಜೆ ಬಾರದೆ ಅಂದಂಬಟ್ಟು ಇಂ (ಇನ್) ಸಮೆದ ಪದದಾ ವಿಭೇದ ಕ್ರಮಂ = 'ಕೇಳುವುದಕ್ಕೆ ತೊಂದರೆಯಾಗದಂತೆ (ಎಂದರೆ, ಶ್ರವಣ ಸುಭಗವಾಗಿ) ಅಂದವನ್ನು ಹೊಂದಿ ಜೋಡಿಸಿದ ಪದಗಳ ಜೋಡಣೆಯ ಕ್ರಮವೆ 'ಸಮ' (ಎಂದರೆ, ವಿಷಮವಲ್ಲದ್ದು). ಇದರಲ್ಲಿ ಮತ್ತೆರಡು ವಿಧ: (೧) ಮೃದುಬಂಧ ; (೨) ಸ್ಫುಟಬಂಧ (ದಂಡಿಯು ಸಮಬಂಧವನ್ನು 'ಮೃದು', 'ಸ್ಫುಟ', 'ಮಧ್ಯಮ' ಎಂದು ಮೂಬಗೆಯಾಗಿ ವಿಂಗಡಿಸಿದ್ದಾನೆ. ಮೃದುವರ್ಣಗಳುಳ್ಳದ್ದು ಎಂದರೆ ಅಲ್ಪಪ್ರಾಣಾಕ್ಷರ ಸಹಿತವಾದದ್ದು ಮೃದುಬಂಧ ; ಸ್ಫುಟವರ್ಣಗಳು ಎಂದರೆ ಮಹಾಪ್ರಾಣಗಳನ್ನುಳ್ಳದ್ದು ಸ್ಫುಟಬಂಧ ; ಮಿಶ್ರವರ್ಣಗಳುಳ್ಳದ್ದು ಮಿಶ್ರಬಂಧ). ಮೃದು ಸ್ಫುಟ ಬಂಧಗಳ ಲಕ್ಷಣ ವಿವರಣೆಯಲ್ಲಿ ಮಾರ್ಗಕಾರನು ದಂಡಿಯನ್ನೇ ಅನುಸರಿಸಿದ್ದಾನೆ. ೯ಪ. ೫೭). ಸಮಬಂಧದ ಎರಡು ಭೇದಗಳಿಗೂ ಲಕ್ಷ್ಯಗಳು ೫೮ ನೆಯ ಪದ್ಯದಲ್ಲಿ ಅಡಕಗೊಂಡಿವೆ. ಅಲ್ಪಪ್ರಾಣಗಳಾದ ಮೃದುವರ್ಣಗಳು ಪದ್ಯದ ಪೂರ್ವಾರ್ಧದಲ್ಲಿಯೂ, ಮಹಾಪ್ರಾಣ ಸಹಿತಗಳಾದ (ಘ,ಧ,ಭ,ಖ) ಸ್ಫುಟ (ಬಿಡಿ ಬಿಡಿಯಾದ) ವರ್ಣಗಳು ಉತ್ತರಾರ್ಧದಲ್ಲಿಯೂ ಪ್ರಯೋಗವಾಗಿರುವುದನ್ನು ಗಮನಿಸಬಹುದು. ಆಯತ = ವಿಸ್ತಾರವಾದ, ವಿಶಾಲವಾದ, ಕರುಣಾಪಾಂಗ = ಕರುಣೆಯಿಂದ ಕೂಡಿದ ಕಡೆಗಣ್ಣ ನೋಟ. ಜಘನ = ಸೊಂಟದ ಹಿಂಭಾಗ, ನಿತಂಬ. ಪಯೋಧರ = ಮೊಲೆ. ವಿಧುರೆ = ಧರಿಸಿದವಳು, ಹೊತ್ತವಳು. ವಿಧುಮುಖಿ = ಚಂದ್ರಮುಖಿ.

ಪದ್ಯ ೫೯ : 'ವಿಷಮಬಂಧಮಿನ್ನಿಂತಕ್ಕುಂ' – 'ವಿಷಮಬಂಧವು ಹೀಗಿರುತ್ತದೆ' ಎಂದು ಹೇಳಿ, ಪದ್ಯದ ಉತ್ತರಾರ್ಧದಲ್ಲಿ ಆ ಬಂಧದ ಉದಾಹರಣೆಯನ್ನು

ಕೊಟ್ಟಿದ್ದಾನೆ. ಸಮಬಂಧವಲ್ಲದ್ದು ವಿಷಮಬಂಧ. ಎಂದ ಮೇಲೆ, ಇದು ದಕ್ಷಿಣ ಮಾರ್ಗದ ವಿಪರ್ಯಯಕ್ರಮವಾಯಿತು ; ದಕ್ಷಿಣಮಾರ್ಗದ ಸಮಬಂಧಲ್ಲಿ ಪ್ರಯೋಗವಾಗುವ ಮೃದುವರ್ಣಗಳಿಗೆ ಪ್ರತಿಯಾದಿ ಕ,ಚ,ತ,ಟ ಮತ್ತು ರೇಫಯುಕ್ತ ಸಂಯುಕ್ತಾಕ್ಷರಗಳು ಪ್ರಯೋಗವಾಗಿರುವುದನ್ನು ಲಕ್ಷ್ಯಭಾಗದಲ್ಲಿ ಗಮನಿಸಬಹುದು. ದಕ್ಷಿಣಮಾರ್ಗದ ಸಮಬಂಧವನ್ನು ಲಕ್ಷ್ಯಲಕ್ಷಣಗಳ ಮೂಲಕ ವಿವರಿಸಿ, ಕೇವಲ ಲಕ್ಷ್ಯದ ಮೂಲಕ ಉತ್ತರಮಾರ್ಗವನ್ನು ಸ್ಪಷ್ಟಪಡಿಸಿದ್ದಾನೆ. (ಇದೇ ಕ್ರಮವನ್ನು ಮುಂದೆಯೂ ಅನುಸರಿಸಿದ್ದಾನೆ). ಇದರಿಂದ, ದಂಡಿಯಂತೆ ಮಾರ್ಗಕಾರನೂ ದಕ್ಷಿಣಮಾರ್ಗ ಪಕ್ಷಪಾತಿಯೆಂಬುದು ಸುವಿದಿತ. ಸಂಸ್ಕೃತಮಾರ್ಗದ ಲಕ್ಷಣವನ್ನು ಕನ್ನಡಕ್ಕೆ ಅಳವಡಿಸಿ ತೋರುವಲ್ಲಿ ಮಾರ್ಗಕಾರ ವೈಶಿಷ್ಟ್ಯ ಕಂಡು ಬರುತ್ತದೆ.

'ಸಮ'ವಲ್ಲದ್ದು 'ವಿಷಮ' ಎಂದಷ್ಟೇ ತಿಳಿಯಬೇಕೇ ಹೊರತು ವಿಷಮ ಬಂಧವನ್ನು ದೋಷ ಎಂದು ತಿಳಿಯಲಾಗದು. ಉತ್ತರ ಮಾರ್ಗದಲ್ಲಿ ಅದೇ 'ಗುಣ'.

ಪದ್ಯ ೬೦ : **ಮಧುರ ಗುಣ** : 'ಸಿಹಿಯಾದ ರಸವು ನಾಲಗೆಗೆ ಹೇಗೋ ಹಾಗೆ ಕಿವಿಗೆ ಇಂಪಾಗಿರುವ ಮಾತುಗಳ ಜೋಡಣೆಯೆ ಮಧುರ ಗುಣ. ವಿಶೇಷಲಕ್ಷಣದಿಂದ ವಿಶಿಷ್ಟವಾಗಿರುವ ಆ ಸೊಗಸಾದ ಮಾತಿನ ರೀತಿ (ವಿಶಿಷ್ಟ ಲಕ್ಷಣದಿಂದ ಉಪಲಕ್ಷಿತವಾದ ಲಕ್ಷ್ಯಗಳು) ಎರಡು ಮಾರ್ಗಗಳಲ್ಲಿಯೂ ಹೀಗಿದೆ.' – ಇದು ಪದ್ಯದ ತಾತ್ಪರ್ಯ.

ಇದಕ್ಕೆ ಮೂಲವಾದ ದಂಡಿಯ ಶ್ಲೋಕ :

"ಮಧುರಂ ರಸವದ್ವಾಚಿ ವಸ್ತುನ್ಯಪಿ ರಸಸ್ಥಿತಿ ।
ಯೇನ ಮಾದ್ಯಂತಿ ಧೀಮಂತೋ ಮಧುಸೇನ ಮಧುವ್ರತಾಃ ।

– ಕಾವ್ಯಾದರ್ಶ I, ೫೧

(ಮಾತು ರಸವತ್ತಾಗಿರುವುದು (ಸವಿಯಾಗಿರುವುದೆ) ಮಧುರ ; ಆ 'ರಸಸ್ಥಿತಿ' (ಸವಿ). 'ವಸ್ತು'ವಿನಲ್ಲಿಯೂ (ಎಂದರೆ ಅರ್ಥದಲ್ಲಿ) ಇರುತ್ತದೆ. ಮಧುವಿನಿಂದ ದುಂಬಿಗಳು ಸೊಕ್ಕೇರುವಂತೆ ಆ ಸವಿಯಿಂದ ಧೀಮಂತರು ಪರವಶರಾಗುತ್ತಾರೆ).

ಪದ್ಯ ೬೧ : ೬೦ನೆಯ ಪದ್ಯದಲ್ಲಿ ವಿವರಿಸಿರುವಂತೆ, 'ಇದು ದಕ್ಷಿಣ ಮಾರ್ಗವಿಭೇದದ ಮಧುರರಸ ಪ್ರಯೋಗ ; ಆಚಾರ್ಯನ (ಲಾಕ್ಷಣಿಕನ?) ಮನಸ್ಸಿಗೆ ಸಂತೋಷವುಂಟುಮಾಡತಕ್ಕ (ವಚೋ)ವಿತಾನ (ಎಂದರೆ, ಮಾತಿನ

ಹರಹು).' ಈ ಲಕ್ಷ್ಯಪದ್ಯದಲ್ಲಿ ಶರತ್ಕಾಲ ಪ್ರಾರಂಭದ ವರ್ಣನೆಯಿದೆ. ಶ್ವಸನಪಥ = ವಾಯುಮಾರ್ಗ, ಆಕಾಶ. ಒಸೆಗೆ = ಪ್ರಸನ್ನತೆಯ, ಪ್ರೀತಿಯ, ಕುರುಹು ; ಪ್ರೀತಿಯ ಕೊಡುಗೆ.

ಪದ್ಯ ೬೩ : 'ಇದು ಪ್ರಸಿದ್ಧವಾದ ಉತ್ತರಮಾರ್ಗ ವರ್ಗದ ಸವಿನುಡಿ' (ಪ.೬೨) ಇದೂ ಶರತ್ಕಾಲದ ವರ್ಣನೆಯೆ.

ಜಳಧರ = ಮೋಡ. ಅವಿಕಳ = ಪರಿಪೂರ್ಣ. ಕುವಳಯ = ನೈದಿಲೆ ; ಭೂಮಂಡಲ. ಅವಧಾರಿತ = ಆಧಾರ ; ಆಶ್ರಯ.

ದಕ್ಷಿಣೋತ್ತರ ಮಾರ್ಗಗಳ ಈ ಎರಡು ಲಕ್ಷ್ಯ ಪದ್ಯಗಳಲ್ಲಿಯೂ ಕಿವಿಗೆ ಇಂಪಾಗಿರುವ ವರ್ಣಗಳನ್ನುಳ್ಳ ಪದಗಳ ಜೋಡಣೆಯಿದೆ. (ಮಧುರ ಗುಣವೂ ಸಮಬಂಧದಂತೆಯೇ ಅಕ್ಷರ ಸಂಯೋಜನೆಯನ್ನು ಅವಲಂಬಿಸಿರತಕ್ಕದ್ದು. ಮೇಲುನೋಟಕ್ಕೆ ಇವೆರಡಕ್ಕೂ ಅಷ್ಟೇನೂ ವ್ಯತ್ಯಾಸಕಾಣುವುದಿಲ್ಲ. ಸೂಕ್ಷ್ಮವಾಗಿ ಪರಿಶೀಲಿಸಿದಲ್ಲಿ, 'ಕಿವಿಗೆಡಱ್ ಬಾರದ್ದು' ಸಮಬಂಧದ ಮುಖ್ಯ ಲಕ್ಷಣವೆಂದೂ, 'ಕಿವಿಗಿನಿದಾಗಿರುವುದು' ಮಧುರ ಗುಣದ ಲಕ್ಷಣವೆಂದೂ ತೋರಿಬರುತ್ತದೆ. 'ಸಮ'ದಲ್ಲಿ ಪ್ರಯತ್ನಪೂರ್ವಕವಾಗಿ ಕಿವಿಗಿಂಪಾದ ಪದಗಳನ್ನು ಯೋಜಿಸಬೇಕು). 'ಕಿವಿಗಿನಿದಾಗಿರ್ಪ ವಚನ ವಿರಚನೆ' ಎರಡು ಮಾರ್ಗಗಳಿಗೂ ಸಮಾನಲಕ್ಷಣವಾದರೂ, ಇವೆರಡರ ನಡುವಣ ಸೂಕ್ಷ್ಮ ವ್ಯತ್ಯಾಸಗಳನ್ನು ಗುರುತಿಸಿಕೊಳ್ಳಬೇಕು. ಮೊದಲನೆಯ ಲಕ್ಷ್ಯ ಪದ್ಯದಲ್ಲಿ (೬೧) ದಂತ್ಯಾಕ್ಷರಗಳ (ಅದರಲ್ಲಿ ವಿಶೇಷವಾಗಿ 'ಸ') ಪ್ರಾಧಾನ್ಯವನ್ನೂ, ಎರಡನೆಯ ಲಕ್ಷ್ಯಪದ್ಯದಲ್ಲಿ (೬೩) ಕಂಠ್ಯ ಮತ್ತು ಮೂರ್ಧನ್ಯಗಳ (ವಿಶೇಷವಾಗಿ 'ಕ' ಮತ್ತು 'ಳ') ಪ್ರಾಧಾನ್ಯವನ್ನೂ ಕಾಣಬಹುದು ; ಬಿಡಿ ಬಿಡಿಯಾದ ಸ್ಫುಟಾಕ್ಷರ ವಿನ್ಯಾಸವೂ ಉತ್ತರಮಾರ್ಗದ ಇನ್ನೊಂದು ವಿಶೇಷ ಲಕ್ಷಣ.

ದಂಡಿಯು 'ಕಾವ್ಯಾದರ್ಶ'ದಲ್ಲಿ 'ಶ್ರುತ್ಯನುಪ್ರಾಸ'ವು 'ರಸಾವಹ'ವಾಗಿರುವುದೆಂದೂ (ಎಂದರೆ, ಮಾಧುರ್ಯದಿಂದ ಕೂಡಿರುವುದೆಂದೂ) (I–೫೨), ಇದನ್ನು ಗೌಡರು (ಗೌಡರೀತಿಯನ್ನು ಅನುಸರಿಸುವವರು) (=ಔತ್ತರೇಯರು) ಆದರಿಸುವುದಿಲ್ಲವೆಂದೂ ಅವರಿಗೆ ವರ್ಣಾನುಪ್ರಾಸವೇ ಹೆಚ್ಚು ಪ್ರೀಯವೆಂದೂ, ಆದರೆ ವೈದರ್ಭರು (=ದಾಕ್ಷಿಣಾತ್ಯರು) ಶ್ರುತ್ಯನುಪ್ರಾಸವನ್ನು ಪ್ರೀತಿಸುವರೆಂದೂ ಹೇಳಿದ್ದಾನೆ

(I–೫೪).

[ಶ್ರುತ್ಯನುಪ್ರಾಸ ಎಂದರೆ, ಏಕಶ್ರುತಿಯ ಅಥವಾ ಒಂದೇ ಸ್ಥಾನದಲ್ಲಿ ಹುಟ್ಟುವ (ಕಂಠ್ಯ, ಮೂರ್ಧನ್ಯ, ತಾಲವ್ಯ ಇತ್ಯಾದಿ) ವರ್ಣಗಳುಳ್ಳ ಪದಗಳ ಪ್ರಯೋಗ (I–೫೨)].

ಅಲ್ಲದೆ, 'ಮಾಧುರ್ಯ'ದಲ್ಲಿ ಗ್ರಾಮ್ಯತೆಯು (ಅಸಭ್ಯತೆಯು) ದೋಷವಿರಕೂಡದೆಂಬುದೂ ದಂಡಿಯ ಅಭಿಮತ. ಎಂದಮೇಲೆ 'ಮಾಧುರ್ಯ' ಅರ್ಥನಿಷ್ಠವೂ ಆಗಿರಬೇಕೆಂದಾಯಿತು. ಮಾರ್ಗಕಾರನು ಇದನ್ನು ಸ್ಪಷ್ಟಪಡಿಸಿಲ್ಲ. (ಮುಳಿಯ ತಿಮ್ಮಪ್ಪಯ್ಯನವರು ಎರಡನೆಯ ಲಕ್ಷ್ಯದಲ್ಲಿನ ಅರ್ಥವೈಶಿಷ್ಟ್ಯವನ್ನು ಉತ್ತರಮಾರ್ಗದ್ಯೋತಕ ಎಂದು ಸೂಚಿಸಿದ್ದಾರೆ.)

ಪದ್ಯ ೬೪–೬೫ : **ನಿಬಿಡ (ಬಂಧ)** : ವರ್ಣಗಳ ಒಂದನ್ನೊಂದು ಅಗಲದೆ 'ತಗುಳಿ'ಕೊಂಡಿದ್ದರೆ (ಒತ್ತಾಗಿದ್ದರೆ) ಅದು ನಿಬಿಡಬಂಧ. ಇದಕ್ಕೆ ವ್ಯತಿರಿಕ್ತವಾಗಿ, ಅಲ್ಪಪ್ರಾಣಾಕ್ಷರಗಳಿಂದ ಕೂಡಿರುವ ರಚನೆ ಶಿಥಿಲ.

೬೫ನೆಯ ಪದ್ಯದ ಪೂರ್ವಾರ್ಧವು 'ನಿಬಿಡ'ಕ್ಕೂ ಉತ್ತರಾರ್ಧವು 'ಶಿಥಿಲ'ಕ್ಕೂ ಲಕ್ಷ್ಯಗಳು.

ದಂಡಿಯು ಹೇಳಿರುವ 'ಶ್ಲೇಷ'ವನ್ನೆ ಮಾರ್ಗಕಾರನು ನಿಬಿಡವೆಂದಿದ್ದಾನೆ. ನಿಬಿಡಬಂಧವು ಉತ್ತರಮಾರ್ಗೀಯವೆಂದೂ (ಗೌಡ), ಶಿಥಿಲವೂ ದಕ್ಷಿಣಮಾರ್ಗೀಯವೆಂದೂ ಗ್ರಹಿಸಬೇಕು.

ಸಂಧಿಸಮಾಸಗಳು ಹೆಚ್ಚಾಗಿರುವುದು ನಿಬಿಡದ ಲಕ್ಷಣ. ಇಲ್ಲಿ ಶಿಥಿಲ (ಸಡಿಲ) ಎಂದರೆ ದೋಷಯುಕ್ತ ಎಂದು ತಿಳಿಯಕೂಡದು ; ಅದು ಗುಣದ ಇನ್ನೊಂದು ಪ್ರಕಾರವಷ್ಟೆ.

ಪದ್ಯ ೬೬–೬೯ : **ಕಾಂತಗುಣ :** ೬೬ನೆಯ ಪದ್ಯದ ಉತ್ತರಾರ್ಧದಲ್ಲಿ 'ಕಮನೀಯ ಗುಣಮಪ್ಪುದು ನಿಯತಂ ಕಾಂತಂ ಅಭಿಗೀತಾರ್ಥಂ' ಎಂದು ದಕ್ಷಿಣ ಮಾರ್ಗದ ಕಾಂತಗುಣದ ಲಕ್ಷಣವನ್ನು ತಿಳಿಸಿ, ೬೮ನೆಯ ಪದ್ಯದಲ್ಲಿ 'ಅಸಂಭಾವಿತಾರ್ಥಂ ಉದ್ದಾಮೋಕ್ತಂ ಉತ್ತರಮಾರ್ಗಗತಾಂತರಂ' ಎಂದು ಔತ್ತರೇಯ 'ಕಾಂತ'ಗುಣವನ್ನು ವಿವರಿಸಿದ್ದಾನೆ. ದಕ್ಷಿಣಮಾರ್ಗದ 'ಕಮನೀಯ'ವಾದ (ಮನಸೆಳೆಯುವ) 'ಅಭಿಗೀತಾರ್ಥ'ವೆಂದರೆ, ಪಂಡಿತರಲ್ಲದ ಸಾಮಾನ್ಯರಿಗೂ ಕೂಡ ಹೊಳೆಯುವಂತೆ, ಆಕರ್ಷಕವಾಗಿರುವಂತೆ, ನೇರವಾಗಿ ತಿಳಿಸಿದ 'ಲೋಕಪ್ರಸಿದ್ಧ'ವಾದ ಅರ್ಥ.

ಇದು ದಂಡಿಯ ವಾಕ್ಯದಿಂದ ಸ್ಪಷ್ಟವಾಗುತ್ತದೆ.

"ಕಾಂತಂ ಸರ್ವಜಗತ್ಕಾಂತಂ ಲೌಕಿಕಾರ್ಥಾನತಿಕ್ರಮಾತ್ ।
ತಚ್ಚವಾರ್ತಾಭಿಧಾನೇಷು ವರ್ಣನಾಸ್ವಪಿ ದೃಶ್ಯತೇ ॥" – I, ೮೫

(ಲೋಕಸಿದ್ಧಾರ್ಥವನ್ನು ಅತಿಕ್ರಮಿಸದೆ ಇರುವುದರಿಂದಾಗಿ 'ಕಾಂತ'ವು ಸರ್ವಜನಕ್ಕೂ ಮನೋಹರವಾಗಿರುವುದು. ಅದು ಲೋಕವಾರ್ತೆಯ ನಿರೂಪಣೆಯಲ್ಲಿ ಮಾತ್ರವಲ್ಲದೆ, ವರ್ಣನೆಗಳಲ್ಲಿಯೂ ಕಂಡುಬರುವುದು.)

ಪದ್ಯ ೬೭ರಲ್ಲಿ ದಕ್ಷಿಣ ಮಾರ್ಗಕ್ಕೆ ಲಕ್ಷ್ಯವಿದೆ. ಅದು ಮನೆಯಾತನೊಬ್ಬನು ಪೂಜ್ಯ ಅಭ್ಯಾಗತನನ್ನು ಶ್ಲಾಘಿಸುವ ಅರ್ಥವನ್ನೊಳಗೊಂಡಿದೆ. ಅರ್ಥ ವಿವರಣೆ : "ಸೂರ್ಯನ ಕಿರಣಗಳು ಮೋಡದ ನಡುವಣ ತೆರವಿನಲ್ಲೆಲ್ಲಾ ವ್ಯಾಪಿಸಿಕೊಂಡಿದ್ದರೂ ಕೂಡ, ತಮ್ಮನ್ನು ಕಾಣುವಷ್ಟರಲ್ಲಿಯೆ ಹೊರಟುಹೋಗಿ, ನನ್ನ ಮನಸ್ಸನ್ನು ಬಿಗಿವಿಡಿದಿದ್ದ ಕತ್ತಲೆಯ ಕಟ್ಟು ಭಯಪಟ್ಟು ಚೆದರಿತು." ಬಂದಾತನು ಜ್ಞಾನಿಯಾದ್ದರಿಂದ, ಅವನು ಸೂರ್ಯನಿಗಿಂತ ಪ್ರಕಾಶಮಾನವಾಗಿದ್ದು ಮನೆಯನ್ನು ವ್ಯಾಪಿಸಿದ್ದ ಕತ್ತಲೆಯೊಂದಿಗೆ ಮನೆಯಾತನ ಅಜ್ಞಾನವೆಂಬ ಕತ್ತಲೆಯೂ ತೊಲಗಿತೆಂಬ ಅರ್ಥವು ಹೊಳೆಯುತ್ತದೆ.

ಘನ ವಿವರ = (ಶ್ಲೇಷಾರ್ಥ) ಮೋಡಗಳ ನಡುವಣ ತೆರಪು ; ಶ್ರೇಷ್ಠವಾದ ಏಕಾಂತ ಸ್ಥಳದ (ಮನೆಯ) ಒಳಭಾಗ (ವಿವರ : A Solitary place : Apte). ಧ್ವಾಂತ = ಕತ್ತಲೆ ; ಅಜ್ಞಾನವೆಂಬ ಕತ್ತಲೆ. ಅಳರ್ = ಹೆದರು, ಭಯಪಡು ('ಭಯೇ' – ಶ.ಮ.ದ.)

ಪದ್ಯ ೬೮ : ಉತ್ತರ ಮಾರ್ಗದ ಕಾಂತಗುಣ : 'ಅಸಂಭಾವಿತಾರ್ಥವುಳ್ಳದ್ದಾಗಿದ್ದು, 'ಉದ್ದಾಮೋಕ್ತ'ವಾಗಿರುವಂಥದು, ಎಂದರೆ ಸಾಮಾನ್ಯ ಜನರು ಸಂಭಾವನೆ ಮಾಡದಂಥ (ಮೆಚ್ಚದಂಥ) ಅರ್ಥವನ್ನು ಹೊಂದಿದ್ದು, 'ಉದ್ದಾಮ' ರೀತಿಯಲ್ಲಿ (ಎಂದರೆ ಘನವಿದ್ವಾಂಸರು ಮೆಚ್ಚುವಂತೆ) ಉಕ್ತವಾಗಿರುವುದು. ಇದೇ ಆಶಯವನ್ನು ದಂಡಿ ಇನ್ನೂ ಸ್ಪಷ್ಟವಾಗಿ ಹೇಳಿರುವನು:

"ಲೋಕಾತೀತ ಇವಾತ್ಯರ್ಥಮಧ್ಯಾರೋಪ್ಯ ವಿವಕ್ಷಿತಃ ।
ಯೋಽರ್ಥಸ್ತೇನಾತಿತುಷ್ಯಂತಿ ವಿದಗ್ಧಾ ನೇತರೇ ಜನಾಃ ॥" –I, ೮೯

(ಲೋಕಾತೀತವಾಗಿದ್ದು ಅಧ್ಯಾರೋಪಗಳನ್ನು ಅಪೇಕ್ಷಿಸುವಂತಹ ಅತ್ಯುಕ್ತಿಯ ಅರ್ಥದಿಂದ ವಿದ್ವಾಂಸರು ಸಂತೋಷಪಡುವರೇ ಹೊರತು ಇತರ ಜನರಲ್ಲ).

ಪದ್ಯ ೬೯ : ಉತ್ತರ ಮಾರ್ಗದ 'ಕಾಂತ'ಕ್ಕೆ ಲಕ್ಷ್ಯ : ಪದ್ಯದ ಅರ್ಥ ವಿವರಣೆ

: "ಪ್ರಕಾಶಮಾನವಾದ ತಮ್ಮ ಆಗಮನವೆಂಬ ಜಲಧಾರೆಗಳು (ಮಳೆ) ನನ್ನ ಒಳಗಿನ ಕೊಳೆಯೆಲ್ಲವನ್ನೂ ಏನೂ ಉಳಿಯದಂತೆ ತೊಳೆಯಲು, ನಾನು ಲೋಕಕ್ಕೆಲ್ಲ ಪವಿತ್ರವಾದ ನಡತೆಯುಳಳಅಳವನಾದೆನು." (ತಮ್ಮ ಆಗಮನಮಾತ್ರದಿಂದ ನಾನು ಪವಿತ್ರನಾದೆ – ಎಂದು ತಾತ್ಪರ್ಯ).

ಕಾಂತಗುಣವು ಪದಬಂಧದ ರೀತಿಯನ್ನು ಅವಲಂಬಿಸಿರುವುದು ಮಾತ್ರವಲ್ಲದೆ, ಅರ್ಥನಿಷ್ಠವೂ ಆಗಿದೆಯೆಂಬುದನ್ನು ಗಮನಿಸಬೇಕು. ಮೊದಲನೆಯ ಲಕ್ಷ್ಯದಲ್ಲಿ, ಅಭ್ಯಾಗತನನ್ನು ಸೂರ್ಯನಿಗೆ ಹೋಲಿಸಿರುವುದು ಲೋಕಪ್ರಸಿದ್ಧವಾಗಿರುವುದಲ್ಲದೆ ಹೇಳಿರುವ ರೀತಿಯೂ ಸ್ಪಷ್ಟವಾಗಿದೆ. ಎರಡನೆಯ ಲಕ್ಷ್ಯ ಪದ್ಯದಲ್ಲಿ ಅಭ್ಯಾಗತನ ಆಗಮನವನ್ನು 'ಜಲಧಾರೆ'ಗಳೆಂದೂ ಅವು 'ಅಂತರ್ಮಲ'ವನ್ನು ತೊಳೆಯುವುವೆಂದೂ ರೂಪಕಮಾಡಿರುವುದು 'ಅಸಂಭಾವಿತ' ; ಅಲ್ಲದೆ, 'ಭವದಭಾಗ್ಯಮ', 'ಮದಂತರ್ಮಲ', 'ಚರಿತನೆನ್' (ಚರಿತನ್ + ಎನ್ = ಚರಿತನಾಗಿದ್ದೇನೆ), ಮುಂತಾದ ಪ್ರಯೋಗಗಳು 'ಉದ್ದಾವೋಕ್ತ'ಗಳು ಎಂದರೆ ಪಂಡಿತಪ್ರಿಯವಾದವು.

ಪದ್ಯ ೭೦–೭೨ : **ಸುಕುಮಾರ ಗುಣ :** ಸುಕುಮಾರವಾದ (ಕೋಮಲ, ಕರ್ಕಶವಲ್ಲದ) ಅಕ್ಷರಗಳಿಂದಲೂ ಪದಗಳಿಂದಲೂ ವಿಶಿಷ್ಟವಾದ ಪ್ರಯೋಗವು (ಬಂಧವು) ಸುಕುಮಾರವೆನಿಸುವುದು.' ೭೨ನೆಯ ಲಕ್ಷ್ಯಪದ್ಯದಲ್ಲಿ, ಮ,ಳ,ನ – ಈ ಕೋಮಲ ವರ್ಣಗಳ ಪ್ರಾಚುರ್ಯವನ್ನು ಕಾಣಬಹುದು. (ಎಲ್ಲ ವರ್ಣಗಳೂ ಕೋಮಲವಾದರೆ ಬಂಧದಲ್ಲಿ ಶೈಥಿಲ್ಯದೋಷವುಂಟಾಗುವುದೆಂದು ದಂಡಿ ಎಚ್ಚರಿಸಿದ್ದಾನೆ. – ಕಾವ್ಯಾದರ್ಶ, I, ೬೯). ಇದು ದಕ್ಷಿಣಮಾರ್ಗಕ್ಕೆ ಲಕ್ಷ್ಯ. ಇದಕ್ಕೆ ವಿಪರ್ಯಯವಾಗಿ 'ನಿಷ್ಠುರ'ವಾದ (ಕರ್ಕಶವಾದ) ವಿವಿಧಾಕ್ಷರಗಳನ್ನು ಬಳಸುವುದು ಉತ್ತರಮಾರ್ಗದ ರೀತಿ ; ೭೨ನೆಯ ಪದ್ಯದ ಉತ್ತರಾರ್ಧವು ಇದಕ್ಕೆ ನಿದರ್ಶನ. ಇದರಲ್ಲಿ ತ್ರಿ–ಶಾ–ಶ್ವರ–ತ್ಯ–ತ್ಯು–ರ್ಥ–ದ್ರ, ಈ ಕರ್ಕಶ ವರ್ಣಗಳ ಪ್ರಾಚುರ್ಯವನ್ನು ಕಾಣಬಹುದು ; ಅಲ್ಲದೆ, ತ್ರಿದಶ + ಅಧೀಶ್ವರ + ಭೂತಿ + ಅತಿ + ಉದಾರ, ವಿವಿಧ + ಅರ್ಥ + ವಿಭವನ್ – ಎಂಬೀ ದೀರ್ಘ ಸಮಾಸಗಳನ್ನೂ ಗಮನಿಸಬಹುದು.

ತೊಳಪ (ತೊಳಗುವ) = ಹೊಳೆಯುವ. ಎಳವೆಱ = ಬಾಲಚಂದ್ರ. ಅಳಿಕುಳ = ದುಂಬಿವಿಂಡು. ಎಸಪ (ಎಸಗುವ) = ಬೀಸುವ, ತೀಡುವ,

ಕಳಿಕಾಂಕುರ = ಮೊಗ್ಗಿನ ತುದಿ. ಚೂತತತಿ = ಮಾವಿನ ಮರಗಳ ಗುಂಪು.

ಪದ್ಯ ೭೩–೭೭ : **ಸಮಾಹಿತ ಗುಣ :** 'ಒಂದಱ' (ಒಂದು ಪದಾರ್ಥದ, ಎಂದರೆ ಅದಕ್ಕೆ ಸಂಬಂಧಪಟ್ಟ) ಮಾತುಗಳನ್ನು 'ಪೆಱತೊಂದರೊಳ್' (ಇನ್ನೊಂದು ಪದಾರ್ಥದಲ್ಲಿ) 'ಅಱಿದು ಇಟ್ಟು ಕೂಡೆ ಪೇೞ್ದೊಡೆ' (ಉದ್ದೇಶಪೂರ್ವಕವಾಗಿ ಆರೋಪಿಸಿ ಹೊಂದುವಂತೆ ಹೇಳಿದರೆ) ಅದು ಸಮಾಹಿತವೆನಿಸುವುದು. ಇದನ್ನೇ ದಂಡಿ 'ಸಮಾಧಿ' ಯೆಂದಿದ್ದಾನೆ :

"ಅನ್ಯಧರ್ಮಸ್ತತೋऽನ್ಯತ್ರ ಲೋಕಸೀಮಾನುರೋಧಿನಾ ।
ಸಮ್ಯಗಾಧೀಯತೇ ಯತ್ರಸ ಸಮಾಧಿಃ ಸ್ಮೃತೋಯಥಾ ॥" –I, ೯೩

(ಲೋಕಮರ್ಯಾದೆಯನ್ನು ಮೀರದೆ ಒಂದರ ಧರ್ಮವನ್ನು ಇನ್ನೊಂದಕ್ಕೆ ಚೆನ್ನಾಗಿ ಆರೋಪಿಸುವುದೇ ಸಮಾಧಿ. ('ಲೋಕಸೀಮಾನುರೋಧನಾ' ಎಂಬ ಮಾತಿನ ಆಶಯವನ್ನು 'ಅಱಿದು' ಎಂಬ ಒಂದು ಚಿಕ್ಕ ಮಾತಿನಿಂದಲೂ, 'ಸಮ್ಯಕ್ ಅಧೀಯತೇ' ಎಂಬ ಮಾತುಗಳನ್ನು 'ಇಟ್ಟು ಕೂಡೆ ಪೇೞ್ದೊಡೆ' ಎಂಬ ಮಾತುಗಳಿಂದಲೂ ಅನುವಾದಿಸಿರುವ ಮಾರ್ಗಕಾರನ ಅಚ್ಚಗನ್ನಡದ ಬಗೆ ಮೆಚ್ಚುವಂತಿದೆ).]

ಪದ್ಯ ೭೪ 'ಸಮಾಹಿತ'ಕ್ಕೆ ಲಕ್ಷ್ಯ ; ಇದರ ತಾತ್ಪರ್ಯ : 'ಕನ್ನೈದಿಲೆಗಳು ಮುಚ್ಚಿಕೊಳ್ಳುತ್ತಿರಲು (ಬಾಡುತ್ತಿರಲು), ಸಂಧ್ಯೆಯಿಂದ ಕೂಡಿಕೊಂಡಿರುವವನೂ, ಅರಳುತ್ತಿರುವ ಕಮಲಗಳೆಂಬ ಲಕ್ಷ್ಮಿಗೆ ಒಡೆಯನೂ; ಕತ್ತಲೆಯನ್ನು ಸಂಹಾರ ಮಾಡಿದವನೂ ಆದ ಸೂರ್ಯನು ಉದಯಿಸಿದನು.' ೭೫ನೆಯ ಪದ್ಯದಲ್ಲಿ, 'ವಿನಿಮೀಳಾದಿಗಳ್' ಎಂದರೆ (೭೪ನೆಯ ಪದ್ಯದಲ್ಲಿರುವ) 'ವಿನಿಮೀಳಿತ' (=ರೆಪ್ಪೆ ಮುಚ್ಚಿದ), 'ಉನ್ಮೀಲ' (=ರೆಪ್ಪೆತೆರೆದ), 'ವಿನಿಹತ' (ಸಂಹಾರಮಾಡಲ್ಪಟ್ಟ), 'ಆಶ್ಲೇಶಂ' (=ಆಲಿಂಗನ, ಕೂಡಿಕೊಂಡಿರುವುದು) – ಮುಂತಾದ 'ಲೋಚನಾದಿಧರ್ಮ'ಗಳನ್ನು (ಕಣ್ಣು ಮುಂತಾದವುಗಳ ಸಹಜ ಕ್ರಿಯೆಗಳನ್ನು) ಕನ್ನೈದಿಲೆ, ಮುಂತಾದವುಗಳಲ್ಲಿ 'ನೆನೆದು' (ಆರೋಪಿಸಿ) ಹೇಳುವುದು 'ಸಮಾಹಿತಾಲಂಕಾರ'ವೆನಿಸುವುದು – ಎಂದು ಲಕ್ಷ್ಯಪದ್ಯಕ್ಕೆ ವಿವರಣೆಯಿತ್ತಿದ್ದಾನೆ.

(ಇಲ್ಲಿ, 'ಸಮಾಹಿತಾಲಂಕಾರ' ಎಂದರೆ, ಒಂದು 'ಅರ್ಥಾಲಂಕಾರ'ದ ಪ್ರಕಾರ ಎಂದು ಮಾರ್ಗಕಾರನು ಉದ್ದೇಶಿಸಿರಲಾರ ಎಂದು ತೋರುತ್ತದೆ. ಏಕೆಂದರೆ

ಮುಂದೆ ಅವನು 'ಸಮಾಹಿತಾಲಂಕಾರ'ವನ್ನು ಅರ್ಥಾಲಂಕಾರದ ಪ್ರಕರಣದಲ್ಲಿ (ನೋಡಿ : III–೧೨೩) ಪ್ರತ್ಯೇಕವಾಗಿ ವಿವೇಚಿಸಿದ್ದಾನೆ. ಆ ಸಮಾಹಿತಾಲಂಕಾರದ ಲಕ್ಷಣ ಬೇರೆಯಾದರೂ, ಈ 'ಸಮಾಹಿತಗುಣ'ದಲ್ಲಿ ಅರ್ಥಾಲಂಕಾರದ ಸೊಬಗೆಲ್ಲ ಇರುವುದರಿಂದ, ಇದನ್ನು ಮಾರ್ಗಕಾರನು ಕಾವ್ಯಕ್ಕೆ ಅಲಂಕಾರಪ್ರಾಯವಾಗುವುದು ಎಂದು ಉದ್ದೇಶಿಸಿರಬಹುದು ಎಂದು ತಿಳಿದರೆ ತಪ್ಪಾಗದು).

'ಸಮಾಹಿತ'ಗುಣದ ಇನ್ನೊಂದು ಲಕ್ಷ್ಯಪದ್ಯ (೭೬) : ಈ ಪದ್ಯದಲ್ಲಿಯೂ ಹಿಂದಿನ ಪದ್ಯದ 'ವಿನಿಹತ', 'ವಿನಿಮೀಳಿತ' ಮುಂತಾದ ಪದಗಳೇ ಪ್ರಯೋಗವಾಗಿದ್ದರೂ ಇವು ವಾಚ್ಯಾರ್ಥವನ್ನು ಮಾತ್ರ ತಿಳಿಸುತ್ತಿದ್ದು, ಒಂದರ ಧರ್ಮವನ್ನು ಇನ್ನೊಂದಕ್ಕೆ ಅಧ್ಯಾರೋಪಣೆ ಮಾಡುತ್ತಿಲ್ಲ. ೭೭ನೆಯ ಪದ್ಯದ ಪೂರ್ವಾರ್ಧದಲ್ಲಿ, 'ಈ ಕುಱುಪುಗಳಿಂದ ಅನೇಕ ಪದಪ್ರಯೋಗಾಂತರ'ವನ್ನು ಅರಿವುದೆಂದು ತಿಳಿಸಿರುವುದರಿಂದ, ಈ ಗುಣವೂ ಶಬ್ದನಿಷ್ಠ ಎಂಬುದು ಸ್ಪಷ್ಟ. ಆದರೆ, ಮೊದಲ ಲಕ್ಷ್ಯಪದ್ಯದಲ್ಲಿ (೭೫) ಅರ್ಥದ 'ಕೊಂಕು' (ವಕ್ರತೆ) ಇರುವುದರಿಂದ ಅದು ಉತ್ತರ ಮಾರ್ಗೀಯವೆಂದೂ ವಾಚ್ಯಾರ್ಥ ಪ್ರಧಾನವಾದದ್ದು ದಕ್ಷಿಣ ಮಾರ್ಗೀಯವೆಂದೂ ಭಾವಿಸಬಹುದು. ಆದರೆ, ಎರಡನೆಯ ಲಕ್ಷ್ಯದಲ್ಲಿ ಧರ್ಮದ ಅಧ್ಯಾರೋಪವೇ ಇಲ್ಲದಿರುವುದರಿಂದ ಇದು ಲಕ್ಷಣಕ್ಕೆ ಸಂಬಂಧಪಟ್ಟಂತೆ 'ಅನೇಕ ಪ್ರದಪ್ರಯೋಗಾಂತರ'ವನ್ನು ಉದಾಹರಿಸಿ (ನೋಡಿ : ಕಾವ್ಯಾದರ್ಶ ; I, ೯೪–೯೯), 'ಈ ಸಮಾಧಿ (ಸಮಾಹಿತ)ಯೆಂಬ ಗುಣವು ಕಾವ್ಯಸರ್ವಸ್ವ. ಕವಿಗಳೆಲ್ಲರೂ ಇದನ್ನು ಆಶ್ರಯಿಸಿದ್ದಾರೆ' (I–೧೦೦) ಎಂದಿದ್ದಾನೆ.

ಪದ್ಯ ೭೭–೭೮ : **ಪ್ರಸನ್ನ ಗುಣ :** 'ಲೋಕಪ್ರಸಿದ್ಧವಾದ ಅರ್ಥವನ್ನು ಸುಂದರವಾಗಿ ಸುಲಭವಾಗಿ ತಿಳಿಸುವ ವಿವೇಕದ ಮಾತುಗಾರಿಕೆ'ಯೆ ಪ್ರಸನ್ನ. 'ಶರತ್ಕಾಲದ ನಿರ್ಮಲವಾದ ಆಕಾಶದಲ್ಲಿ ಚಂದ್ರ ಮೆರೆಯುತ್ತಿತ್ತು' ಎಂಬುದನ್ನು ಲಕ್ಷ್ಯಪದ್ಯದ (ಪ.೭೮) ಪೂರ್ವಾರ್ಧದಲ್ಲಿ ನೇರವಾದ ಸ್ಪಷ್ಟೋಕ್ತಿಗಳಿಂದ (ದಾಕ್ಷಿಣಾತ್ಯ ಮಾರ್ಗದಲ್ಲಿ) ತಿಳಿಸಿದ್ದರೆ, ಉತ್ತರಾರ್ಧದಲ್ಲಿ ಅದೇ ಪ್ರಸಿದ್ಧಾರ್ಥವನ್ನು ಕ್ಲಿಷ್ಟವಾದ ಶಬ್ದಗಳಿಂದ (ಔತ್ತರೇಯ ಮಾರ್ಗದಲ್ಲಿ) ಹೇಳಿದೆ. 'ವ್ಯುತ್ಪನ್ನಮಿತಿ ಗೌಡೀಯೈರ್ನಾತಿ ರೂಢಮಪೀಷ್ಯತೇ' ('ವ್ಯಾಕರಣಪಾಂಡಿತ್ಯವನ್ನು ಪ್ರದರ್ಶಿಸುವ ಅತಿರೂಢವಲ್ಲದ ಶಬ್ದಗಳು ಗೌಡೀಯರಿಗೆ ಪ್ರಿಯ') ಎಂದು ದಂಡಿ (I, ४६) ಸ್ಪಷ್ಟವಾಗಿ ಹೇಳಿರುವಂತೆ

ಮಾರ್ಗಕಾರನು ಉತ್ತರ ಮಾರ್ಗದ ವಿಶೇಷ ಲಕ್ಷಣವನ್ನು ತಿಳಿಸದಿದ್ದರೂ, ಲಕ್ಷ್ಯದಲ್ಲಿ ಬಳಸಿರುವ ಮಾತುಗಳಿಂದ (ಉದಾ., ಶರತ್ = ವರ್ಷಾಂತ ಸಮಯ, ಹಿಮಕರಂ = ಉಷ್ಣೇತ್ತರ ಕಿರಣಂ) ಅವನ ಆಶಯವು ಸ್ಪಷ್ಟವಾಗುವಂತಿದೆ.

(ದಂಡಿಯ 'ಪ್ರಸಾದಗುಣ'ವನ್ನೆ ಇಲ್ಲಿ 'ಪ್ರಸನ್ನ' ಎಂದು ಕರೆದಿದೆ. ಎಲ್ಲರಿಗೂ ತಿಳಿಯುವಂತಿರುವುದೇ ಪ್ರಸನ್ನತೆ ಅಥವಾ ಪ್ರಸಾದಗುಣ. 'ಪ್ರತೀತಿಸುಭಗಂ ವಚಃ' ('ಎಲ್ಲರಿಗೂ ತಿಳಿಯುಂತಿರುವ ಮಾತುಗಳು') ಎಂಬುದನ್ನೆ ಮಾರ್ಗಕಾರನು 'ಲೋಕಪ್ರತೀತ ಸುಭಗ ವಿವೇಕಾಳಾಪಂ' ಎಂದು ಅನುವಾದಿಸಿದ್ದಾನೆ.)

ಪದ್ಯ ೭೯–೮೦ : ಉದಾರ : ತಾತ್ಪರ್ಯ : "ಒಂದು ವಸ್ತುವಿನಲ್ಲಿ ಅಡಗಿರುವ ಅದರ ನೈಜಸ್ವಭಾವವನ್ನು ಪರಿಭಾವಿಸಿ ಅದನ್ನು 'ಅಗ್ಗಳಮಾಗೆ' (ಅತಿಶಯವಾಗುವಂತೆ) ನಿರೂಪಿಸಿದರೆ ಅದು ಉದಾರಗುಣ. ವಿಚಾರ ಮಾಡಿದಲ್ಲಿ, ಕಾವ್ಯದ ಪದವಿಯ 'ನೆಗಟ್ತೆಗೆ' (ಕೀರ್ತಿಗೆ, ಮೇಲ್ಮೆಗೆ) ಅದು ಅಗತ್ಯ ಕಾರಣ. ಅದರ ರೀತಿ ಹೀಗೆ."

ಈ ಗುಣವನ್ನು ದಂಡಿ ಹೀಗೆ ವಿವರಿಸಿದ್ದಾನೆ :

"ಉತ್ಕರ್ಷವಾನ್ ಗುಣಃ ಕಶ್ಚಿದ್ಯಸ್ಮಿನ್ನುಕ್ತೇ ಪ್ರತೀಯತೇ ।
ತದುದಾರಾಹ್ವಯಂ ತೇನ ಸನಾಥಾ ಕಾವ್ಯಪದ್ಧತಿಃ॥" – ಕಾವ್ಯಾದರ್ಶ, I–೭೬

(ಯಾವುದನ್ನು ಹೇಳುವುದರಿಂದ ಉತ್ಕರ್ಷ ಹೊಂದಿದ ಗುಣವು ಪ್ರತೀತವಾಗುವುದೊ ಅದು ಉದಾರ. ಕಾವ್ಯ ಪದ್ಧತಿಯು ಇದರಿಂದ (ನಾಥನುಳ್ಳ ಪತಿಯಂತೆ) ಮಾನ್ಯವಾಗುತ್ತದೆ.)

ದಂಡಿಯ ಆಶಯವನ್ನು ಮಾರ್ಗಕಾರನು ವಿವರಿಸಿ ಹೇಳಿದ್ದಾನೆ. ಮಾತ್ರವಲ್ಲ ; ದಂಡಿಯ ಪ್ರಕಾರ, ಗುಣೋತ್ಕರ್ಷವನ್ನು ಅಥವಾ ಗುಣಾತಿಶಯವನ್ನು ಹೇಳುವುದಷ್ಟೆ 'ಉದಾರತ್ವ' ; ಮಾರ್ಗಕಾರನ ಮೇರೆಗೆ, 'ಇರುವ ಗುಣವನ್ನು ಅತಿಶಯ ಮಾಡಿ ಹೇಳುವುದು' ಉದಾರ ಗುಣ. ಈ ಸೂಕ್ಷ್ಮ ವ್ಯತ್ಯಾಸವನ್ನು ಗಮನಿಸಬೇಕು.

('ಎಲೈದೇವನೆ, ಬೇಡುವವರ ದೀನ ದೃಷ್ಟಿಯು ಅದೊಮ್ಮೆ ನಿನ್ನ ಮುಖದ ಮೇಲೆ ಬಿದ್ದರೆ ಸಾಕು, ಮತ್ತೆ ಅದೇ ರೀತಿ ಬೇರೆ ಯಾರ ಮುಖವನ್ನೂ ನೋಡುವುದಿಲ್ಲ' – ಇದು ದಂಡಿಯ ಲಕ್ಷ್ಯದ ತಾತ್ಪರ್ಯ. ಇಲ್ಲಿ, ದಂಡಿಯೇ ವಿವರಿಸಿರುವಂತೆ, ರಾಜನ ತ್ಯಾಗಗುಣದ ಉತ್ಕರ್ಷವು ಸೂಚಿತವಾಗಿದೆ.)

ಮಾರ್ಗಕಾರನ ಲಕ್ಷ್ಯಪದ್ಯದ (೮೦) ತಾತ್ಪರ್ಯ : 'ನಿನ್ನಂತಹ ಉದಾರ

ಪುರುಷೋತ್ತಮರು ಯಾರಿದ್ದಾರೆ? ಹಗೆಗಳ ಸಮೂಹವನ್ನು ಕೊಂದಿದ್ದರೂ ಕೂಡ, ಅವರು ದೇವತಾಸ್ತ್ರೀಯರೊಂದಿಗೆ ಕ್ರೀಡೆಯಾಡುತ್ತ, ಅವರ ಆಲಿಂಗನದಿಂದ ಮೊದಲಾಗುವ ಸಂಭೋಗಸುಖದಲ್ಲಿ ಅವರನ್ನು ನೆಲೆಗೊಳಿಸಿದ್ದೀಯೆ.'[೨೯]

ಲಕ್ಷ್ಯದಲ್ಲಿ ಉಕ್ತನಾದ ರಾಜನಲ್ಲಿ ಉದಾರತ್ವವು ಅವನ ಸ್ವಾಭಾವಿಕ ಗುಣ, ಹಗೆಗಳನ್ನು ಕೊಂದಮೇಲೂ ಅವರಲ್ಲಿ ಉದಾರತ್ವವನ್ನು ಮೆರೆದನೆಂದು ವರ್ಣಿಸಿರುವುದು ಅವನ ಗುಣವನ್ನು ಅತಿಶಯಿಸಿ ಹೇಳಿದಂತಾಗಿದೆ.

ಅಗ್ಗಳ = ಶ್ರೇಷ್ಠತೆ, ಅತಿಶಯ. ನೆಗಟ್ತೆ = ಖ್ಯಾತಿ, ಗ್ಮೆಮೆ. ಪಾಂಗು = ರೀತಿ, ಬಗೆ. ಅರಾತಿ = ಹಗೆ. ಪರಿರಂಭ = ಆಲಿಂಗನ. ನಿಱಿಪರ್ = ನೆಲೆಗೊಳಿಸುವವರು, ಸ್ಥಾಪಿಸುವವರು (ಧಾ., ನಿಱಿಸು).

ಪದ್ಯ ೮೧ : ಮೇಲಿನದು ದಕ್ಷಿಣಮಾರ್ಗದ ಉದಾರಗುಣವೆಂದು ಹೇಳಿ, 'ಉದೀಚ್ಯದ ಉರು ವಿಶೇಷಣಯುತಮಪ್ಪುದಂ ... ಒಲ್ವರ್' ('ಉತ್ತರ ಮಾರ್ಗದ ಶ್ರೇಷ್ಠವಾದ ವಿಶೇಷಣಗಳಇಂದ ಕೂಡಿರುವ ನಿರೂಪಣೆಯನ್ನು ಕೆಲವರು ಇಷ್ಟಪಡುವರು') ಎಂದು ಉದೀಚ್ಯ (ಉತ್ತರ) ಮಾರ್ಗದ ಉದಾರಗುಣವನ್ನು ತಿಳಿಸಿದ್ದಾನೆ.

ದಂಡಿಯು ಇದನ್ನು 'ಗೌಡೀಯ' ಎಂದು ಸ್ಪಷ್ಟವಾಗಿ ತಿಳಿಸದೆ, ಹೀಗೆ ಹೇಳಿದ್ದಾನೆ :

"ಶ್ಲಾಘ್ಯೈರ್ವಿಶೇಷಣೈರ್ಯುಕ್ತದಾರಂ ಕೈಶ್ಚಿದಿಷ್ಯತೇ ।
ಯಥಾ ಲೀಲಾಂಬುಜ ಕ್ರೀಡಾಸರೋ ಹೇಮಾಂಗದಾದಯಃ ॥" –I, ೭೯

---

೨೯. ದಿ। ಮುಳಿಯ ತಿಮ್ಮಪ್ಪಯ್ಯನವರು ಸೂಚಿಸಿರುವಂತೆ "ವೆಂಗಿರಾಜಾದಿಗಳನ್ನು ನಿರ್ನಾಮವೆಸಗಿದ 'ಪುರುಷೋತ್ತಮ', 'ಉದಾರ' ಮೊದಲಾದ ಬಿರುದುಗಳುಳ್ಳ ಅಮೋಘವರ್ಷನ (ಕವಿಯ ಆಶ್ರಯದಾತನಾದ ನೃಪತುಂಗನ) ಮಹಿಮೆಯೇ ಈ ಪದ್ಯದಲ್ಲಿ ವರ್ಣಿತವಾಗಿರುವಂತಿದೆ" ಎಂದು ಊಹಿಸಬಹುದು.

ಈ ಉದಾರ ಗುಣವು ಬಂಧಗತವಾಗಿರದೆ ಅರ್ಥಗತವಾಗಿರುವುದೂ ಗಮನಾರ್ಹ. ಆದ್ದರಿಂದ, 'ವಸ್ತುಗತ ಸ್ಥಿತಿಯನ್ನು ಅತಿಶಯ ಮಾಡಿ ಹೇಳುವ ಈ ಉದಾರ ಗುಣದಿಂದಲೇ ನಾಲ್ಕು ಅರ್ಥಾಲಂಕಾರ ಭೇದಗಳೊಳಗೆ ಪ್ರಮುಖವಾದ 'ಅತಿಶಯೋಕ್ತಿ' ಜನಿಸಿರಬೇಕು. ಮಾತ್ರವಲ್ಲ. ಇದರಿಂದಲೇ ಉದಾತ್ತಾಲಂಕಾರವೂ (ಕ.ರಾ.ಮಾ., III, ೧೭೩) ಉಂಟಾಗಿರಬೇಕು' – ಎಂದು ಮುಳಿಯ ತಿಮ್ಮಪ್ಪಯ್ಯನವರ ಮತ. (ಕ.ರಾ. ವಿವೇಕ–೨)

(ಶ್ಲಾಘ್ಯವಾದ ವಿಶೇಷಣಗಳಿಂದ ಕೂಡಿರುವುದು ಉದಾರವೆಂದು ಕೆಲವರು ಇಚ್ಛಿಸುತ್ತಾರೆ ('ಒಲ್ವರ್'). ಹೇಗೆಂದರೆ 'ಲೀಲಾಂಬುಜ', 'ಕ್ರೀಡಾಸರ', 'ಹೇಮಾಂಗದ' ಇತ್ಯಾದಿ ರೀತಿಯಲ್ಲಿ.)

ಮಾರ್ಗಕಾರನು, ಲೀಲಾಂಬುಜ (ವಿನೋದಕ್ಕಾಗಿ) ಇಟ್ಟುಕೊಳ್ಳುವ, ಆಟವಾಡುವ, ತಾವರೆ), ಹೇಮಾಂಗದ (ಚಿನ್ನದ ತೋಳ್ಬಂದಿ) ಎಂಬ ದಂಡಿಯ ಉದಾಹರಣೋಕ್ತಿಗಳನ್ನೇ ಇಟ್ಟುಕೊಂಡಿದ್ದಾನೆ.[೩೦]

ಪದ್ಯ ೮೨–೮೪ : **ಪ್ರಮಿತ ಗ್ರಾಮ್ಯೋಕ್ತಿ :** (ಪ. ೮೨) 'ಗೋಪಾಲಕುರು (ಗೋವಳಿಗರು, ಗೊಲ್ಲರು), ಹುಡುಗರು, ಸ್ತ್ರೀಲೋಲುಪರು, ಜೂಜುಕೋರರು (ಕಿತವ), ಬಾಹ್ಲೀಕರು (?) – ಮುಂತಾದವರ ವ್ಯಾಪಾರಗಳು ಗ್ರಾಮ್ಯಾಳಾಪಗಳು, ಎಂದರೆ ಹಳ್ಳಿಗಾಡಿನ ಅಸಂಸ್ಕೃತ ಮಾತುಕತೆಯಿಂದ ಕೂಡಿರುತ್ತವೆ. ಆದ್ದರಿಂದ, ಎರಡು ಮಾರ್ಗಗಳಲ್ಲಿಯೂ ಅವುಗಳನ್ನು ವರ್ಜಿಸಬೇಕು. (ಪ. ೮೩) ಇದು 'ಗ್ರಾಮ್ಯೋಕ್ತಿ'ಯನ್ನು

---

೩೦ 'ಲೀಲಾಂಬುಜ' ಮದ್ರಾಸು ಮುದ್ರಣದ ಸಂಪಾದಕರು 'ನೀಲಾಂಬುಜ' ಎಂಬ ಪಾಠವನ್ನು ಇಟ್ಟುಕೊಂಡಿದ್ದಾರೆ. ಮೂಲಶ್ಲೋಕವನ್ನು ಗಮನಿಸಿದರೆ, ನಾವು ಸ್ವೀಕರಿಸಿರುವ ಪಾಠಕರ ಪಾಠವೇ ಸರಿಯೆಂಬುದು ಸುಸ್ಪಷ್ಟ.

'ವಿಚಿತ್ರಚಿತ್ರಾಧಿಕಮಂ' ಎಂಬೆಡೆಯಲ್ಲಿ ಮಾತ್ರ ಸ್ವಲ್ಪ ಕ್ಲೇಶವಿದೆ. ಮೂಲದ 'ಕ್ರೀಡಾಸರ' ಎಂಬ ನಿದರ್ಶನವನ್ನು ಬಿಟ್ಟು ಅದರೆಡೆಯಲ್ಲಿ 'ವಿಚಿತ್ರ ಚಿತ್ರ' ಎಂದು ಇಟ್ಟುಕೊಂಡಿದ್ದಾನೆಯೆ? ಹಾಗಿರಬಹುದೆಂದು ಭಾವಿಸಿ 'ವಿಚಿತ್ರಚಿತ್ರ' = 'ಆಶ್ಚರ್ಯಕರವಾದ ಚಿತ್ರ' ಎಂದು ಮುಳಿಯ ತಿಮ್ಮಪ್ಪಯ್ಯನವರು ಅರ್ಥೈಸಿದ್ದಾರೆ. 'ಅಧಿಕಮಂ' ಎಂಬ ಉಳಿದ ಮಾತಿನ ಅನ್ವಯ ಹೇಗೆ? 'ವಿಚಿತ್ರ ಚಿತ್ರಾಧಿಕಮಂ' ಎಂಬುದನ್ನು '–ಚಿತ್ರಾದಿಕಮಂ' ಎಂದು ತಿದ್ದಿಕೊಂಡು, 'ಹೇಮಾಂಗದ, ಲೀಲಾಂಬುಜ, ವಿಚಿತ್ರಚಿತ್ರ, ಇವೇ ಮೊದಲಾದುವನ್ನು' (ಮೂಲದಲ್ಲಿಯೂ 'ಆದಯಃ' ಎಂದಿದೆ) ಎಂದು ಅನ್ವಯಾರ್ಥ ಮಾಡಬಹುದು. ನನಗೆ ತೋರುವುದು ಹೀಗೆ : 'ವಿಚಿತ್ರ ಚಿತ್ರ' ಎಂಬುದು ಪ್ರತ್ಯೇಕ ಉದಾಹರಣೆಯಲ್ಲ. 'ಉದೀಚ್ಯದ ಉರು ವಿಶೇಷಣಣಯುತಮಪ್ಪುದಂ ಹೇಮಾಂಗದ ಲೀಲಾಂಬುಜ ವಿಚಿತ್ರ ಚಿತ್ರಾಧಿಕಮಂ ಇಂತು ಒಲ್ವರ್' ಎಂದು ಅನ್ವಯಮಾಡಬೇಕು : 'ಉತ್ತರ ಮಾರ್ಗದ ಶ್ಲಾಘ್ಯವಿಶೇಷಣಗಳಿಂದ ಕೂಡಿರುವ ಹೇಮಾಂಗದ ಲೀಲಾಂಬುಜ ಮುಂತಾದವುಗಳ ಆಶ್ಚರ್ಯಕರವಾದ ಉತ್ಕರ್ಷವನ್ನು (ಕೆಲವರು) ಇಷ್ಟಪಡುವರು'.

'ಉದೀಚ್ಯರುರು' ಎಂಬುದರ ಪಾಠ 'ಉದೀಚ್ಯದುರು' (ಉದೀಚ್ಯರ್ + ಉರು) ಎಂದಿರಬಹುದೆ? ಆಗ 'ಒಲ್ವರ್' ಎಂಬ ಕ್ರಿಯಾಪದಕ್ಕೆ 'ಉದೀಚ್ಯರ್' (ಉತ್ತರ ಮಾರ್ಗದವರು) ಎಂಬುದು ಕರ್ತೃವಾಗುತ್ತದೆ.

ವಿಶದಪಡಿಸುವ ಲಕ್ಷ್ಯಪದ್ಯ. ಇಲ್ಲಿ 'ಶ್ರುತದುಷ್ಟ'ವಾದ ಅಥವಾ 'ಅರ್ಥದುಷ್ಟ'ವಾದ ಗ್ರಾಮ್ಯ (ಅಸಭ್ಯ) ಪದಗಳನ್ನು ಬಳಸಿಲ್ಲ. ಹಳ್ಳಿಗಾಡಿನ ಹೆಂಗಸೊಬ್ಬಳು ತನ್ನ ನಲ್ಲನನ್ನು ನೆನೆನೆನೆದು ಹಲುಬುವುದನ್ನು ಇದರಲ್ಲಿ ವರ್ಣಿಸಿದೆ. ಅಸಭ್ಯವಲ್ಲದ್ದಿದರೂ ಅರ್ಥಸೌಂದರ್ಯವಿಲ್ಲದ 'ವಾಚಾಳ'ತ್ವದ ಈ ಬಗೆಯ 'ಗ್ರಾಮ್ಯಾಳಾಪ'ವು ದೇಸಿಗಬ್ಬದಲ್ಲಿ ಪ್ರಯೋಗಾರ್ಹವಾದರೂ 'ಮಾರ್ಗ'ಕಾವ್ಯದಲ್ಲಿ ದೋಷವೆ ಎನಿಸುವುದೆಂದು ಮಾರ್ಗಕಾರನ ಅಭಿಪ್ರಾಯ. (ಆದರೂ, ದೋಷಪ್ರಕರಣದಲ್ಲಿ 'ಗ್ರಾಮ್ಯೋಕ್ತಿ'ಯನ್ನು ಸೇರಿಸಿಲ್ಲ. 'ಶ್ರುತದುಷ್ಟ', 'ಅರ್ಥದುಷ್ಟ' ದೋಷಗಳಲ್ಲಿಯೇ ಅದು ಸಮಾವೇಶಗೊಂಡಿದೆ ಎಂದು ತಿಳಿಯಬೇಕು). (ಪ.೮೪) ಮೇಲಿನ ಲಕ್ಷ್ಯಪದ್ಯದ ಅಬಿಪ್ರಾಯವನ್ನೇ, 'ಮನ್ಮಥನು ಹಟಹಿಡಿದು ನನ್ನಲ್ಲಿ ನೆಲಸಿಬಿಟ್ಟಿದ್ದಾನೆ ; ಆತನಿಗೆ ನಿನ್ನ ಮೇಲೆ ಸ್ವಲ್ಪವೂ ಕೋಪವಿಲ್ಲ' ಎಂದು ಮಾರ್ಪಡಿಸಿ ಹೇಳಿದರೆ, ಗ್ರಾಮ್ಯತ್ವವು ಒಂದು ಮಿತಿಗೆ ಒಳಪಟ್ಟು ಅದು 'ಪ್ರಮಿತ ಗ್ರಾಮ್ಯೋಕ್ತಿ' ಎಂಬ ಗುಣವೇ ಆಗುವುದು. ಶಬ್ದದೃಷ್ಟಿಯಿಂದಾಗಲಿ ಅರ್ಥದೃಷ್ಟಿಯಿಂದಾಗಲಿ ಅಸಭ್ಯವಾಗದಂತೆ, ಅತಿವಾಚಾಲತೆಯನ್ನು ಬಿಟ್ಟು, ಹಳ್ಳಿಗಾಡಿನವರು ಮುಂತಾದ ಅಸಂಸ್ಕೃತ ಜನರ ಮಾತಿನ ರೀತಿಯನ್ನು ಅಡಕವಾಗಿ ಹೇಳಿದಲ್ಲಿ, ಅದು ಉಭಯ ಮಾರ್ಗಗಳಲ್ಲಿಯೂ ಗುಣವೇ ಆಗುವುದು. (ಎರಡು ಮಾರ್ಗಗಳಿಗೂ ಬೇರೆ ಬೇರೆ ಲಕ್ಷ್ಯಗಳನ್ನು ಮಾರ್ಗಕಾರನು ಕೊಟ್ಟಿಲ್ಲ. ೮೩ನೆಯ ಪದ್ಯವು 'ಔತ್ತರೇಯ ಪ್ರಮಿತಗ್ರಾಮ್ಯ'ಕ್ಕೆ ಲಕ್ಷ್ಯವಾಗಿರುವುದೆಂಬ ತಿಮ್ಮಪ್ಪಯ್ಯನವರ ಹೇಳಿಕೆ ಸಮರ್ಥನೀಯವಲ್ಲ.) ದಂಡಿ ಹೇಳುವ 'ಅರ್ಥವ್ಯಕ್ತಿ' ಎಂಬ ಗುಣವನ್ನು ಬಿಟ್ಟು, ಅದರೆಡೆಯಲ್ಲಿ ಈ ಪ್ರಮಿತ ಗ್ರಾಮ್ಯೋಕ್ತಿಯನ್ನು ಸೇರಿಸಿದ್ದಾನೆ ಮಾರ್ಗಕಾರ. ಮಾಧುರ್ಯಗುಣ ನಿರೂಪಣೆಯ ಸಂದರ್ಭದಲ್ಲಿ ಶಬ್ದಾರ್ಥಮಾಧುರ್ಯ ಸ್ವರೂಪವನ್ನು ವಿವೇಚಿಸುವಾಗ ದಂಡಿ, ಎಲ್ಲ ಅಲಂಕಾರಗಳೂ ಅರ್ಥಕ್ಕೆ ಸವಿಗೂಡಿಸುವವಾದರೂ ಅವು ಗ್ರಾಮ್ಯತಾದೋಷ ವಿನರ್ಜಿತವಾಗಿದ್ದರೆ ಆ ಕೆಲಸವನ್ನು ಹೆಚ್ಚು ಸಮರ್ಥವಾಗಿ ನಿರ್ವಹಿಸುತ್ತವೆ' ಎಂದು ಹೇಳಿ (I–೬೨), ಗ್ರಾಮ್ಯತೆಯ ದೋಷ–ನಿರ್ದೋಷಗಳಿಗೆ ಉದಾಹರಣೆಗಳನ್ನು ಕೊಟ್ಟಿದ್ದಾನೆ. ಆತನು ಕೊಟ್ಟಿರುವ ಎರಡು ಲಕ್ಷ್ಯಪದ್ಯಗಳನ್ನೆ (I–೬೩,೬೪) ಮಾರ್ಗಕಾರನು ಉಪಯೋಗಿಸಿಕೊಂಡು, 'ಪ್ರಮಿತ ಗ್ರಾಮ್ಯೋಕ್ತಿ'ಯನ್ನು ಕಲ್ಪಿಸಿದ್ದಾನೆ.

ಕಿತವ = ಜೂಜುಗಾರ ; ವಂಚಕ. ಪೀನಂ = ಹೆಚ್ಚಾಗಿ ಒಱಲ್ದು = ಒಲಿದು, ಸ್ನೇಹತೋರಿ (ಧಾ.ಒಱಲ್ ; ಸ್ನೇಹೇ – ಶ.ಮ.ದ.). ಮಱುಗಿ = (ಮನಸ್ಸಿನಲ್ಲಿ ಕುದಿದು) ಪರಿತಾಪಪಟ್ಟು (ದಾ., ಮಱುಗು : ಪ. I– ೫೮ ರ ಟಿಪ್ಪಣಿ ನೋಡಿ). ಮರವಾನಿಸ = ಮರದಿಂದ ಮಾಡಿದ ಮನುಷ್ಯ ; (ಮರದ ಬೊಂಬೆಯಂತೆ) ಸಂವೇದನಾರಹಿತ, ಹೃದಯವಿಲ್ಲದವನು, ನಿಷ್ಕರುಣಿ.

ಪದ್ಯ ೮೫–೮೬ : **ಓಜೋಗುಣ :** 'ಸಮಾಸ ಪದಗಳನ್ನು ಹೊಂದಿಕೊಳ್ಳುವಂತೆ, ಒಪ್ಪವಾಗಿಸಿ ('ಸಮಱೆ,'), ಚೆನ್ನಾಗಿ ('ಸಯ್ತಾಗಿ') ಆಲೋಚನೆ ಮಾಡಿ ಹೇಳಿದರೆ, ಅದು ಓಜೋಲಕ್ಷಣವಾಗುವುದು. ಅಲಂಕಾರ ಸಹಿತವಾದ ಇದು ಗದ್ಯರಚನೆಗೆ ಶ್ರೇಷ್ಠ. (ಪ.೮೬) ಸಮಹಿತ (ಸ+ಮಹಿತ) ಪ್ರಯೋಗಾನುಗತವಾದ (ಎಂದರೆ, ಮಹಿಮೆಯುಳ್ಳ ಕವಿಗಳ ಪ್ರಯೋಗಗಳಲ್ಲಿ ಕಂಡುಬರುವ) ಈ ಓಡೋಗುಣವು ಪದ್ಯದಲ್ಲಿಯೂ ಗುಣವನ್ನು ತರುವುದು.' (ಹೀಗೆಂದುದರಿಂದ, ಓಜೋಗುಣವು ವ್ಯಕ್ತಪಡುವಂತೆ ಸಮಾಸಪದ ಭೂಯಿಷ್ಠವಾಗಿ ಕೃತಿರಚನೆ ಮಾಡುವುದು ಕಷ್ಟಕರ ಎಂದಾಯಿತು). 'ಆದ್ದರಿಂದ ಈ ಓಜೋಗುಣವನ್ನು 'ಅಗಾಧಮನರು' (ಅಪಾರ ವಾಕ್ ಸಾಮರ್ಥ್ಯವುಳ್ಳವರು) ಮಾತ್ರ ಚೆನ್ನಾಗಿ ಆಲೋಚನೆ ಮಾಡಿ, ಸೊಗಯಿಸುವಂತೆ ಕೃತಿಯಲ್ಲಿ ಪ್ರಯೋಗಿಸಬೇಕು.'

ಈ ಸಂಬಂಧದ ದಂಡಿಯ ಶ್ಲೋಕಗಳು :

"ಓಜಸ್ಸಮಾಸಭೂಯಸ್ತ್ವಮೇತದ್ ಗದ್ಯಸ್ಯ ಜೀವಿತಂ ।
ಪದ್ಯೇಽಪ್ಯದಾಕ್ಷಿಣಾತ್ಯಾನಾಮಿದಮೇಕಂ ಪರಾಯಣಂ ॥" – I, ೮೦

(ಸಮಾಸಗಳ ಆಧಿಕ್ಯವೇ ಓಜಸ್ಸು, ಇದೇ ಗದ್ಯದ ಜೀವಿತ, ಅದಾಕ್ಷಿಣಾತ್ಯರ (ಎಂದರೆ, ಗೌಡೀಯರ) ಪದ್ಯದಲ್ಲಿಯೂ ಇದೊಂದೇ ಪ್ರಚುರ). ಹೀಗೆಂದುದರಿಂದ, ಓಜೋಗುಣವನ್ನು ವೈದರ್ಭೀಯರು ಕೇವಲ ಗದ್ಯದಲ್ಲಿಯೂ, ಗೌಡೀಯರು ಗದ್ಯಪದ್ಯಗಳೆರಡರಲ್ಲಿಯೂ ಬಳಸುವರು ಎಂದು ತಾತ್ಪರ್ಯ. ಮಾರ್ಗಕಾರನು ದಂಡಿಯನ್ನೇ ಅನುಸರಿಸುತ್ತಿರುವುದರಿಂದ, ಸಮಾಸಭೂಯಿಷ್ಠವಾದ ಗದ್ಯರಚನೆ ದಕ್ಷಿಣಮಾರ್ಗದ ಓಡೋಲಕ್ಷಣವೆಂದೂ, ಅದೇ ರೀತಿಯ ಗದ್ಯಪದ್ಯಗಳೆರಡರ ರಚನೆ ಉತ್ತರಮಾರ್ಗದ ಓಡೋಲಕ್ಷಣವೆಂದೂ ಅರಿಯಬೇಕು. ಆದರೆ ಸಮಾಸಭೂಯಿಷ್ಠವಾದ ಕೃತಿರಚನೆ ಗದ್ಯಕ್ಕಿಂತ ಪದ್ಯದಲ್ಲಿ ಕಷ್ಟಕರವೆಂದೂ, ಆದ್ದರಿಂದ ಸಮರ್ಥರಾದವರು ಮಾತ್ರ ಅಂಥ ಪದ್ಯಕೃತಿರಚನೆಗೆ ಕೈಯಿಡಬೇಕೆಂದೂ

ಮಾರ್ಗಕಾರನು ('ಬಗೆದಿದಂ ಸೊಗಯಿಸುವಂತಿರೆ ಅಗಾಧ ಮನರಿಡುಗೆ ಕೃತಿಯೊಳೋಜೋಗುಣಮಂ' ಎಂದು) ಎಚ್ಚರಿಕೆ ನೀಡಿದ್ದಾನೆ.)

ಪದ್ಯ ೮೭–೯೬ : ಈ ಹತ್ತು ಪದ್ಯಗಳಲ್ಲಿ, ಪದ್ಯರಚನೆಯಲ್ಲಿ ಕಷ್ಟಸಾಧ್ಯವಾದ ಓಜೋಗುಣವನ್ನು ಸಾಧಿಸಬೇಕಾದರೆ ಸಮಾಸಪದಗಳನ್ನು ಹೇಗೆ ಪ್ರಯೋಗಿಸಬೇಕೆಂಬುದನ್ನು ಲಕ್ಷ್ಯಗಳೊಂದಿಗೆ ಮಾರ್ಗಕಾರನು ವಿವರಿಸಿದ್ದಾನೆ. ಈ ಸಂದರ್ಭದಲ್ಲಿ , ಗೌಡೀಯ ವೈದರ್ಭೀರೀತಿಗಳಿಗೆ ದಂಡಿ ಕೊಡುವ ಲಕ್ಷ್ಯಗಳನ್ನು ಮೊದಲು ಗಮನಿಸಬೇಕು :

ಗೌಡೀಯ :

"ಅಸ್ತಮಸ್ತಕಪರ್ಯಸ್ತಸಮಸ್ತಾರ್ಕಾಂಶುಸಂಸ್ತರಾ ।
ಪೀನಸ್ತನಸ್ಥಿತಾತಾಮ್ರವಸ್ತ್ರೇವಾಭಾತಿ ವಾರುಣೀ ॥" –I, ೮೨

(ಅಸ್ತಮಸ್ತಕವಿನ್ಯಸ್ತ ಸಮಸ್ತ ಸೂರ್ಯಕಿರಣ ಸಂಸ್ತರೆಯಾದ ವಾರುಣಿಯು (ಪಶ್ಚಿಮ ದಿಗ್ವನಿತೆ) ಪೀನಸ್ತನಸ್ಥಿತ ರಕ್ತವಸ್ತ್ರವುಳ್ಳವಳಾಗಿ ಪ್ರಕಾಶಿಸುತ್ತಿದ್ದಾಳೆ.)

ವೈದರ್ಭರ ಆಡಂಬರವಿಲ್ಲದ, ಹೃದಯಂಗಮವಾದ, ಸಮಾಸ ವಿನ್ಯಾಸ:

"ಪಯೋಧರತಟೋತ್ಸಂಗಲಗ್ನಸಂಧ್ಯಾತಪಾಂಶುಕಾ ।
ಕಸ್ಯಕಾಮಾತುರಂ ಚೇತೋ ವಾರುಣೀ ನ ಕರಿಷ್ಯತಿ ॥" – I, ೮೪

(ಪಯೋಧರ ತಟೋತ್ಸಂಗ ಲಗ್ನ ಸಂಧ್ಯಾತಪವನ್ನೇ ಅಂಶುಕವಾಗುಳ್ಳ ಪಶ್ಚಿಮದಿಗ್ವನಿತೆ ಯಾರ ಮನಸ್ಸನ್ನು ತಾನೆ ಕಾಮಾತುರವನ್ನಾಗಿ ಮಾಡಳು?)

ಕನ್ನಡಪದ್ಯ ರಚನೆಯ ಧೋರಣೆ ಸಂಸ್ಕೃತದಕ್ಕಿಂತ ಭಿನ್ನವಾದುದರಿಂದ, ಸಮಾಸಪದ ಯೋಜನೆಯ ವಿಚಾರದಲ್ಲಿ ಕನ್ನಡಕ್ಕೆ ಅನ್ವಯಿಸುವಂತೆ ಮಾರ್ಗಕಾರನು ಕೆಲವು ಸ್ಪಷ್ಟ ನಿರ್ದೇಶನಗಳನ್ನು ನೀಡಿದ್ದಾನೆ. ಮಾರ್ಗಕಾರನು ಸಂಸ್ಕೃತ ಪೂರ್ವಾಚಾರ್ಯರನ್ನು ಅನುಸರಿಸುವಲ್ಲಿ ಅನುಸರಿಸಿ, ಸ್ವೋಪಜ್ಞತೆಯನ್ನು ಮೆರೆಯಬಲ್ಲನೆಂಬುದಕ್ಕೆ ಈ ಮುಂದಿನ ಲಕ್ಷಣಲಕ್ಷ್ಯ ಪದ್ಯಗಳು (೮೭–೧೧೦) ನಿದರ್ಶನಗಳು.

ಪದ್ಯ ೮೭–೮೮ : "ಪದ್ಯ ಕೃತಿಯಲ್ಲಿ, ಬಿಡಿಬಿಡಿಯಾದ ಪದಗಳ ರೂಪದಲ್ಲಿರುವ ಎಂದರೆ ಸಮಸ್ತವಲ್ಲದ (='ಮುಕ್ತಕ ಪದ') ಕಾರಕವನ್ನೂ ಕ್ರಿಯೆಯನ್ನೂ ಕ್ರಮವಾಗಿ ಮೊದಲು ಅಳವಡಿಸಿ, ಆ ಬಳಿಕ ಕಾರಕ ಸಂಬಂಧವಾದ ವಿಶೇಷಣಯುಕ್ತ ವಿಶೇಷ್ಯರೂಪದ ದೀರ್ಘ ಉಚ್ಚಾರಣೆಯ ಸಮಾಸ ಪದಗಳನ್ನು ಪ್ರಯೋಗಿಸಬೇಕು (ಪ.೮೭). ಹೀಗೆ ಮಾಡದೆ, ಪದ್ಯದ ಮೊದಲಿನಲ್ಲಿಯೆ ದೀರ್ಘ ಸಮಸ್ತ ಪದವನ್ನು ಪ್ರಯೋಗಿಸಿ, ಅದರ

ತುದಿಯಲ್ಲಿ ಅಸಮಸ್ತ ಪದಗಳನ್ನು ('ಮುಕ್ತಕ ಪದ'ವನ್ನು) ನಿಲ್ಲಿಸಿದರೆ, ಅದು ಕಬ್ಬಿನ (ಕೆದರಿದ ಸೋಗೆಗಳುಳ್ಳ) ತುದಿಯ ಹಾಗೆ 'ರಸಹೀನ' ವಾಗಿರುವುದರಲ್ಲಿ (ವಿಲಕ್ಷಣವಾಗಿರುವುದರಲ್ಲಿ) ಸಂದೇಹವಿಲ್ಲ."

ತಗುಳು = ತಗುಲಿಸು, ಸೇರಿಸು, ಇರಿಸು. ಮುಕ್ತಕ ಪದ = ಬಿಡಿಮಾತು. ನೀಳ್ದುನಿಲೆ = ದೀರ್ಘವಾಗಿರುವಂತೆ.

ಪದ್ಯ ೮೯–೯೧ : ಮೇಲಿನ ಲಕ್ಷಣಾನುಗುಣವಾದ ಲಕ್ಷ್ಯಗಳಿವು. 'ನರಪತಿಯಂ... ಜಲಧಿತಟದೊಳ್ ಅಣುವಂ ಕಂಡಂ' : ಈ ಕಾರಕಪದಗಳೂ ಕ್ರಿಯಾಪದವೂ ಬಡಿ ಮಾತುಗಳು. ಇವು ತುದಿಯಲ್ಲಿರುವುದರಿಂದ, ಪದ್ಯದಲ್ಲಿ ಓಜಸ್ವಿತಾಗುಣವು ಸಿದ್ಧಿಸುವುದಾದರೂ, ಈ ಬಗೆಯ ರಚನೆ ಸುಂದರವಾಗಿರುವುದಿಲ್ಲವೆಂದು ಹೇಳಿ (ಪ.೯೦), ೯೧ನೆಯ ಲಕ್ಷ್ಯ ಪದ್ಯದಲ್ಲಿ ಮೊದಲಿನ ಲಕ್ಷ್ಯದ (ಪ.೮೯) ಪೂರ್ವಾರ್ಧ ಉತ್ತರಾರ್ಧಗಳನ್ನು ವ್ಯತ್ಯಯ ಮಾಡಿ ರಚನೆ 'ಸುಕರ'ವಾಗಿರುವಂತೆ ಅದನ್ನು ನೇರ್ಪಡಿಸಲಾಗಿದೆ.

(ಮೊದಲಿನ ಲಕ್ಷ್ಯಪದ್ಯದಲ್ಲಿ 'ಸ್ವಭಾವಾಖ್ಯಾನ'ವು ಕಂಡುಬರುವುದರಿಂದ ಅದು ದಕ್ಷಿಣಮಾರ್ಗದ ಲಕ್ಷ್ಯವೆಂದೂ, ಮತ್ತಿನದರಲ್ಲಿ 'ವಕ್ರರಚನೆ' ಕಂಡು ಬರುವುದರಿಂದ ಅದು ಉತ್ತರಮಾರ್ಗದ ಲಕ್ಷ್ಯವೆಂದೂ ಮುಳಿಯ ತಿಮ್ಮಪ್ಪಯ್ಯನವರು ಅಭಿಪ್ರಾಯಪಡುತ್ತಾರೆ. ಆದರೆ, ಈ ಬಗೆಗೆ ಗ್ರಂಥದಲ್ಲಿ ಸ್ಪಷ್ಟ ಸೂಚನೆಯಿಲ್ಲ)

ಕಪಿಪೃತನಾ = ಕಪಿಸೇನೆ. ಅಣುವ = ಹನುಮ.*

ಪದ್ಯ ೯೨–೯೬ : ಸಮಾಸಪದಪ್ರಯೋಗ ಮಾರ್ಗಾಂತರ ವಿವರಣೆಯನ್ನು ಈ ಪದ್ಯದಲ್ಲಿ ಮುಂದುವರಿಸಿದೆ : ಅನ್ವಯಾನುಸಾರ ತಾತ್ಪರ್ಯ : "ಕೃತಿಯಲ್ಲಿ ಪ್ರಯೋಗವಾಗುವ ಬೇರೆ ಬೇರೆ ವಿಶೇಷ್ಯ ಪದಗಳು ಸಮಾಸರೂಪದಲ್ಲಿ ಬೆರೆತುಬಂದಿದ್ದರೆ ಕಾವ್ಯಬಂಧವು ಎಂದಿಗೂ ಅಂದವಾಗಿರುವುದಿಲ್ಲ ; ಆದ್ದರಿಂದ, ಈ ವಿಶೇಷ್ಯಪದವನ್ನು ಯಾವಾಗಲೂ ವ್ಯಸ್ತವಾಗಿಯೆ (ಎಂದರೆ ಸಮಾಸಪಡದೆ, ಬಿಡಿಸಿಯೆ) ಹೇಳಬೇಕು."

ಸಮಾಸಪದಗಳನ್ನು 'ಅಮರ್ದಿರೆ ಸಯ್ತಾಗಿ ಬಗೆದು ಪೇಟ್ಟೊಡದಕ್ಕುಂ ಓಜೋಲಕ್ಷಣಂ' ಎಂದು ಹೇಳಿ (ಪ.೮೫), ಇಲ್ಲಿ 'ವ್ಯಸ್ತಮಾಗಿ ಪೇೞ್ಗೆ'

---

* ನೋಡಿ : ವಿಶೇಷ ಟಿಪ್ಪಣಿ ೬ (ಅನುಬಂಧ – ಆವೃತ್ತಿ : ೧೯೬೮)

ಎಂದು ಹೇಳಬೇಕಾದರೆ, ಇದನ್ನು 'ಅಪವಾದ' ಸೂತ್ರವೆಂದು ಭಾವಿಸಬೇಕು. ಹಾಗೆ 'ವ್ಯಸ್ತವಾಗಿ ಹೇಳಲು' ಕಾರಣವೇನೆಂಬುದನ್ನು ೯೪–೯೫ನೆಯ ಪದ್ಯಗಳಲ್ಲಿ ವಿವರಿಸಿದ್ದಾನೆ. ಅವನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕಾದರೆ, ಮೊದಲು ಲಕ್ಷ್ಯಪದ್ಯವನ್ನು ಗಮನಿಸಬೇಕು: ಅದರಲ್ಲಿ ೯. ೯೩), 'ಪರಿದೆಯ್ದಿತಾಗಿದಂ' ಎಂಬುದು ಕ್ರಿಯಾಪದ ; 'ಪರಿಕೋಪ ವಿಧೃತ ವಿಸ್ಫುರದುರುರಕ್ತ ಕಠೋರನಯನಯುತ ದಶವದನಂ' ಎಂಬುದು ಅದರ ಕರ್ತೃ ; 'ಭಾಸುರತರ ರಘುಕಲಲಲಾಮ ಲಕ್ಷ್ಮೀಧರನೊಳ್' ಎಂಬುದು (ವಿಭಕ್ತಿ ಪಲ್ಲಟವನ್ನು ಹೊಂದಿದ) ಕರ್ಮಕಾರಕ. ಈ ಕರ್ತೃಕರ್ಮಗಳೆರಡೂ ವಿಶೇಷಣ ಪದಗಳೊಡನೆ ಸಮಾಸಹೊಂದಿರುವ ವಿಶೇಷ್ಯಗಳು. "ಹೀಗೆ ವಿಶೇಷ್ಯವು ಕ್ರಿಯಾಪದವನ್ನು ಚೆನ್ನಾಗಿ ನೋಡುವುದರಿಂದಲೂ (ಎಂದರೆ ಅದರ ಕಡೆಗೆ ಓಲುವುದರಿಂದಲೂ), ಸಮಾಸವಾಗಿ ಹೇಳುವಮಟ್ಟಿಗೆ ಆ (ವಿಶೇಷ್ಯ) ಪದವು 'ಸಮರ್ಥ'ವಲ್ಲವಾದ್ದರಿಂದಲೂ, ಅದು 'ಸಾಪೇಕ್ಷ'ವಾಗುವುದು" (ಪ. ೯೪). ('ಸಾಪೇಕ್ಷ' ಎಂದರೆ, ಅರ್ಥಪೂರ್ತಿಯಾಗಿ ಬೇರೊಂದು ಪದದ ನೆರವನ್ನು ಕೋರತಕ್ಕದ್ದು. ಇಲ್ಲಿ 'ಸಮರ್ಥ' (ಸಂ + ಅರ್ಥ) ಎಂದರೆ ವಿಶೇಷ್ಯವಾದ ಸಮಾಸ ಪದವು ತನ್ನ ಎಲ್ಲ ಅವಯವಗಳ ಅರ್ಥವನ್ನೂ ಕೂಡಿಕೊಂಡು ಕ್ರಿಯೆಯೊಂದಿಗೆ ಅನ್ವಯವಾಗುವುದು. ದಶವದನ, ಲಕ್ಷ್ಮೀಧರ ಎಂಬ ವಿಶೇಷ್ಯಪದಗಳೊಂದಿಗೆ ಅನುಗೂಡಿಕೊಂಡಿರುವ ವಿಶೇಷಣಗಳೆಲ್ಲ ಅದರ ಅಂಗಗಳು ಅಥವಾ ಅವಯವಗಳು). 'ತಾಗಿದಂ ದಶವದನಂ' ಎಂದಾಗ, ಕರ್ತೃಪದವು (ಸಮಸ್ತವಾಗಿರುವುದರಿಂದ) ತನ್ನ ವಿಶೇಷಣಗಳ ಅರ್ಥವನ್ನು ಹಿಂದೆ ಬಿಟ್ಟು, ತಾನೊಂದೇ ಕ್ರಿಯೆಯೊಂದಿಗೆ ತಗುಳ್ಚಿಕೊಳ್ಳಿತ್ತದೆ ; ಹೀಗಾಗಿ, ಸಮಾಸವಾದ ಕರ್ತೃಪದ 'ಸಮರ್ಥ'ವೆನಿಸುವುದಿಲ್ಲ. ಹೀಗೆ, (ಪ.೯೫) "ಸಾಪೇಕ್ಷವೂ ಸಮಾಸವೂ ಎರಡೂ ಕೂಡಿ ಸಮನಿಸಿದರೆ, ಎಲ್ಲಿಯಾದರೂ ಒಂದು ಕಡೆ ಗಮಕವು ದೊರೆಕೊಳ್ಳುತ್ತದೆ ; (ಹಾಗೆ ಗಮಕತ್ವವು[೩೧]

೩೧. 'ಗಮಯತೀತಿ ಗಮಕಂ ; ತತ್ತ್ವ ಗಮಕತ್ವಂ' ಎಂದು ಶಬ್ದನಿಷ್ಪತ್ತಿ. ಇಲ್ಲ 'ಗಮಕ' ಎಂದರೆ 'ಅರ್ಥಗಮಕ' ಎಂದೇ ಗ್ರಹಿಸಬೇಕು. 'ಅರ್ಥಗಮಕ' ಎಂದರೆ 'ಅರ್ಥ ಹೊರಪಡುವುದು'. 'ಕೆಲವು ಶಬ್ದರೂಪಗಳು ಶಾಸ್ತ್ರಸಮ್ಮತವಾಗಿಲ್ಲದಿದ್ದರೂ ಅರ್ಥಗಮಕತ್ವವನ್ನು ಹೊಂದಿದ್ದರೆ, ಅದು ದೇಸೀಯಲ್ಲಿ ಸಮರ್ಥನೀಯವಾಗಬಹುದು.

ಪ್ರಾಪ್ತಿಯಾದರೆ) ಅದರಲ್ಲಿ ಎಲ್ಲವೂ ಕ್ರಮ ಎನ್ನಬೇಕಾದರೆ (ಎಂದರೆ ಸಾಪೇಕ್ಷತ್ವವೂ ಸಮಾಸತ್ವವೂ ಕೂಡಿರುವ ಅಕ್ರಮವನ್ನು ಸಕ್ರಮಗೊಳಿಸಬೇಕಾದರೆ) ('ಕ್ರಮಂ ಅದಱೊಳ್ ಎಲ್ಲಂ ಎನಲ್'), ಅಂದ ಮಾಡಲಿ." ಸರಿಪಡಿಸುವುದು ಹೇಗೆಂಬುದನ್ನು ೯೬ನೆಯ ಲಕ್ಷ್ಯಪದ್ಯದಲ್ಲಿ ತೋರಿಸಿಕೊಟ್ಟಿದ್ದಾನೆ : 'ಭಾಸುರತರ ರಗುಕುಲಲಲಾಮ ಲಕ್ಷ್ಮಣನೊಳ್' ಎಂದಿರುವಲ್ಲಿ '...ಲಲಾಮನೊಳ್ ಲಕ್ಷ್ಮಣನೊಳ್' ಎಂದೂ, 'ಪರಿಕೋಪ.... ನಯನಯುತದಶವದನಂ' ಎಂದಿರುವೆಡೆಯಲ್ಲಿ 'ಲೋಚನಂ (ಅಥವಾ ನಯನಯುತಂ) ದಶವದನಂ' ಎಂದೂ ಮಾರ್ಪಡಿಸುವುದರ ಮೂಲಕ ಸಮಸ್ತವಾಗಿದ್ದ ವಿಶೇಷ್ಯವನ್ನು ವ್ಯಸ್ತಮಾಡಿದ್ದಾನೆ. ಇದರಿಂದಾಗಿ ವಿಶೇಷಣವೊಂದೇ ಸಮಸ್ತವಾಗಿ ಉಳಿದಿದೆ ; ವಿಶೇಷ್ಯದ ಸಮಾಸವು ತಪ್ಪಿ, ಅದರ ಸಾಪೇಕ್ಷವೊಂದೇ ಉಳಿದಿದೆ ; ವಿಶೇಷ್ಯದ ಹಾಗೂ ಅದನ್ನು ಹಿಂಬಾಲಿಸಿರುವ ವಿಶೇಷಣದ ಕಾರಕತ್ವಕ್ಕೂ ಭಂಗಬಂದಿಲ್ಲ.[೩೨]

ಬಂಧುರ = ಮನೋಹರ, ಸುಂದರ ವ್ಯಸ್ತ = ಅಸಮಸ್ತ, ಸಮಾಸವಾಗದಿರುವುದು. ಪೆರು = ಪಡೆ, ಸಂಪಾದಿಸು ; ದೊರೆಕೊಳ್ಳು, ಉಂಟಾಗು. ('ಉಪಲಬ್ಧೌ, ಪ್ರಸೂತೇ ಚ. – ಶ.ಮ.ದ). ಸಮಱು = ನಯಮಾಡು, ಹೊಂದಿಕೆಯಾಗುವಂತೆ ಮಾಡು, ಅಂದಗೊಳಿಸು (ಚಾರುಕರಣೇ.' – ಶ.ಮ.ದ).

ಪದ್ಯ ೯೭ : "ಕ್ಷೀರಗುಡಾದ್ಯಂತರ... ಅನಂತಮಂತರ್ಭೇಧಂ" ಇದರ ವಿವರಣೆಗಾಗಿ II– ಪದ್ಯ ೪೭–೪೮ರ ಟಿಪ್ಪಣಿಯನ್ನು ನೋಡಿ.

ಪದ್ಯ ೯೮ : ಈವರೆಗೆ, ಕಾವ್ಯರಚನೆಯಲ್ಲಿ ಬೇರೆ ಬೇರೆ ಗುಣಗಳು ವ್ಯಕ್ತಗೊಳ್ಳಬೇಕಾದರೆ ಕಾವ್ಯಬಂಧವು ಎರಡೂ ಮಾರ್ಗಗಳಲ್ಲಿ ಹೇಗಿರಬೇಕೆಂಬುದನ್ನು ಮಾರ್ಗಕಾರನು ವಿವರಿಸಿರುವನು. ಈ ಪದ್ಯದಲ್ಲಿ, 'ಕಾವ್ಯದಲ್ಲಿ ವಿಶೇಷವಾದ ಗುಣೋದಯವನ್ನು ತರಬಲ್ಲವರು ಎರಡೂ

---

ಹಾಗೆಂದು, ಅದನ್ನು 'ಕ್ರಮ' ಎನ್ನಲಾಗದು. 'ಮಾರ್ಗಕಾವ್ಯ'ದಲ್ಲಿ ಅದನ್ನು ಸರಿಪಡಿಸಬೇಕು – ಎಂದು ನಿರ್ದೇಶನ ನೀಡಿದ್ದಾನೆ ಮಾರ್ಗಕಾರ.

೩೨. ವಿಶೇಷಣವು ಪ್ರಥಮಾವಿಭಕ್ತಿಯನ್ನು ಪಡೆದಿದ್ದರೂ 'ಅನ್ವಯಮುಖ'ದಲ್ಲಿ ತುದಿಯ ಕಾರಕಪದದ ವಿಭಕ್ತಿಯನ್ನೇ ತಳೆದು, ಪದ್ಯರಚನೆ ಸಕ್ರಮವಾಗಿರುತ್ತಿದ್ದಿತು. (ನೋಡಿ : ಶ.ಮ.ದ. ಸೂತ್ರ ೧೪೦).

ಮಾರ್ಗಪದ್ಧತಿಗಳನ್ನು ಚೆನ್ನಾಗಿ ವಿಚಾರಪೂರ್ವಕವಾಗಿ ಪರ್ಯಾಲೋಚನೆ ಮಾಡಿ, ವಚನ ವಿರಚನೆ ರಸವಿಶೇಷದಲ್ಲಿ ಕೂಡಿಕೊಂಡು ಸೊಗಯಿಸುವ ರೀತಿಯಲ್ಲಿ ಅದನ್ನು ರಚಿಸಲಿ' ಎಂದು ಮಾರ್ಗಕಾರನು ಸೂಚಿಸಿದ್ದಾನೆ.[೩೩] (ಇದರಿಂದ, – ವಚನ ವಿರಚನೆ ರಸವ್ಯಂಜಕವಾಗಬಲ್ಲದು, ಗುಣೋದಯವನ್ನು ತರುವಂತಹ ಕಾವ್ಯ ಬಂಧವು ರಸಪೋಷಣೆಯನ್ನೂ ಮಾಡುವಂತಿದ್ದರೆ ಕಾವ್ಯದ ಸೊಗಸು ಇನ್ನೂ ಹೆಚ್ಚು – ಎಂಬ ಮಾರ್ಗಕಾರನ ಆಶಯವು ಸುವ್ಯಕ್ತವಾಗುತ್ತದೆ ; ಕಾವ್ಯತತ್ತ್ವದಲ್ಲಿ ರಸದ ಪ್ರಾಧಾನ್ಯದ ಅರಿವೂ ಮಾರ್ಗಕಾರನಿಗೆ ಇದ್ದಿತೆಂಬುದು ಸ್ಪಷ್ಟವಾಗುತ್ತದೆ).

ಪದ. ೯೯–೧೦೦ : ಈ ಎರಡು ಪದ್ಯಗಳಲ್ಲಿ, ನಿರ್ದಿಷ್ಟವಾದ ಉಕ್ತಿಬಂಧವನ್ನು ಉಪಯೋಗಿಸುವುದರಿಂದ ನಿರ್ದಿಷ್ಟವಾದ ರಸವು ಪ್ರಕಟವಾಗುವುದೆಂದು ಮಾರ್ಗಕಾರನು ವಿವರಿಸಿದ್ದಾನೆ :– (೧) 'ವೀರಸಂ ಸ್ಫುಟೋಕ್ತಿಯಿಂ' (ಪ್ರಕಟಮಕ್ಕೆ) : ಸಮಬಂಧದಲ್ಲಿ 'ಮೃದುಬಂಧ', 'ಸ್ಫುಟಬಂಧ' ಎಂಬೆರಡು ವಿಭಾಗಗಳನ್ನು ಈ ಹಿಂದೆಯೆ ವಿವರಿಸಿದೆ. (ನೋಡಿ : ಪದ್ಯ ೫೬–೫೮ರ ಟಿಪ್ಪಣಿ). ಕಾವ್ಯಬಂಧದಲ್ಲಿ ಸ್ಫುಟವರ್ಣಗಳ ಪ್ರಯೋಗವು ವೀರರಸ ವ್ಯಂಜಕ. (೨) 'ಉದಾರತಮಂ ಕರುಣಾರಸಂ ಮೃದೂಚ್ಚಾರಣೆಯಿಂದಂ (ಪ್ರಕಟಮಕ್ಕೆ)' : ಎಲ್ಲ ರಸಗಳಲ್ಲಿಯೂ ಕರುಣಾರಸವು ಅತ್ಯಂತ ಉದಾರವಾದುದು. ಈ ರಸದ ಸ್ಥಾಯೀಭಾವ ಶೋಕ. ಶೋಕವು ನಮ್ಮ ಹೃದಯವನ್ನು ಕರಗಿಸಿ, ನಮ್ಮಲ್ಲಿ ಕರುಣಾರಸವು ಅನುಭವಕ್ಕೆ ಬರಬೇಕಾದರೆ, ನಮ್ಮಲ್ಲಿ ಸಂಸ್ಕಾರಗತವಾದ ಔದಾರ್ಯವಿರಬೇಕು. ನಮ್ಮ ಉದಾರಭಾವವನ್ನು ಪ್ರಚೋದಿಸಲು ಮೃದುವರ್ಣಗಳಿಂದ ಕೂಡಿದ ಮೆಲುನುಡಿಗಳಿಗೆ ಮಾತ್ರ ಸಾಧ್ಯ. ಇದೇ ಮೃದೂಚ್ಚಾರಣೆ, ಅಥವಾ ಮೃದುಬಂಧ. ಇದು ಕೂಡ ಸಮಬಂಧದ ಒಂದು ಪ್ರಭೇದ. (ನೋಡಿ: ಪು.೨೪೨). (೩) 'ಅದ್ಭುತರಸಂ ನಿಬಿಡೋಕ್ತಿಗಳಿಂದಂ (ಪ್ರಕಟಮಕ್ಕೆ)': ಅದ್ಭುತರಸದ ಸ್ಥಾಯಿ ಆಶ್ಚರ್ಯ, ಬೆರಗು. ನಮ್ಮ ಮನಸ್ಸಿನಲ್ಲಿ

---

೩೩. 'ಗುಣಗಳಿಗೆ ರಸಪರತ್ವ'ವನ್ನು ಕಲ್ಪಿಸಿರುವುದು ಮಾರ್ಗಕಾರನ ಸ್ವತಂತ್ರಕಲ್ಪನೆ ಎಂಬುದ ಗಮನಾರ್ಹ. "ಕವಿರಾಜಮಾರ್ಗಕಾರನಿಗೆ ಪೂರ್ವದ ದಂಡಿ, ಭಾಮಹರ ವಿಧಿಗಳಲ್ಲಿ ಈ ಸ್ಪಷ್ಟ ಕಲ್ಪನೆ ಕಾಣುವುದಿಲ್ಲ" ಎಂದು ಡಾ॥ ಕೆ. ಕೃಷ್ಣಮೂರ್ತಿ ತಿಳಿಸಿದ್ದಾರೆ (ಕನ್ನಡದಲ್ಲಿ ಕಾವ್ಯತತ್ತ್ವ, ಪ.೯). ಮಾರ್ಗಕಾರನ ಈ ಕಲ್ಪನೆ ಎಷ್ಟು ಪ್ರಭಾವಶಾಲಿಯಾಯಿತು ಎಂಬುದು ಪಂಪರನ್ನಾದಿಗಳ ಕಾವ್ಯಪ್ರಯೋಗಗಳನ್ನು ಸುವೇದ್ಯವಾಗಿದೆ.

ಆಶ್ಚರ್ಯವುಂಟಾದಾಗ ಅಲ್ಲಿ ಭಾವಸಂಶ್ಲೇಷ ಅಥವಾ ವಿವಿಧ ಭಾವಗಳ ಹೆಣಿಗೆ ಉಂಟಾಗುತ್ತದೆ. ಆದ್ದರಿಂದ, ಇಂಥ ಸಂಶ್ಲಿಷ್ಟಭಾವದ ಪರಿಣಾಮವಾದ ಅದ್ಭುತ ರಸವನ್ನುಂಟುಮಾಡಲು ಸಂಶ್ಲೀಷ್ಟವಾದ, ಅಥವಾ ಒಂದರೊಡನೆ ಒಂದು ಕೂಡಿಕೊಂಡು ಒತ್ತಾಗಿರುವ, ಸಂಯುಕ್ತಾಕ್ಷರ ಪ್ರಚುರವಾದ, 'ನಿಬಿಡ' ಬಂಧವೆ ಸಮರ್ಥ. (೪) 'ಶೃಂಗಾರರಸಂ ಸುಕುಮಾರೋಕ್ತಿಗಳಿಂ (ಪ್ರಕಟಮಕ್ಕೆ)' : ಶೃಂಗಾರದ ಸ್ಥಾಯೀಭಾವವು 'ರತಿ'; ರತಿಭಾವ ಸುಕುಮಾರವಾದುದು, ಕೋಮಲವಾದುದು ; ಆದ್ದರಿಂದ ಆ ಭಾವಪ್ರಕಾಶನಕ್ಕೆ ಸುಕುಮಾರತರ (ಕೋಮಲ) ವರ್ಣಗಳಿಂದ ಕೂಡಿದ 'ಸುಕುಮಾರ' ಬಂಧವು ಯೋಗ್ಯವಾದುದು. (೫) 'ಪ್ರಶಾಂತದಂ ರಸಂ ಸತತಂ ಪ್ರಸನ್ನ ಗಂಭೀರತರೋಕ್ತಿಯಿಂ (ಪ್ರಕಟಮಕ್ಕೆ)' : ಶಾಂತರಸದ ಸ್ಥಾಯೀಭಾವ ಶಮೆ, ಎಂದರೆ ಅರಿಷಡ್ವರ್ಗವಿದೂರವಾದ ನಿರ್ವಿಕಾರ ಮನೋಭಾವ ; ಅದರ ಲಕ್ಷಣ, ನತಿಳಿನೀರಿನ ಆಳವಾದ ಸರೋವರದಂತೆ 'ಪಸನ್ನಗಂಭೀರ'; ಈ ಭಾವವನ್ನು ಪ್ರಕಟಪಡಿಸಲು 'ಪಸನ್ನಗುಣ'ದಿಂದ ಕೂಡಿದ ಉಕ್ತಿರೀತಿ (ಪದ್ಯ ೭೭–೭೮ರ ಟಿಪ್ಪಣಿ ನೋಡಿ) ತಕ್ಕುದು. ('ಅಣುಓಗದಾರ ಸುತ್ತ' ಎಂಬ ಪ್ರಾಕೃತ ಜೈನಧರ್ಮ ಗ್ರಂಥದಲ್ಲಿ 'ಶಾಂತ'ರಸಕ್ಕೆ 'ಪಸಂತ' (=ಪ್ರಶಾಂತ) ಎಂದು ಉಲ್ಲೇಖಿಸಲಾಗಿದೆ. – ಭಾ.ಕಾ.ಮೀ., (ಪುಟ ೨೮, ಅಡಿ ಟಿಪ್ಪಣಿ).] (೬) 'ಹಾಸ್ಯರಸಮಾಮಧುರೋಕ್ತಿಗಳಿಂ (ರಸಾವಹಂ ಅಕ್ಕೆ)' : ಹಾಸ್ಯದ ಸ್ಥಾಯಿ ಹಾಸ ಅಥವಾ ವಿನೋದ. 'ಮಧುರ ಗುಣ'ಕ್ಕೆ ಅಗತ್ಯವಾದ ಮಧುರೋಕ್ತಿ ಅತವಾ ಕಿವಿಗಿಂಪಾದ ಸವಿಮಾತು ಹಾಸ್ಯರಸ ಪ್ರತೀತಿಗೆ ಸಹಕಾರಿ. ಏಕೆಂದರೆ, ಹಾಸವೂ ಒಂದು ಮಧುರವಾದ ಭಾವ. (ಇಲ್ಲಿ, 'ಹಾಸ್ಯ' ಎಂಬ ಮಾತನ್ನು ವಿಶಾಲವಾದ ಅರ್ಥದಲ್ಲಿ ಗ್ರಹಿಸಬೇಕು). (೭) 'ಭೀಭತ್ಸರಸಾಂತರಂ ಶಿಥಿಲ ಬಂಧನದಿಂದ (ರಸಾವಹಂ ಅಕ್ಕೆ)': ಅದ್ಭುತ ರಸವು 'ನಿಬಿಡ ಬಂಧ' ದಿಂದ ಪ್ರತೀತವಾಗುವಲ್ಲಿ, ಭೀಭತ್ಸವು ಅದಕ್ಕೆ ವ್ಯತಿರಿಕ್ತವಾದ 'ಶಿಥಿಲ ಬಂಧ'ದಿಂದ ಪ್ರತೀಯಮಾನವಾಗುವುದು. ಭೀಭತ್ಸರಸದ ಸ್ಥಾಯೀಭಾವ ಜುಗುಪ್ಸೆ ಅಥವಾ ಅಸಹ್ಯತೆ. ಶಿಥಿಲ ಅಥವಾ ಸಡಿಲವಾದ ರಚನೆ ಬಿಡಿಬಿಡಿಯಾದ ಅಲ್ಪಪ್ರಾಣಾಕ್ಷರಗಳಿಂದ ಸಿದ್ಧಿಸುತ್ತದೆ. "ಅದ್ಭುತ ರಸಭಾವವಾದ ಆಶ್ಚರ್ಯವು ಹೇಗೆ ಅಂತರಂಗವನ್ನು ನಿಬಿಡೀಕೃತವನ್ನಾಗಿ ಮಾಡುವುದೋ ಹಾಗೆ ಈ ಕೊಕ್ಕರಿಕೆಯು

ಅಂತರಂಗವನ್ನು ಸಡಿಲಾಗಿ ಮಾಡಿಬಿಡುವುದು. ಹೃದಯವನ್ನು ಶಿಥಿಲೀಕರಿಸುವ ಭಾವ (ಅರ್ಥ) ದಿಂದ ಏಳ್ಗೆವಡೆಯುವ ಭೀಭತ್ಸವನ್ನು ಶಿಥಿಲಬಂಧನದಿಂದಲೇ ವಿಸ್ತರಿಸತಕ್ಕದ್ದು. ಈ ಶಿಥಿಲಬಂಧವು ಉತ್ತರ ಮಾರ್ಗೀಯ ಗುಣ" ಎಂದು ಮುಳಿಯ ತಿಮ್ಮಪ್ಪಯ್ಯನವರು ಅಭಿಪ್ರಾಯಪಟ್ಟಿದ್ದಾರೆ. (ಕ.ರಾ.ವಿವೇಕ–೨). (ನಮ್ಮ ಅಭಿಪ್ರಾಯದಲ್ಲಿ ಶಿಥಿಲಬಂಧವು ದಕ್ಷಿಣಮಾರ್ಗೀಯ ಗುಣ. ಪದ್ಯ ೬೪–೬೫ರ ಟಿಪ್ಪಣಿ ನೋಡಿ). (೮) 'ಭಯಾನಕೋದ್ಯತ್ ಸುರಸಂ ವಿಷಮ ಬಂಧನದಿಂ (ರಸಾವಹಂ ಅಕ್ಕೆ)' : ಸಮಬಂಧಕ್ಕೆ ವ್ಯತಿರಿಕ್ತವಾದದ್ದು ವಿಷಮಬಂಧ (ಸಮ–ವಿಷಮಬಂಧ ಗುಣಲಕ್ಷಣಕ್ಕೆ ೫೬–೫೮, ೫೯ ಈ ಪದ್ಯಗಳ ಟಿಪ್ಪಣಿಗಳನ್ನು ನೋಡಿ). 'ಭಯಾನಕ' ರಸದ ಸ್ಥಾಯೀಭಾವವಾದ 'ಭಯ' ಭಾವವನ್ನು ಪ್ರಕಟಪಡಿಸಲು ವಿಷಮಬಂಧದ ಕ,ಚ,ತ,ಟ ಮತ್ತು ರೇಫಯುಕ್ತಿ ಸಂಯುಕ್ತಾಕ್ಷರ ಪ್ರಚುರವಾದ ವಿಷಮಬಂಧವು ಸರಿಯಾದುದು. (ಭಯದಲ್ಲಿ ಮನಸ್ಸಿನ ಸಮಸ್ಥಿತಿಯು ಪಲ್ಲಟವಾಗುವುದರಿಂದ ಅದನ್ನು ವ್ಯಕ್ತಪಡಿಸಲು ಸಮವಲ್ಲದ ವಿಷಮಬಂಧವು ಯೋಗ್ಯವೆಂದು ಮಾರ್ಗಕಾರನ ಅಭಿಪ್ರಾಯವಿರಬಹುದು). (೯) 'ಊರ್ಜಿತೋಕ್ತಿಗಳಿಂ ಅತಿರೌದ್ರಸಂ (ನೃಪತುಂಗದೇವ ಮಾರ್ಗೋತ್ಸವಂ ರಸಾವಹಂ) ಅಕ್ಕೆ' : (ಇಲ್ಲಿನ 'ನೃಪತುಂಗದೇವ ಮಾರ್ಗೋತ್ಸವಂ ರಸಾವಹಂ ಅಕ್ಕೆ' ಎಂಬೀ ವಾಕ್ಯವು ೧೦೦ನೆಯ ಪದ್ಯದಲ್ಲಿ ಉಕ್ತವಾದ, ಕರ್ತೃಪದಸ್ಥಾನದಲ್ಲಿರುವ, ಎಲ್ಲ ರಸನಾಮ ವಾಚಕಗಳಿಗೂ ಅನ್ವಯವಾಗುತ್ತದೆ. ಹೀಗೆಯೇ, ೯೯ನೆಯ ಪದ್ಯದ 'ಪ್ರಕಟಮಕ್ಕೆ' ಎಂಬ ಕ್ರಿಯಾವಾಚಕವೂ ಕೂಡ). ರೌದ್ರರಸದ ಸ್ಥಾಯೀಭಾವ ಕ್ರೋಧ. ಕ್ರೋಧವು ಮನಸ್ಸಿನಲ್ಲಿ ಊರ್ಜಿತವಾಗಿರತಕ್ಕ ಎಂದರೆ ದೃಢವಾಗಿ ನೆಲೆನಿಂತಿರತಕ್ಕ ಭಾವ. ಅದನ್ನು ಪ್ರಕಟಗೊಳಿಸಲು 'ಊರ್ಜಿತೋಕ್ತಿ'ಗಳೇ ಆಗಬೇಕು. ಕೇಳಿದೊಡನೆಯೆ ಮನಸ್ಸಿಗೆ ನಾಟುವಂತಹ ಮಾತುಗಳೇ ಊರ್ಜಿತೋಕ್ತಿಗಳು. ಓಜೋಲಕ್ಷಣದ ಸಮಾಸಪದ ಭೂಯಿಷ್ಠವಾದ ಉಕ್ತಿವಿಶೇಷವನ್ನೇ ಊರ್ಜಿತೋಕ್ತಿ ಎಂದು ಮಾರ್ಗಕಾರನು ನಿರ್ದೇಶಿಸಿರುವಂತೆ ತೋರುತ್ತದೆ. (ಓಜೋಗುಣ ಲಕ್ಷಣಕ್ಕೆ ಪದ್ಯ ೮೫–೮೬ ರ ಟಿಪ್ಪಣಿ ನೋಡಿ).

ಪದ್ಯ ೧೦೧ : ತಾತ್ಪರ್ಯ : 'ಮಾತುಗಳು ಯಾವುವೇ ಆಗಲಿ, ಉಪವರ್ಣಿಸಿರುವ

ಮಾರ್ಗಗಳಿಗೆ ಅನುಗುಣವಾಗಿರುವ ಪ್ರಯೋಗಗಳಿಂದ ಕೂಡಿ ಪ್ರಸಿದ್ಧವಾಗಿರುವ ಕನ್ನಡದಲ್ಲಿ ಅವು ಗುಣವನ್ನೇ ಉಂಟುಮಾಡುವುವು. (ಎಂದರೆ, ಬಳಸುವ ಮಾತು ಯಾವುದೇ ಆದರೂ ಅದು ಉತ್ತರ ಇಲ್ಲವೆ ದಕ್ಷಿಣಮಾರ್ಗ ಪದ್ಧತಿಗೆ ಅನುಸಾರವಾಗಿ ಪ್ರಯೋಗವಾಗಿರಬೇಕೆಂದು ಅಭಿಪ್ರಾಯ). ಆದ್ದರಿಂದ, ವಿದ್ವಾಂಸರು 'ನೀತಿನಿರಂತರ'ನು (ನೃಪತುಂಗನು) ಕಲ್ಪಿಸಿರುವ ಉಕ್ತಿರೀತಿಯ ನಿರ್ಣಯವನ್ನು ಈ ತೆರದಲ್ಲಿ ನಿಶ್ಚಯಿಸಿಕೊಳ್ಳಲಿ.'

'ವಚನವಿರಚನೆ ಮಾರ್ಗದ್ವಿತಯಗಳ ಗುಣಾನುಗುಣವಾಗಿ ಹೇಗೆ ರಸವಿಶೇಷದಿಂದಲೂ ಕೂಡಿಕೊಂಡಿರಬಹುದು' (ಪ.೯೮) ಎಂಬ ನಿರ್ದೇಶಕ್ಕೆ ಅನುಗುಣವಾಗಿ ೯೯–೧೦೦ನೆಯ ಪದ್ಯಗಳಲ್ಲಿ ತತ್ಸಂಬಂಧವಾದ ಲಕ್ಷಣ ವಿವರಣೆಯನ್ನು ಮಾಡಿರುವುದರಿಂದ, ಈ (೧೦೧ನೆಯ) ಪದ್ಯದಲ್ಲಿ 'ಮಾತುಗಳಾವುವಾನುಂ..." ಇತ್ಯಾದಿಯಾದ ಸಾಮಾನ್ಯ ನಿರ್ದೇಶವು ೧೦೨ರಿಂದ ೧೧೦ರ ವರೆಗಿನ ಪದ್ಯಗಳಲ್ಲಿ ವಿವರಿಸಿರುವ ಕನ್ನಡ ಮಾತುಗಳ ಪ್ರಯೋಗವಿಚಾರಕ್ಕೆ ಅನ್ವಯಿಸುತ್ತದೆ ಎಂದು ಗ್ರಹಿಸಬೇಕು. (ಇದು ಈ ಪೂರ್ವದಲ್ಲಿ ಮಾರ್ಗಕಾರನು ನಿರವಿಸಿದ 'ರಸಾನುಕೂಲ ವಚನ'ಗಳ ಪ್ರಯೋಗವಿಚಾರಕ್ಕೆ ಅನ್ವಯಿಸುತ್ತದೆಯೆಂದು ಮುಳಿಯ ತಿಮ್ಮಪ್ಪಯ್ಯನವರ ಅಭಿಪ್ರಾಯ.

ಪದ್ಯ ೧೦೨–೧೦೭ : ಈ ಆರು ಪದ್ಯಗಳಲ್ಲಿ, ಕೆಲವು ಕನ್ನಡ ಕ್ರಿಯಾಪದರೂಪಗಳು ಉಭಯಮಾರ್ಗಗಳಲ್ಲಿಯೂ ಹೇಗೆ ಪ್ರಯೋಗವಾದರೆ ಸಾಧು, ಹೇಗೆ ಪ್ರಯೋಗವಾದರೆ ಅಸಾಧು ಎಂಬ ವಿಷಯವನ್ನು ತಿಳಿಯಹೇಳಿದ್ದಾನೆ. ಈವರೆಗಿನ ಮಾರ್ಗವಿವೇಚನೆ ಬಹುಮಟ್ಟಿಗೆ ದಂಡಿಯನ್ನು ಅನುಸರಿಸಿದ್ದಾಗಿದೆ. ಕನ್ನಡಕ್ಕೆ ಮಾತ್ರ ಸಂಬಂಧಪಟ್ಟಂತೆ ಮಾಡಿರುವ ಈ ಮಾರ್ಗವಿವೇಚನೆ ಕಾವ್ಯಮೀಮಾಂಸೆಗೆ ಮಾರ್ಗಕಾರನ ಸ್ವತಂತ್ರವಾದ ಕೊಡುಗೆ.

ಪದ್ಯ ೧೦೨–೧೦೩ : ನೋಡುವೆನ್, ಬೇಡುವೆನ್ – ಈ ಕ್ರಿಯಾರೂಪಗಳು ಉತ್ತರಮಾರ್ಗ ವಾಚಕ ; ನೋಟ್ಟೆನ್, ಬೇಟ್ಟೆನ್ ಇವು – 'ದಕ್ಷಿಣಮಾರ್ಗ ವಿಚಕ್ಷಣೋದಿತ' ರಚನೆ.[೩೪]

೩೪. ಕೇಶಿರಾಜನು 'ಡಕಾರಕ್ಕಾದೇಶಮಾದ ಟಟಿಕ್ಕೆ ಪ್ರಯೋಗ'ವನ್ನು ಹೇಳುವಾಗ, ಮಾಡುವಂ = ಮಾಟ್ಟಂ, ನೋಡುವಂ = ನೋಟ್ಟಂ, ಬೇಡುವಂ = ಬೇಟ್ಟಂ, ಬೆಗಡುವಂ =

ಈ ಪದ್ಯದ ಪೂರ್ವಾರ್ಧ ಉತ್ತರಾರ್ಧಗಳಲ್ಲಿ ಪ್ರಯೋಗವಾಗಿರುವ 'ಅರ್ಥಿಗಣಾರ್ಥಿತ ಕಲ್ಪವೃಕ್ಷ', 'ಉದಾತ್ತ ಚಾರುಗುಣ' ಎಂಬೀ ವಿಶೇಷಣಗಳು ಒಬ್ಬ 'ಮಹೀಪತಿ'ಯನ್ನು ಕುರಿತಾಗಿವೆ. ಆ ಮಹೀಪತಿ ನೃಪತುಂಗನೇ ಇರಬೇಕು.

ಪದ್ಯ ೧೦೩ : ಮೇಲಿನ ಪದ್ಯದಲ್ಲಿ ದೃಷ್ಟಾಂತಿಸಿರುವ 'ನೋಡುವೆನ್ – ನೋಟ್ಪೆನ್, ಬೇಡುವೆನ್ – ಬೇಟ್ಪೆನ್' ಶಬ್ದರೂಪಗಳನ್ನು ಅನುಸರಿಸಿ, ಸೂಡುವೆನ್ > ಸೂಟ್ಪೆನ್, ಕೂಡುವೆನ್ > ಕೂಟ್ಪೆನ್, ಕಾಡುವೆನ್ > ಕಾಟ್ಪೆನ್, ತೋಡುವೆನ್ > ತೋಟ್ಪೆನ್' ಎಂಬುದಾಗಿ ಪ್ರಯೋಗಿಸಕೂಡದೆಂದು ಮಾರ್ಗಕಾರನು ನಿಷೇಧಿಸಿದ್ದಾನೆ. (ಎರಡು ಮಾರ್ಗಗಳಲ್ಲಿಯೂ, ಸೂಡುವೆನ್ ಇತ್ಯಾದಿ ರೂಪಗಳನ್ನು ಪ್ರಯೋಗಿಸಬಹುದೇ ಹೊರತು, ಸೂಟ್ಪೆನ್ ಇತ್ಯಾದಿ ರೂಪಗಳು ನಿಷಿದ್ಧಗಳು.)

ಅರ್ಥಿ = ಬೇಡುವವನು ; ಯಾಚಕ. ಅರ್ಥಸಂಚಯ = ಹಣದ ರಾಶಿ. ಅೞ್ತೆ = ಪ್ರೀತಿ. ಸೂಡು = ಮುಡಿ, ಧರಿಸು. ಅಣಂ = ಸ್ವಲ್ಪವೂ. ನಿಕ್ಕುವ = ನಿಶ್ಚಯ.

ಪದ್ಯ ೧೦೪–೧೦೫ : ಬರು, ಇರು, ತರು – ಈ ಧಾತುಗಳಿಗೆ 'ಇಸು' ಪ್ರತ್ಯಯವು ಸೇರಿ ಸಿದ್ಧಿಸಿದ ಬರಿಸುವೆನ್, ಇರಿಸುವೆನ್, ತರಿಸುವೆನ್ ಎಂಬ ಕ್ರಿಯಾರೂಪಗಳು 'ದಕ್ಷಿಣಮಾರ್ಗ ವಿಶೇಷ ಭಾಷಿತಂ' ಎಂದರೆ ದಕ್ಷಿಣಮಾರ್ಗಕ್ಕೆ ವಿಶಿಷ್ಟವಾದ ನುಡಿವಳಿ. ಅವೇ ಧಾತುಗಳು ಉತ್ತರಮಾರ್ಗದಲ್ಲಿ ಬರಿಪೆನ್, ಇರಿಪೆನ್, ತರಿಪೆನ್ ಎಂಬುದಾಗಿ ವರ್ತಿಸುತ್ತವೆ (ಸಲುವಳಿಯಾಗುತ್ತವೆ).

ಈ ಎರಡು ಪದ್ಯಗಳಲ್ಲಿಯೂ ಒಂದೇ ಸಂಗತಿ ನಿರೂಪಿತವಾಗಿದೆ. 'ಕಾಂತನನ್ನು ನಂದನವನಾಂತರಕ್ಕೆ ಬರಿಸುವೆನು ; (ಅಲ್ಲಿ ಆತನನ್ನು) ಸಮಂತು ಇರಿಸುವೆನು ; ಅಂತು ಮನ್ಮಥ ಸುಖಸಾಧಕಗಳಾದ ಕಾರಣಗಳನ್ನು [೩೫] (ಉದ್ದೀಪಕ ಸಾಮಗ್ರಿಯನ್ನು) ತರಿಸುವೆನು ; ಹೀಗೆ,

---

ಬೆಗಟ್ಪಂ – ಎಂಬೀ ದೃಷ್ಟಾಂತಗಳನ್ನು ಕೊಟ್ಟಿದ್ದಾನೆ. (ಶ.ಮ.ದ.,ಕ.ಸಾ.ಪ.ಮುದ್ರಣ ; ಸೂ. ೧೮–೧೯, ಪು.೨೧). ಆದರೆ ಪ್ರಯೋಗ ವೈಕಲ್ಪ್ಯವನ್ನನುಲಕ್ಷಿಸಿ ಅವನು ಮಾರ್ಗಭೇದ ವಿವಕ್ಷೆಯನ್ನು ಮಾಡಿಲ್ಲ.

೩೫. '(ಸಮಂತಿರಿಸುವೆನ್ ಅಂತು) ಅನಂತ ಸುಖಸಂಗತ ಮಂಗಳ ಕಾರಣಂಗಳಂ'

ನನ್ನ ಮನೋವಲ್ಲಭನೊಂದಿಗೆ ಮನಸ್ಸಂತೋಷದಿಂದ ನೆರೆಯುವೆನು (ಕೂಡುವೆನು)' – ಎಂದು ನಲ್ಲೆಯೊಬ್ಬಳು ತನ್ನ ನಲ್ಲನ ಕುರಿತಾಗಿ (ಬಹುಶಃ) ತನ್ನ ಕೆಳದಿಗೆ (೧೦೪ ನೆಯ ಪದ್ಯದಲ್ಲಿ) ಹೇಳಿದ ವಿಷಯವನ್ನೇ ಬೇರೆಯ ಮಾತುಗಳಲ್ಲಿ ಮಾರ್ಗಭೇದ ನಿದರ್ಶನಕ್ಕಾಗಿ ನಿರೂಪಿಸಲಾಗಿದೆ.

ಅಲಂಪು = ನಲಿವು, ಸೊಗಸು. ಅಮೇಘಂ = ವ್ಯರ್ಥವಾಗದೆ. ಅನಾಕುಳಂ = ನಿಶ್ಚಿಂತೆಯಿಂದ, ಭ್ರಾಂತಿಗೊಳ್ಳದೆ.

ಪದ್ಯ ೧೦೬ : ೧೦೫ನೆಯ ಪದ್ಯದಲ್ಲಿ ಉತ್ತರಮಾರ್ಗಕ್ಕೆ ಲಕ್ಷ್ಯಗಳಾಗಿರುವ ಬರಿಪೆನ್, ಇರಿಪೆನ್, ತರಿಪೆನ್ ಎಂಬೀ ಕ್ರಿಯಾರೂಪಗಳಲ್ಲಿನ 'ಪ'ಕಾರವು ('ಇಸು' ಪ್ರತ್ಯಯಕ್ಕೆ ಆದೇಶವಾಗಿ ಬಂದ 'ಪು') ಉತ್ತರೋತ್ತರ (ಮಾರ್ಗ)ದಲ್ಲಿ ದ್ವಿತ್ವವಾಗಿ, ಅವು 'ಬರಿಪ್ಪೆನ್', 'ಇರಿಪ್ಪೆನ್', 'ತರಿಪ್ಪೆನ್' ಎಂದಾಗುತ್ತವೆ.

ಇಲ್ಲಿ ವರ್ಣಿತವಾಗಿರುವ ವಿಷಯುವೂ ಮೇಲಿನ ಎರಡು ಪದ್ಯಗಳದ್ದೇ.

**ಉತ್ತರೋತ್ತರ ಮಾರ್ಗ** : ಇದೊಂದು ಕಡೆ ಹೊರತು, ಬೇರೆ ಎಲ್ಲಿಯೂ ಈ ಮಾರ್ಗಭೇದದ ಪ್ರಸ್ತಾಪವಿಲ್ಲ. ಮಾರ್ಗಕಾರನು ಉದ್ದಕ್ಕೂ ದಕ್ಷಿಣೋತ್ತರವೆಂಬ ಎರಡು ಮಾರ್ಗಗಳನ್ನೇ ('ಉಭಯ ಮಾರ್ಗ', 'ಮಾರ್ಗದ್ವಿತಯು' ಇತ್ಯಾದಿಯಾಗಿ) ಕುರಿತು ಹೇಳುತ್ತಿರುವುದರಿಂದ, ಇದು ಉತ್ತರಮಾರ್ಗದ ಒಂದು ಪ್ರಭೇದವೆಂದೇ ಗ್ರಹಿಸಬೇಕು. ಅದಕ್ಕೆಂದೇ ಅದು ಉತ್ತರೋತ್ತರ ಎಂದು ನಿರ್ದಿಷ್ಟವಾಗಿರುವುದು.

---

ಪಾಠಕರ ಮುದ್ರಣ, ಮದ್ರಾಸು ಮುದ್ರಣ – ಇವೆರೆಡರಲ್ಲಿಯೂ ಇರುವ ಪಾಠವನ್ನೇ ಇಲ್ಲಿ ಸ್ವೀಕರಿಸಲಾಗಿದೆ. ಬೇರೆಯ ಪಾಠಾಂತರಗಳು ಗಮನಕ್ಕೆ ಬಂದಿಲ್ಲ : ಆದರೆ, ದಿ॥ ಬಿ.ಎಂ.ಶ್ರೀ.ಯವರು 'ಅನಂಗ ಸಖಸಂಗತ' ಎಂಬ ಸಣ್ಣ ತಿದ್ದುಪಾಟನ್ನು ಸೂಚಿಸಿದ್ದಾರೆ. (Q.J.M.S., Vol.XXIII-No.3 ; ಪು. ೪೪೦). ಅದು ಅಂಗೀಕಾರಯೋಗ್ಯವೆಂದು ಕಾಣುತ್ತದೆ. ಏಕೆಂದರೆ, ೧೦೫ನೆಯ ಪದ್ಯದಲ್ಲಿ, ಇದೇ ಅರ್ಥವನ್ನು ಕೊಡುವ 'ಸುರತರಾಗ... ಕಾರಣಂಗಳಂ' ಎಂಬ ಮಾತುಗಳಿವೆ ; ೧೦೬ನೆಯ ಪದ್ಯದ ೨ನೆಯ ಪಂಕ್ತಿಯಲ್ಲಿ 'ಅನಂಗ ಸುಖೋಚಿತಂಗಳಾನ್' ಎಂಬಲ್ಲಿ, 'ಅನಂಗ' ಎಂಬ ಪದವೆ ಪ್ರಯೋಗವಾಗಿದೆ. ಲಿಪಿಕಾರನ ಪ್ರಮಾದದಿಂದ 'ಅನಂಗ' 'ಅನಂತ'ವಾಗಿರಬಹುದು.

ಪದ್ಯ ೧೦೭ : ದಕ್ಷಿಣಮಾರ್ಗ ವಾಚಕಗಳಾದ ಬರಿಸುವೆನ್, ಇರಿಸುವೆನ್, ತರಿಸುವೆನ್ – ಇವು ಬರಿಪೆ (ಪ್ಪೆ)ನ್, ಇರಿಪೆ (ಪ್ಪೆ)ನ್, ತರಿಪೆ(ಪ್ಪೆ)ನ್ ಎಂದು ಉತ್ತರ ಮತ್ತು ಉತ್ತರೋತ್ತರ ಮಾರ್ಗಗಳಲ್ಲಿ ಪ್ರಯೋಗವಾಗುತ್ತವೆಯೆಂದು ಹೇಳಿದ ಮೇಲೆ, ಈ ವಿಧಿಗೆ ಅಪವಾದವನ್ನು ಈ ಪದ್ಯದಲ್ಲಿ ಮಾರ್ಗಕಾರನು ತಿಳಿಸಿದ್ದಾನೆ.

ಎರಡು ಮಾರ್ಗಗಳಲ್ಲಿಯೂ ('ಮಾರ್ಗಯುಗ್ಮದೊಳ್'), – 'ಪರಸುವೆನ್' ಎಂದು ಹೇಳಬಹುದೇ ಹೊರತು '(ಆಂ) ಪರಪೆನ್' ಎನ್ನಲಾಗದು ; 'ಬೆರಸುವೆನ್' ಎಂದೆನ್ನಬಹುದೇ ಹೊರತು '(ಆಂ) ಬೆರಪೆನ್' ಎನ್ನಲಾಗದು.[೩೬]

ಪದ್ಯ ೧೦೮–೧೧೦ : ಈ ಹಿಂದೆ, ೫೨–೮೬ನೆಯ ಪದ್ಯಗಳಲ್ಲಿ ಲಕ್ಷಣಲಕ್ಷ್ಯ ಸಮನ್ವಯಪೂರ್ವಕ ವಿವರಿಸಿರುವ ದಕ್ಷಿಣೋತ್ತರ ಮಾರ್ಗಭೇದಗಳಿಗೆ ಇವು ಅಧಿಕೋತ್ತರ ಲಕ್ಷ್ಯಗಳಾಗಿವೆ. ಹಿಂದಿನ ಲಕ್ಷ್ಯಪದ್ಯಗಳು ಸಮ, ಮಧುರ, ನಿಬಿಡ, ಇತ್ಯಾದಿಯಾಗಿ ಬಂಧಾನುಗತವಾಗಿವೆ. ಈ ಮೂರು ಲಕ್ಷ್ಯಪದ್ಯಗಳಲ್ಲಿ ಕಾಣಬರುವ ಬೇರೆಯ ಮಾರ್ಗಲಕ್ಷಣಗಳಾಗುವುವು ಎಂಬುದನ್ನು ಮಾರ್ಗಕಾರನು ವಿವರಿಸಿಲ್ಲ. ಪ್ರತಿಪದ್ಯದ ಪೂರ್ವಾರ್ಧದಲ್ಲಿ ದಕ್ಷಿಣ ಮಾರ್ಗಾನುಗುಣವಾಗಿ

---

೩೬. ಬರಿಸು, ಇರಿಸು, ತರಿಸು ಎಂಬ ಕ್ರಿಯಾಪದಗಳಲ್ಲಿ ಬರು, ಇರು, ತರು ಎಂಬ ಧಾತುಗಳಿಗೆ ಪ್ರೇರಣಾರ್ಥದಲ್ಲಿ 'ಇಸು' ಪ್ರತ್ಯಯ ಸೇರಿದೆ. 'ಪರಸು', 'ಬೆರಸು' – ಇವೇ ಧಾತುಗಳಾಗಿವೆ ; ಇವಕ್ಕೆ ಮತ್ತೆ ಪ್ರೇರಣಾರ್ಥಕ ಇಸುಪ್ರತ್ಯಯವನ್ನು ಹತ್ತಿಸಲಾಗದ ಕಾರಣ, 'ಇಸು'ವಿಗೆ 'ಪು' ಆದೇಶವಾಗಿ ಬರುವಂತಿಲ್ಲ.

'ಹರಡು' ಎಂಬ ಅರ್ಥದಲ್ಲಿ 'ಪರಪು – ಪೆರಪು' ಎಂಬ ಬೇರೆಯ ಧಾತುವೇ ಇದೆ. ಬೆರಸು : 'ಬೆರೆ' ಧಾತುವಿನಿಂದ ಬೆರೆಯಿಪೆ(ಪ್ಪೆ)ನ್ ಎಂಬ ರೂಪ ಸಾಧನೀಯ. ಕೇಶಿರಾಜನು ಸೂ. ೨೩೨ರಲ್ಲಿ, ಭವಿಷ್ಯದ 'ವ'ಕಾರವು 'ಪ'ಕಾರವಾದಾಗ 'ಪ'ಕಾರಕ್ಕೆ ದ್ವಿತ್ವವುಂಟಾಗುವುದೆಂದು ಹೇಳಿ, (ತೊಳಗುವಂ >) ತೊಳಪ್ಪಂ, (ಬೆಳಗುವಂ >) ಬೆಳಪ್ಪಂ, (ಉದಯಿಸುವಂ >) ಉದಯಿಪ್ಪಂ ಎಂಬ ಪ್ರಯೋಗಗಳನ್ನು ಕೊಟ್ಟಿದ್ದಾನೆ. ಕ.ರಾ. ಮಾರ್ಗದ ಪ್ರಯೋಗದ ಕ್ರಿಯಾಪದಗಳೂ ಭವಿಷ್ಯತ್ಕಾಲ ವಾಚಕಗಳು. (೧೧೦ನೆಯ ಪದ್ಯದಲ್ಲಿ 'ಸೊಗಯಿಪ್ಪುದಾಯ್ತು' ಎಂಬ ಪ್ರಯೋಗವನ್ನೂ ಗಮನಿಸಿ.) "ವ್ಯಾಕರಣ ಗ್ರಂಥಗಳಲ್ಲಿ 'ಇಸು', 'ಪು', 'ಪ್ಪು' ಪ್ರತ್ಯಯಗಳ ಉಲ್ಲೇಖವಿದೆಯಲ್ಲದೆ, ಅವುಗಳಲ್ಲಿ ಆಯಾ ವರ್ಗಗಳ ವೈಶಿಷ್ಟ್ಯವೂ ಇದೆ ಎಂದು ನಿರುಕ್ತವಾಗಿಲ್ಲ" (ಮುಳಿಯ ತಿಮ್ಮಪ್ಪಯ್ಯ : ಕ.ರಾ.ವಿವೇಕ – ಭಾಗ ೨)

ಒಂದು ಸಂಗತಿಯನ್ನು ವರ್ಣಿಸಿ, ಅದನ್ನೇ ಉತ್ತರಾರ್ಧದಲ್ಲಿ ಉತ್ತರ ಮಾರ್ಗಾನುಗುಣವಾಗಿ ನಿರೂಪಿಸಿದೆ ; ೧೦೮ನೆಯ ಪದ್ಯದಲ್ಲಿ 'ಮುನಿನಾಥ' ನ ಸ್ವಭಾವ ಸ್ವರೂಪ ವರ್ಣನೆಯಿದೆ ; ೧೦೯ನೆಯ ಪದ್ಯದಲ್ಲಿ, ಅದೇ 'ಮುನೀಂದ್ರ'ನ ಹೆಚ್ಚಿನ ಗುಣವಿಶೇಷದ ಉಲ್ಲೇಖನದೊಂದಿಗೆ, ಆ ಮುನಿಗೆ ಭಕ್ತನೊಬ್ಬನು (ಭವ್ಯನೊಬ್ಬನು ?) 'ಮುದದೆ ಬಾಗಿದ' ಉಲ್ಲೇಖವಿದೆ. (ಬಹುಶಃ ಆ ಮುನಿಪನ ಪ್ರಭಾವದಿಂದ) ಸಸ್ಯಸಂಪತ್ತೆಂಬ 'ಧರಾಲಲನೆ ವಿಶಾಲ ಲಕ್ಷ್ಮಿಯಿಂದ ಕೂಡಿ ಮೆರೆದಳು' ಎಂಬುದು ೧೧೦ನೆಯ ಪದ್ಯದಲ್ಲಿನ ವರ್ಣ್ಯ ವಿಷಯ.[೩೭]

ನಿಱಿಸು = ಇರಿಸು, ನೆಲೆಗೊಳಿಸು. ಮುಳಿಸು = ಮುನಿಸು, ಕೋಪ. ಒಯ್ಯನೆ = ಮೆಲ್ಲನೆ, ನಿಧಾನವಾಗಿ. ತ್ರಿದಶ = ಸ್ವರ್ಗ. ನಿಷೇವಿ = ಸೇವಿಸುವವನು. ಮೌಳಿ, ಮಕುಟ = ಕಿರೀಟ. ಮೇಖಲೆ = ಕಾಂಚಿದಾಮ, ಡಾಬು, ಒಡ್ಯಾಣ.

## ದುಷ್ಕರ ಕಾವ್ಯ – ಚಿತ್ರಬಂಧ

'ಕವಿರಾಜಮಾರ್ಗ'ದ ಎರಡನೆಯ ಪರಿಚ್ಛೇದವು ಸಂಪೂರ್ಣವಾಗಿ 'ಶಬ್ದಾಲಂಕಾರ ವರ್ಣನಾ ನಿರ್ಣಯು'ಕ್ಕೆ ಮೀಸಲಾಗಿದೆ. ಶಬ್ದಾಲಂಕಾರಗಳನ್ನು ವಿವರಿಸುವುದಕ್ಕೆ ಮೊದಲು, ಕಾವ್ಯಶರೀರಕ್ಕೆ ಅಲಂಕಾರಪ್ರಾಯವಾಗದ ಶಾಬ್ದಿಕ ದೋಷಗಳನ್ನು ವಿವರಿಸಿ, ಕೆಲವು

೩೭. ಈ ಮೂರು ಪದ್ಯಗಳಲ್ಲಿ "ಕ್ರಮವಾಗಿ ವಚನರಚನಾ ಪದ್ಧತಿಗಳ ಭೇದ, ಆ ರಚನೆಗಳೊಳಗಿನ ಆರ್ಥಿಕ ಕ್ರಮಭೇದ, ಆ ಅರ್ಥಗಳೊಳಗಿನ ಅಲಂಕಾರನಿರೂಪಣ ಕ್ರಮಭೇದ – ಇವುಗಳ ಸೈತು ಕೊಂಕುಗಳೊಡನೆ ದಕ್ಷಿಣೋತ್ತರ ಮಾರ್ಗಭೇದಗಳು ವ್ಯಕ್ತವಾಗುವಂತೆ ತೋರುವುದು" ಎಂದು ಅಭಿಪ್ರಾಯಪಟ್ಟಿರುವ ಮುಳಿಯ ತಿಮ್ಮಪ್ಪಯ್ಯನವರು ಆ ಅಂಶಗಳನ್ನು ತಮ್ಮ 'ಕ.ರಾ. ಮಾರ್ಗ ವಿವೇಕ' (ಭಾಗ–೨)ದಲ್ಲಿ ವಿಸ್ತಾರವಾಗಿ ಮಾರ್ಗಗತಂ ಪ್ರತೀತ ವಕ್ರೋಕ್ತಿಕೃತಂ" ಎಂಬ ಮಾರ್ಗಕಾರನ ಲಕ್ಷಣನಿರ್ದೇಶವು ಅವರ ವಿವೇಚನೆಗೆ ಪ್ರೇರಕವಾಗಿದ್ದು, ಪ್ರಸ್ತುತ ಪದ್ಯಗಳಲ್ಲಿ ಆ ಭೇದಕಗುಣಗಳನ್ನು ಪ್ರಸ್ಫುಟಗೊಳಿಸುವುದು ಅವರ ಉದ್ದೇಶವಾಗಿದೆ. ಅವರ ವಿವೇಚನೆ ಸೂಕ್ಷ್ಮ ವಿಶ್ಲೇಷಣೆಯಿಂದ ಕೂಡಿದ್ದು ಗಮನಾರ್ಹವಾಗಿದ್ದರೂ ವಿಶೇಷ ಫಲಕಾರಿಯಾಗಿದೆ ಎಂದು ನಮಗೆ ತೋರುವುದಿಲ್ಲ.

ವಿಕಲ್ಪ ಪ್ರಯೋಗಪದ್ಧತಿಯನ್ನು ತಿಳಿಸಿಕೊಟ್ಟಿದ್ದಾನೆ. ಪ್ರಾಸವಿಚಾರದಿಂದ ಶಬ್ದಾಲಂಕಾರ ಪ್ರಕರಣ ನಿಜವಾಗಿ ಪ್ರಾರಂಭವಾಗುತ್ತದೆಯೆನ್ನಬಹುದು. ಅನಂತರ, ಕಾವ್ಯಶರೀರಕ್ಕೆ ಶೋಭೆಯನ್ನುಂಟುಮಾಡುವ 'ಗುಣ'ಗಳನ್ನೂ 'ಬಂಧ'ಗಳನ್ನೂ ದಂಡಿಯು ಮೇಲ್ಪಂಕ್ತಿಯನ್ನು ಅನುಸರಿಸಿ ದಕ್ಷಿಣೋತ್ತರಮಾರ್ಗದ್ವಯ ವಿಭಾಗಾನುಸಾರಿಯಾಗಿ ವ್ಯಾವರ್ಣಿಸಿದ್ದಾನೆ. ಈ ಭಾಗದಲ್ಲಿ ಗುಣಗಳೂ ಬಂಧಪ್ರಕಾರಗಳೂ ಹೇಗೆ ಅರ್ಥಪೋಷಣೆಗೂ ರಸಪ್ರತೀತಿಗೂ ಸಾಧಕಗಳಾಗಬಲ್ಲುವು ಎಂಬುದನ್ನು ಮನಗಂಡಿದ್ದೇವೆ. ಈ ಶಬ್ದಾಲಂಕಾರ ಪ್ರಪಂಚದ ಶಕ್ಯತೆ ಸೌಂದರ್ಯದ ಎಲ್ಲೆಯನ್ನು ದಾಟಿದಾಗ ಅದು 'ದುಷ್ಕರ'ವಾಗಿ (ರಚಿಸಲು ಕಷ್ಟವಾಗಿ) ಮಾತ್ರವಲ್ಲದೆ 'ಚಿತ್ರ'ವಾಗಿಯೂ (ವಿಸ್ಮಯಕಾರಿಯಾಗಿ) ಪರಿಣಮಿಸುತ್ತದೆ. ಇಂಥ 'ಬಂಧ'ವು ರಸದ ಸ್ಪರ್ಶವೂ ಇಲ್ಲದೆ ಕೇವಲ ಚಮತ್ಕಾರ ಪರ್ಯವಸಾಯಿಯಾಗುತ್ತದೆ.

ಭಾಮಹನ 'ಕಾವ್ಯಾಲಂಕಾರ'ದಲ್ಲಿ ದುಷ್ಕರ ಕಾವ್ಯದ ಉಲ್ಲೇಖವಿಲ್ಲ. ಮಾರ್ಗಕಾರನು ದಂಡಿಯು 'ಕಾವ್ಯಾದರ್ಶ'ದಲ್ಲಿ ಹೇಳಿರುವ ಗೋಮೂತ್ರಿಕಾದಿ ದುಷ್ಕರಕಾವ್ಯಗಳಿಗೆ ಲಕ್ಷ್ಯಗಳನ್ನು ಮಾತ್ರ ಕೊಟ್ಟಿರುತ್ತಾನೆ; ಲಕ್ಷಣಗಳನ್ನು ಹೇಳಿಲ್ಲ.

ಕವಿರಾಜಮಾರ್ಗಕಾರನು ಪದಗತ ಪ್ರತ್ಯಾಗತ, ಪಾದಗತ ಪ್ರತ್ಯಾಗತ, ಸಮಸ್ತಗತ ಪ್ರತ್ಯಾಗತ, ಅರ್ಧಗತ ಪ್ರತ್ಯಾಗತ, ಗೂಢಚತುರ್ಥ, ಏಕಾಕ್ಷರಿ, ದ್ವ್ಯಕ್ಷರಿ, ಅತಾಲವ್ಯ, ನಿರೋಷ್ಠ್ಯ, ಸರ್ವತೋಭದ್ರ, ನಿರುತ್ತರ, ಗೋಮೂತ್ರಿಕ, ಯಮಕ, ಅರ್ಧಭ್ರಮಣ, ಮುರಜಬಂಧ, ಕ್ರಿಯಾಗೋಪಕ, ಚಕ್ರ – ಈ ಚಿತ್ರಬಂಧ ಪ್ರಭೇದಗಳಿಗೆ ಲಕ್ಷ್ಯಗಳನ್ನು ಕೊಟ್ಟಿದ್ದಾನೆ. (ಈ ಲಕ್ಷ್ಯಪದ್ಯಗಳೆಲ್ಲ – ೧೧೫ ರಿಂದ ೧೩೬ – ಶ್ಲೋಕ ಛಂದಸ್ಸಿನಲ್ಲಿರುವುದು ಗಮನಾರ್ಹ. ಇವುಗಳಲ್ಲಿ ಗೋಮೂತ್ರಿಕೆ, ಮುರಜ, ಮುಂತಾದ ಕೆಲವು ಪದ್ಯಜಾತಿಗಳಲ್ಲಿನ ಅಕ್ಷರಗಳು ಆಯಾ ಚಿತ್ರಾಕೃತಿಗಳಲ್ಲಿ ಅಳವಡುವಂತೆ ಚಿತ್ರಬರೆದು ನಿದರ್ಶಿಸಬಹುದು; ಹಾಗೆ ಮಾಡಿದಾಗಲೇ ಅವುಗಳ ಸ್ವರೂಪದ ಅರಿವಾಗುವುದು. ಹೀಗಿದ್ದರೂ ಕೂಡ, ಈ ದುಷ್ಕರಬಂಧಗಳು ಕೇವಲ ಅಮುಖ್ಯವಾದ ಕಾರಣ, ಅವನ್ನು ಚಿತ್ರಗಳ ಮೂಲಕ ತೋರಿಸುವ ಪ್ರಯತ್ನಕ್ಕೆ ನಾವು ತೊಡಗಿಲ್ಲ. (ಕುತೂಹಲವುಳ್ಳವರು ಮದ್ರಾಸು ಮುದ್ರಣದ ೭ನೆಯ ಪರಿಶಿಷ್ಟದಲ್ಲಿ ಕೊಟ್ಟಿರುವ ಕೆಲವು ಚಿತ್ರಬಂಧಗಳನ್ನು

ಪರಿಶೀಲಿಸಬಹುದು).

ಪದ್ಯ ೧೧೨–೧೧೪ : ಮಾರ್ಗಕಾರನು ಮೇಲೆ ಹೆಸರಿಸಿರುವ ಬಂಧಪ್ರಕಾರಗಳನ್ನೇ ಈ ಮೂರು ಶ್ಲೋಕ ಪದ್ಯಗಳಲ್ಲಿ ಹೆಸರಿಸಿ, "ಇವು ವಿಶಿಷ್ಟ ರೀತಿಯಲ್ಲಿ ಪ್ರಯೋಗವಾಗುವ ದುಷ್ಕರ ಕಾವ್ಯಗಳು, ಇವುಗಳ ಲಕ್ಷ್ಯಭೇದಗಳನ್ನು ಇಲ್ಲಿ ಪ್ರಯೋಗಿಸಿ ತೋರಿಸುತ್ತೇನೆ" ಎಂದು ಸ್ಪ ಷ್ಟವಾಗಿ ನುಡಿದಿದ್ದಾನೆ.

ಪದ್ಯ ೧೧೫–೧೧೮ : ಇವು ನಾಲ್ಕು 'ಗತಪ್ರತ್ಯಾಗತ' ಎಂಬ ಅಲಂಕಾರದ ನಾಲ್ಕು ಪ್ರಭೇದಗಳು. ಗತಪ್ರತ್ಯಾಗತ ಎಂದರೆ ಮೊದಲೊಮ್ಮೆ ಪ್ರಯೋಗವಾದದ್ದು ಮತ್ತೆ ಪ್ರಯೋಗವಾಗುವುದು, ಪುನರುಕ್ತವಾಗುವುದು. ೧೧೫ನೆಯ ಪದ್ಯವು 'ಪದಗತಪ್ರತ್ಯಾಗತ'ಕ್ಕೆ ದೃಷ್ಟಾಂತ ; ೧೧೬ನೆಯ ಪದ್ಯವು 'ಪಾದಗತ ಪ್ರತ್ಯಾಗತ'ಕ್ಕೆ ದೃಷ್ಟಾಂತ. ಇವೆರಡರ ಪಾಠವೂ ದೋಷಪೂರ್ಣಗಿರುವಂತಿದೆ ; ಅಲ್ಲದೆ ಎರಡನೆಯದರ ದ್ವಿತೀಯ ಪಾದಮಧ್ಯದಲ್ಲಿ ಗ್ರಂಥಪಾತವಾಗಿದೆ. ಆದ್ದರಿಂದ, ಇವುಗಳ ಸ್ವರೂಪವನ್ನಾಗಲಿ ಅರ್ಥವನ್ನಾಗಲಿ ಗ್ರಹಿಸುವಂತಿಲ್ಲ.

ಪದ್ಯ ೧೧೭ : ಇದು 'ಸಮಸ್ತಗತ ಪ್ರತ್ಯಾಗತ'. ಮೊದಲ ಪಾದವನ್ನು ವಿಲೋಮವಾಗಿ (ಹಿಂದುಮುಂದಾಗಿ) ಓದಿದರೆ ಎರಡನೆಯ ಪಾದವೂ, ಎರಡನೆಯ ಪಾದವನ್ನು ವಿಲೋಮವಾಗಿ ಓದಿದರೆ ಮೊದಲ ಪಾದವೂ ಆಗುವಂತೆ ಅಕ್ಷರಸಂಯೋಜನೆಯಾಗಿದೆ. ಇಂತು ಗತಪಾದ ಸಮಸ್ತವೂ ಪ್ರತ್ಯಾಗತವಾಗಿದೆ : "ಇದು ನೃಪತುಂಗನ ಇಲ್ಲವೆ ಒಬ್ಬ ಧನುರ್ವಿದ್ಯಾನಿಪುಣ ವೀರನ ವರ್ಣನೆಯಾಗಿರುವಂತೆ ತೋರುತ್ತದೆ" ಎಂದು ಮುಳಿಯ ತಿಮ್ಮಪ್ಪಯ್ಯನವರು ಅರ್ಥೈಸಲು ಪ್ರಯತ್ನಪಟ್ಟಿದ್ದಾರೆ.

ಪದ್ಯ ೧೧೮ : ಅರ್ಧಗತ ಪ್ರತ್ಯಾಗತ. ಇದರ ಸ್ವರೂಪವೂ (ಬಹುಮಟ್ಟಿಗೆ) ಮೇಲಿನದರಂತೆಯೆ. ಅಲ್ಲಿ ಸಮಸ್ತಪಾದಕ್ಕೆ ಅನ್ವಯವಾಗುವ ಲಕ್ಷಣ ಇಲ್ಲಿ ಪ್ರತಿಪಾದದ ಅರ್ಧಭಾಗಕ್ಕೆ ಅನ್ವಯವಾಗುತ್ತದೆ ;' ಪೂರ್ವಾರ್ಧದ ವಿಲೋಮವಾಚನದಿಂದ ಉತ್ತರಾರ್ಧವೂ ಉತ್ತರಾರ್ಧದ ವಿಲೋಮವಾಚನದಿಂದ ಪೂರ್ವಾರ್ಧವೂ ಸಿದ್ಧಿಸುತ್ತವೆ.

ಪದ್ಯ ೧೨೦ : ಈ ಪದ್ಯದಲ್ಲಿ ಒಂದು ಮಳೆಗಾಲದ ದಿನದಂದು ಒಬ್ಬ ವಿಟಪುರುಷನು ತನ್ನ ಸಮ್ಮುಖದಲ್ಲಿದ್ದ ಪ್ರಿಯೆಯನ್ನು ಕುರಿತು ಹೇಳಿದ ಸಂಗತಿಯನ್ನು 'ನಾಲ್ಕು ಗೂಢಾರ್ಥಗಳನ್ನು ಒಳಕೊಂಡಿರುವಂತೆ' ವರ್ಣಿಸಿದೆ. ಇದೇ 'ಗೂಢ ಚತುರ್ಥ'.

'ಘನಸ್ತನಿತವೂ (ಎಂದರೆ, ಗುಡುಗು) ಕೇಕಿಸ್ವನವೂ (ಎಂದರೆ, ನವಿಲ ಕೂಗುವ ಧ್ವನಿ) ನೀರಧಾರೆಯೂ (ಧಾರಾಕಾರವಾಗಿ ಸುರಿಯುವ ಮಳೆಯ ನೀರು) – ಇವು ಮನಸ್ಸನ್ನು ಬೆಚ್ಚುವಂತೆ ಮಾಡುತ್ತಿವೆ ; ಎಲೌ ಘನಸ್ತನಿಯೇ (ಎಂದರೆ, ದೊಡ್ಡವಾದ ಸ್ತನವುಳ್ಳವಳೇ, ಪೆರ್ಮೊಲೆಯವಳೇ), ಹೀಗೆ ಎಲ್ಲೆಲ್ಲಿಯೂ 'ಘನ'(ತ್ವ)ವಿದೆ.'

೧. 'ಘನಸ್ತನಿತ' (=ಮೇಘದ ಧ್ವನಿ ; ಘನ = ಮೋಡ, ಮೇಘ)ದಲ್ಲಿ 'ಘನ'ವಿದೆ. ೨. ಕೇಕಿಸ್ವನವು ಬಹಳ ಗಟ್ಟಿಯಾಗಿ ಕೇಳತಕ್ಕದ್ದಾದ್ದರಿಂದ ಅದೂ 'ಘನ'ವಾಗಿದೆ. ೩. ನೀರಧಾರೆ (ಘನ = ನೀರು ; ಘನಸಾರ = ನೀರು) ಯಂತೂ 'ಘನ'ವೇ ಆಗಿದೆ. ಈ ಮೂರು ವಸ್ತುಗಳಲ್ಲಿನ 'ಘನ'(ತ್ವ)ವೂ ಸೇರಿ, ಈ ನಿಗೂಢ ಘನತ್ವವು ನಾಲ್ಕಾಗಿದೆ. ಈ ಘನಾರ್ಥವು ಸಂಬಂಧಪಟ್ಟ ನಾಲ್ಕು ಪದಗಳಲ್ಲಿ ವ್ಯಕ್ತಾವ್ಯಕ್ತವಾಗಿ ಅಡಗಿರುವುದರಿಂದ ಇದು 'ಗೂಢಚತುರ್ಥ'.

ಪದ್ಯ ೧೨೧–೧೨೨ : ಇವೆರಡು ಪದ್ಯಗಳಲ್ಲಿ ಕ್ರಮವಾಗಿ ಒಂದಕ್ಷರ ('ನ'ಕಾರ) ಮತ್ತು ಎರಡಕ್ಷರಗಳನ್ನು ('ನ'ಕಾರ, 'ಮ'ಕಾರ) ಮಾತ್ರ ಉಪಯೋಗಿಸಲಾಗಿದೆ. ಮೊದಲ ಪದ್ಯವು ಅರ್ಥವಾಗುವಂತಿಲ್ಲ. ಎರಡನೆಯ ಪದ್ಯದ ಅನ್ವಯ : 'ಮಾನಿನಿ, ಮುನ್ನಂ ಆಂ ನೀನೆ, ನೀನ್ ಆಂ ; ಇನ್ ಅನುಮಾನಂ ಏಂ ? ಮಾನಂ ಆಂ ; ಮುಂ ನಂನ್ನೈಮಾನಂ ನಾನೆ, ನಿನ್ನ ಆನನಮುಂ (ನಾನೆ)'.

ಪದ್ಯ ೧೨೩–೧೨೪ : ಇವೆರಡು ಪದ್ಯಗಳೂ ಅತಾಲವ್ಯಗಳು : ಎಂದರೆ, ತಾಲವ್ಯಾಕ್ಷರಗಳನ್ನು (Palatals) (ಇ, ಈ, ಎ, ಏ, ಚವರ್ಗ ಮತ್ತು ಯ, ಶ) ಉಪಯೋಗಿಸದೆ ರಚಿಸಿದವು. (ಅಕ್ಷರಗಳ ಉತ್ಪತ್ತಿಸ್ಥಾನ ವಿಚಾರಕ್ಕೆ 'ಕನ್ನಡ ಕೈಪಿಡಿ'ಯನ್ನು ನೋಡಿ : ಪು.೫). (ಆದರೆ, ೧೨೩ನೆಯ ಪದ್ಯದಲ್ಲಿ 'ಯ' ಕಾರವೊಂದು ಪ್ರಯೋಗವಾಗಿದೆ.) ೧೨೪ನೆಯ ಪದ್ಯದ ಅರ್ಥ ಸ್ಪಷ್ಟವಾಗಿಲ್ಲ. ೧೨೫ನೆಯ ಪದ್ಯದಲ್ಲಿ, "ಪರಮೋದಾರನೂ ಕಾದಂಬಿನೀನಾಥನೂ (ಕಾದಂಬಿನಿ = ಮೇಘ, ಕಾದಂಬಿನೀನಾಥ = ಚಂದ್ರ?) ಗುಣನಿಲಯನೂ ಆದ ನನ್ನ ಪ್ರಿಯನಾದ ರಾಮನ ಬಳಿ ಸಾರಿ, ಅವನನ್ನು ಕೂಡು" ಎಂದು ಸೀತೆ ಮಾರುತಿಗೆ ತಿಳಿಸಿದ ಸಂದೇಶವನ್ನು ನಿರೂಪಿಸಿದೆ.

ಪದ್ಯ ೧೨೫ : ಇದು ನಿರೋಷ್ಠ್ಯಕ್ಕೆ ಉದಾಹರಣೆ. ಇದರಲ್ಲಿ ಓಷ್ಠ್ಯಗಳನ್ನು

(Labials) ಎಂದರೆ ಉ,ಊ, (ಒ, ಓ), ಮತ್ತು 'ಪ' ವರ್ಗದ ಅಕ್ಷರಗಳನ್ನು ಉಪಯೋಗಿಸಿಲ್ಲ. ಇದು ಕೂಡ ಮಾರುತಿಗೆ ತಿಳಿಸಿದ ಸಂದೇಶವಾಕ್ಯದಂತಿದೆ : "ನರನಾಯಕನಾದ ಕಾಂತನನ್ನು ನಾನು (ನಿನ್ನೊಡನೆ ಬಂದು) ಸೇರಿದರೆ ಪ್ರಯೋಜನವೇನು ? ಅದರಿಂದ (ಅವನೇ ಇಲ್ಲಿಗೆ ಬಂದು ದಶವದನನನ್ನು ಜಯಿಸುವುದರ ಮೂಲಕ) ಇಲ್ಲಿ ಅವನನ್ನು ನಾನು ಕೂಡಿದಂತೆ ಎಂದಿಗೂ ಆಗುವುದಿಲ್ಲ" – ಎಂದು ಪದ್ಯದ ಅಭಿಪ್ರಾಯವಾಗಬಹುದು.

ಪದ್ಯ ೧೨೬ : ಇದರ ಬಂಧಸ್ವರೂಪವನ್ನು ಮದ್ರಾಸು ಮುದ್ರಣ (ಪು. ೧೭೭)ದಲ್ಲಿ ಬಿಡಿಸಿ ತೋರಿಸಿದೆ. ಪದ್ಯದ ಅಭಿಪ್ರಾಯ ಗೃಹೀತವಾಗುವುದಿಲ್ಲ.

ಪದ್ಯ ೧೨೭ : ಪದ್ಯದಲ್ಲಿ ಪ್ರಶ್ನೆಗಳನ್ನು ಅಳವಡಿಸಿ, ಅದಕ್ಕೆ ಉತ್ತರವು ಹೊರಪಡದಿದ್ದರೆ ಅದು 'ನಿರುತ್ತರ'ವೆನಿಸುವುದು. "ಅಬ್ಧಿಗೆ (ಸಮುದ್ರಕ್ಕೆ) ಬನ್ನಮಂ (ಭಂಗವನ್ನು) ಕುಱಿತು (ಉದ್ದೇಶಿಸಿ), ಧರಾಚಕ್ರಕ್ಕೆ ಎಱೆಯಂ (ಒಡೆಯ) ಪೆಱನಾವಂ (ಬೇರೆ) ಯಾವಾತನಿದ್ದಾನೆ)? ಕೆಳೆಯಪ್ಪವಂ (ಪೆಱನಾವಂ)? ಎಣೆಯೆಂಬನ್ನಂ (ಸರಿಸಮಾನ ಎಂಬಂಥವನು) ನೆಱೆಯಾರ್ (ಪರಿಪೂರ್ಣನಾರು) ?" (ಬಹುಶಃ ಇದೂ ರಾಮಾಯಣದ ಕಥೆಗೇ ಸಂಬಂಧಪಟ್ಟ ಪದ್ಯವಿರಬಹುದು. ಸಮುದ್ರಕ್ಕೆ ಸೇತುವೆ ಕಟ್ಟಿ ಸಮುದ್ರರಾಜನ ಮಹಿಮೆಯನ್ನು ಭಂಗಗೊಳಿಸಿದ ಶ್ರೀರಾಮನಿಗೆ ಸಮಾನರಾರು ಎಂಬ ಪ್ರಶ್ನೆಗೆ 'ಯಾರೂ ಇಲ್ಲ' ಎಂಬ ನಿಷೇಧಾತ್ಮಕ ಉತ್ತರವೇ ಬರುವುದರಿಂದ ಅದು 'ನಿರುತ್ತರ'ಕ್ಕೆ ಸಮ ಎಂದು ಭಾವಿಸಬೇಕು. ಶ್ರೀರಾಮನಿಗೆ ಮಾತ್ರವಲ್ಲದೆ ನೃಪತುಂಗ ಇಲ್ಲವೆ ಅವನ ತಂದೆ ಗೋವಿಂದನ ಪ್ರಸಕ್ತಿ ಇಲ್ಲಿರಬಹುದೆಂದು ಮುಳಿಯ ತಿಮ್ಮಪ್ಪಯ್ಯನವರ ಊಹೆ).

ಪದ್ಯ ೧೨೮ : 'ಗೋಮೂತ್ರಿಕೆ' ಸುಲಭಸಾಧ್ಯವಾದ ಬಂಧ (ಕ.ರಾ.ಮಾರ್ಗ : ಮದ್ರಾಸು ಮುದ್ರಣ, ಪು. ೧೭೯ ನೋಡಿ). ಮದ್ರಾಸು ಮುದ್ರಣದಲ್ಲಿ, ಎರಡನೆಯ ಪಾದದ 'ಕೇಳನಲ್ಲನಂ' ಎಂಬ ಪಾಠಕ್ಕೆ (ಇದು ಪಾಠಕರ

---

೩೮. ಭಾಮಹನು 'ಯಮಕ'ದ ಅನೇಕ ಪ್ರಭೇದಗಳನ್ನು ಹೇಳಿ, ಅದನ್ನು ಕುರಿತು ವಿಸ್ತಾರವಾಗಿ ವಿವೇಚಿಸಿದ್ದಾನೆ. (ಕಾವ್ಯಾಲಂಕಾರ : II–೯ರಿಂದ ೧೮). 'ಕಾವ್ಯಾವಲೋಕನ'ದ ಕರ್ತೃ ನಾಗವರ್ಮನೂ ದಂಡಿ ಭಾಮಹರನ್ನು ಅನುಸರಿಸಿ ಅನೇಕ ಲಕ್ಷ್ಯಗಳೊಡನೆ 'ಯಮಕ'ವನ್ನು ವ್ಯಾವರ್ಣಿಸಿದ್ದಾನೆ.

ಪ್ರತಿಯ ಪಾಠ) 'ಕೇಕಿನರ್ತನಂ' ಎಂಬ ಪಾಠಾಂತರವಿದೆ. ಎರಡು ಪಾಠಗಳೂ ಬಂಧಕ್ಕೆ ಹೊಂದಿಕೊಳ್ಳುತ್ತವೆ.

ಪದ್ಯ ೧೨೯ : ಇಲ್ಲಿ, 'ಯಮಕ'ವೆಂಬ ಶಬ್ದಾಲಂಕಾರದ ಪ್ರಕಾರಗಳನ್ನು ಹೆಸರಿಸಲಾಗಿದೆಯೇ ಹೊರತು ಅದರ ಲಕ್ಷಣವನ್ನು ವಿವರಿಸಿಲ್ಲ.[೩೮] "ಮೂರು ಅಥವಾ ಅದಕ್ಕಿಂತ ಹೆಚ್ಚಿನ ಅಕ್ಷರಗಳುಳ್ಳ ಪದವೋ ಪದಭಾಗವೋ ಒಂದು ಪದ್ಯದ ಆದಿ ಮಧ್ಯ ಅಂತ ಈ ಸ್ಥಾನಗಳಲ್ಲಿ ನಿಯತವಾಗಿ ಪುನಃ ಪುನಃ ಬಂದರೆ ಅದಕ್ಕೆ ಯಮಕವೆಂದು ಹೆಸರು." (ಕ.ಕೈಪಿಡಿ, ಪು.೩೦೭) ಸಂಸ್ಕೃತದಲ್ಲಿಯೂ ಕನ್ನಡದಲ್ಲಿಯೂ ಈ ಅಲಂಕಾರ ತಕ್ಕಮಟ್ಟಿಗೆ ಕವಿಜನಪ್ರಿಯವಾಗಿದೆ.

ದಂಡಿಯ ಶ್ಲೋಕ ಹೀಗಿದೆ :

ಅವ್ಯಪೇತವ್ಯಪೇತಾತ್ಮವ್ಯಾವೃತ್ತಿರ್ವರ್ಣ ಸಂಹತೇಃ ।
ಯಮಕಂ ತಚ್ಚಪಾದಾನಾಮಾದಿ ಮಧ್ಯಾಂತಗೋಚರಂ ॥ –III, ೧

ಪದ್ಯ ೧೩೦–೧೩೭ : 'ಯಮಕಾಲಂಕಾರ'ದ ಈ ಲಕ್ಷ್ಯಪದ್ಯಗಳಲ್ಲಿ ಅಲಂಕಾರವು ಸುಗೋಚರವಾಗಿರುವುದಾದರೂ, ಕೆಲವು ಪದ್ಯಗಳ ಅಭಿಪ್ರಾಯವೇನೆಂಬುದು ಸ್ಪಷ್ಟವಾಗುವುದಿಲ್ಲ.

೧೩೦ನೆಯ ಪದ್ಯ 'ರಾಮಾಯಣ'ಕ್ಕೆ ಸಂಬಂಧಪಟ್ಟದ್ದು. ಹನುಮಂತನು ಲಂಕೆಯಲ್ಲಿ ಜಾನಕಿಯನ್ನು ನೋಡಿ ಹಿಂದಿರುಗಿದ ಮೇಲೆ, 'ಲಂಕೆಗೆ ಹೋಗಿ ಜಾನಕಿಯನ್ನು ಕರೆದು ತಾ' ಎಂದು ರಾಮನಲ್ಲಿ ಬಿನ್ನವಿಸಿಕೊಂಡ ಸಂಗತಿ ಈ ಪದ್ಯದಲ್ಲಿ ವರ್ಣಿತವಾಗಿರುವಂತಿದೆ. ೧೩೩ನೆಯ ಪದ್ಯದಲ್ಲಿಯೂ ಇದೇ ಸಂಗತಿಯನ್ನು ಬೇರೆಯ ಮಾತುಗಳಲ್ಲಿ ನಿರೂಪಿಸಿರುವಂತಿದೆ. ೧೩೪ನೆಯ ಪದ್ಯದಲ್ಲಿ ಮತ್ತಗಜವೊಂದರ ವರ್ಣನೆ ಸ್ಪಷ್ಟವಾಗಿದೆ : 'ಅಜೇಯವಾದ ಮತ್ತಗಜವು, ತ್ರಿಜಗನ್ಮುದನೂ ನೀಲಮೇಘದಂತಿರುವವನೂ ಆದ ವಾರಿಜನಾಭನನ್ನು (ವಿಷ್ಣುವನ್ನು) ಹೋಲುತ್ತದೆ'.

---

ಕವಿರಾಜಮಾರ್ಗದ ಈ ಪದ್ಯದಲ್ಲಿ ಪಾಠದೋಷವಿರುವಂತಿದೆ. '(ಪ)ದಾ ಪಾದಾರ್ಧ' ಎಂಬ ಸ್ವೀಕೃತ ಪಾಠವನ್ನು '(ಪಾದ) ಪಾದಾರ್ಧ' ಎಂದು ತಿದ್ದಿಕೊಳ್ಳುವುದು ಮೇಲೆಂದು ಕಾಣುತ್ತದೆ. ಅಲ್ಲದೆ, 'ಪ್ರಮಿತಾದ್ಯಂತ ದೂಷ್ಯೋಪಕ್ರಮಾನೇಕ ಪ್ರಕಲ್ಪಿತಂ' ಎಂಬಲ್ಲಿ '...ಮಧ್ಯೋಪಕ್ರಮಾನೇಕ' ಎಂದಿರಬಹುದೆಂದು ಕಾಣುತ್ತದೆ. ಹೀಗೆ ತಿದ್ದಿಕೊಂಡರೆ, ಪಾದಸಮ, ಪಾದಾರ್ಧಸಮ, ಆದಿ, ಮಧ್ಯ, ಅಂತ – ಎಂಬ ಐದು ಪ್ರಕಾರಗಳನ್ನು ಮಾರ್ಗಕಾರನು ಉಲ್ಲೇಖಿಸಿದ್ದಾನೆಂದು ತಿಳಿಯಬಹುದು.

ಪದ್ಯ ೧೩೯–೧೪೦ : ಇವು ಕ್ರಮವಾಗಿ 'ಅರ್ಧಭ್ರಮಣ' ಮತ್ತು 'ಮುರಜಬಂಧ'ಗಳಿಗೆ ದೃಷ್ಟಾಂತಗಳು. ಇವುಗಳ ರಚನಾ ಸ್ವರೂಪವನ್ನು ಮದ್ರಾಸು ಮುದ್ರಣದಲ್ಲಿ (ಪು. ೧೭೮–೧೭೯) ತೋರಿಸಿದ್ದಾರೆ.

ಪದ್ಯ ೧೪೧ : ಇದು 'ಕ್ರಿಯಾಗೋಪಕ' ಎಂಬ ಬಂಧಕ್ಕೆ ದೃಷ್ಟಾಂತ. ಕ್ರಿಯೆಯನ್ನು (ಅಥವಾ ಕ್ರಿಯಾಪದವನ್ನು) ಅಧ್ಯಾಹಾರ ಮಾಡಿಕೊಳ್ಳುವಂತೆಯೋ ಇಲ್ಲವೆ ಬೇರೆಯ ರೀತಿಯಲ್ಲಿಯೋ ಗೋಪನ ಮಾಡುವುದೆ (ಮರೆಯಾಗಿರಿಸುವುದೆ) 'ಕ್ರಿಯಾಗೋಪಕ.' 'ಕಳಿಪಿಂ' ಎಂಬ ಪದದಲ್ಲಿ "ಕಳಿಪು ಎಂಬ ಕ್ರಿಯಾಪದವು ಗುಪ್ತವಾಗಿ ಭಾಸವಾಗುತ್ತಿದೆ" ಎಂದು ತಿಮ್ಮಪ್ಪಯ್ಯನವರ ಊಹೆ.

(ಕಳಿಪು + ಇಂ). ಇಲ್ಲಿ ಕ್ರಿಯಾವಾಚಕವು 'ಗುಪ್ತವಾಗಿರದೆ' ಸ್ಪಷ್ಟವಾಗಿಯೇ ಇದೆಯೆಂದು ನಮ್ಮೆಣಿಕೆ. ಆದ್ದರಿಂದ, 'ಅರಸಿ' ಎಂಬ ಪದದಲ್ಲಿಯೇ ಗುಪ್ತಕ್ರಿಯೆಯನ್ನು ನಾವು ಅರಸಬೇಕಾಗಿದೆ. "ದುಷ್ಕರ ಕಾವ್ಯಬಂಧಗಳಲ್ಲಿ ರ–ಱ ಕಾರಭೇದಗಳನ್ನಷ್ಟೇ ಅಲ್ಲ ; ಕ–ಖ, ದ–ಧ ಮೊದಲಾದ ಏಕಜಾತೀಯಗಳಾದ ಅಲ್ಪ ಮಹಾಪ್ರಾಣಾಕ್ಷರಗಳೊಳಗಿನ ಭೇದವೂ ಪರಿಗಣಿಸಲ್ಪಡುವುದಿಲ್ಲ." (ಕ.ರಾ.ವಿವೇಕ – ಭಾಗ ೧; ಪು.೮೯). ಆದ್ದರಿಂದ, ದ್ವಿತೀಯಪಾದದ ನಾಮವಾಚರಕವಾದ 'ಅರಸಿ'ಯೊಂದಿಗೆ ಪ್ರಥಮ ಪಾದದಲ್ಲಿ 'ಅರಸಿ' (ಅಱಸಿ = ಹುಡುಕಿ) ಎಂಬ ಕ್ರಿಯಾಪದವನ್ನು ನಾಮವಾಚಕಭ್ರಾಂತಿ ಬರುವಂತೆ ಕವಿ ಚಮತ್ಕೃತಿಯಿಂದ ಯೋಜಿಸಿರುವನೆಂದು ತೋರುತ್ತದೆ. (ಇಲ್ಲಿ ಯಮಕಾಲಂಕಾರವೂ ಸಿದ್ಧವಾಗುತ್ತದೆ ; ಇದು ಹೆಚ್ಚಿನ ಚಮತ್ಕೃತಿ). ಆಗ ಪದ್ಯದ ಅನ್ವಯವು ಹೀಗಾಗುವುದು : 'ಪರಿಜನಮಂ ಅರಸಿ (ಹುಡುಕಿ), ಆದಿವ್ಯಸೇವಾದರದೆ[೩೯] (ಲೋಕಸಾಮಾನ್ಯವಾದ ಸೇವೆಗೆ ಅನುಗುಣವಾದ (ಆದರದಿಂದ), ಇರದೆ, ಈಗಡೆ (ಈಗಲೆ), ನಿನ್ನ ಅರಸಿಯಂ (ರಾಣಿಯನ್ನು) ಎಯ್ದುವಿನಂ (ಸೇರುವಂತೆ), ಕಳಿಪಿಂ (ಕಳಿಸಿಕೊಡಿ).'

---

೩೯. 'ಅರಸಿಯ ದಿವ್ಯಸೇನಾದರದೆ' ಎದು ಸ್ವೀಕೃತ ಪಾಠ. ಕೆ.ಬಿ. ಪಾಠಕರ ಹಾಗೂ ಮದ್ರಾಸಿನ ಮುದ್ರಣಗಳಲ್ಲಿಯೂ ಇದೇ ಪಾಠವಿದೆ. ಮದ್ರಾಸು ಮುದ್ರಣದಲ್ಲಿ 'ದಿವ್ಯಸೇವಾದರ...' ಎಂಬ ಪಾಠಾಂತರವನ್ನು ಕೊಟ್ಟಿದೆ. (ಪರಿಶಿಷ್ಟ ೨, ಪ. ೧೨೪ ನೋಡಿ)

ಪದ್ಯ ೧೪೨ : ಇದು 'ಚಕ್ರಬಂಧ'ಕ್ಕೆ ದೃಷ್ಟಾಂತ. ಒಂದು ದೃಷ್ಟಿಯಿಂದ ಇದು ಮುಖ್ಯವಾದ ಪದ್ಯ. ಚಕ್ರಬಂಧವಾಗಿರುವುದೇ ಅದರ ಮುಖ್ಯತೆಗೆ ಕಾರಣ. ಆ ಮುಖ್ಯತೆಯನ್ನು ಕುರಿತು ಮದ್ರಾಸು ಮುದ್ರಣದ ಸಂಪಾದಕರು ತಾವು 'ಉದ್ಧರಣ' ಮಾಡಿ (ಎಂದರೆ ಪದ್ಯವನ್ನು ಚಕ್ರಚಿತ್ರದಲ್ಲಿ ಅಳವಡಿಸಿ ತೋರಿಸಿ) ದೃಷ್ಟಾಂತಿಸಿರುವ 'ಚಕ್ರಬಂಧ'ದ ಕೆಳಗೆ ಈ ರೀತಿ ಟಿಪ್ಪಣಿ ಬರೆದಿರುತ್ತಾರೆ :

"ಈ ಚಕ್ರಬಂಧದಲ್ಲಿ ಅರಗಳ ಒಂದು ಗೊತ್ತಾದ ಸ್ಥಾನದ ಅಕ್ಷರಗಳ ಸಂಯೋಜನದಿಂದ ಕವಿಕಾವ್ಯ ವಿಚಾರವು ತಿಳಿಯಬೇಕು. ಸಂಸ್ಕೃತ 'ಪ್ರತಾಪರುದ್ರೀಯ'ದ ಚಕ್ರಬಂಧ ಶ್ಲೋಕದಲ್ಲಿ ೪–೬ನೆಯ ಅಕ್ಷರಗಳ ಯೋಜನೆಯಿಂದ 'ವೈದ್ಯನಾಥಕೃತ ಪ್ರತಾಪರುದ್ರ ಯಶೋಭೂಷಣ' ಎಂಬ ವಿಷಯವು ತಿಳಿದುಬರುವುದು. ಆದರೆ ಈ ಬಂಧದಲ್ಲಿ ಅಂತಹ ವಿಷಯವು ತಿಳಿಯುವಂತಿಲ್ಲ."

ಈ ಚಕ್ರಬಂಧ ಪದ್ಯದ ವಿಚಾರವಾಗಿ ತಮ್ಮ 'ಕವಿರಾಜಮಾರ್ಗವಿವೇಕ' (ಭಾಗ ೧ ; ಪು. ೮೭–೯೫)ದಲ್ಲಿ ದಿ॥ ವಿದ್ವಾನ್ ಮುಳಿಯ ತಿಮ್ಮಪ್ಪಯ್ಯನವರು ಬಹು ಪ್ರಗಲ್ಭತೆಯಿಂದ ವಿವೇಚನೆ ಮಾಡಿರುತ್ತಾರೆ. ಕವಿರಾಜಮಾರ್ಗದ ಕರ್ತೃತ್ವದ ವಿಷಯವಾಗಿ ಈ ಪದ್ಯದ ಬೆಳಕುಬೀರುತ್ತದೆ ಎಂದು ಅವರ ಅಭಿಪ್ರಾಯ. ಜಿಜ್ಞಾಸುಗಳು ಅವಶ್ಯವಾಗಿ ಅವರ ವಿಚಾರಗಳನ್ನು ಗಮನಿಸಬೇಕು. ಪೀಠಿಕೆಯಲ್ಲಿ ಕರ್ತೃತ್ವ ವಿಷಯಕವಾದ ಚರ್ಚೆಯ ಸಂಬಂಧದಲ್ಲಿ ಈ ಅಂಶವನ್ನು ನಾವು ಕೇವಲ ಪ್ರಾಸಂಗಿಕವಾಗಿ ಸೂಚಿಸಿರುವುದರಿಂದ, ಆ ಪದ್ಯದ ವಿಚಾರವನ್ನು ಇಲ್ಲಿ ಪ್ರಕೃತೋಚಿತವಾಗಿ ಪರಿಶೀಲಿಸಲಾಗಿದೆ.

ತಮ್ಮ ಸಿದ್ಧಾಂತ ಪೋಷಣೆಗಾಗಿ ಮುಳಿಯ ತಿಮ್ಮಪ್ಪಯ್ಯನವರು ಪದ್ಯದಲ್ಲಿ ಕೆಲವು ತಿದ್ದುಪಾಟುಗಳನ್ನು ಅತ್ಯಗತ್ಯವೆಂದು ಸೂಚಿಸಿರುತ್ತಾರೆ. ಆದ್ದರಿಂದ, (ಅತ್ಯಲ್ಪ ವ್ಯತ್ಯಾಸಗಳು ಹೊರತಾಗಿ) ಉಪಲಬ್ಧವಿರುವ ಎರಡು ಗ್ರಂಥ ಪ್ರತಿಗಳಿಗೂ ಸಮಾನವಾಗಿರುವ ಪಾಠವನ್ನು (ಹೋಲಿಕೆಯ ಸೌಲಭ್ಯಕ್ಕಾಗಿ) ಇಲ್ಲಿ ಉದ್ಧರಿಸಿದೆ :–

ಸಂತಂ ಬಾಟ್ಟುದು (ಮೀ)ಱಿದಾ ನ(ರ)ಪನೊಳ್ ಸೌ(ಜ)ನ್ಯಲಕ್ಷ್ಮೀಮದಾಂ ಧಂ
ತನ್ನಿಶ್ಚಯ(ಮೆ)ಚ್ಚಿನಿಂ ಪ(ರ)ಗುಣೌದಾ(ರ್ಯಾ)ಭಿಮಾನಂಗಳಿಂ ಪಿಂತಂ ನೋಡದೆ
(ಪಾ)ಟಿಗೆಟ್ಟ (ಟಿ)ಪಿನಂ ಬಾ(ಟ್ವಂ)ತೆ ಬಾಟ್ದಿಯ್ಯ(ನಾ) (ಸ)ಂತಂ ತಾಂ ಪಸತಂದನಟ್ಟಿ

ಪೆಱುಗುಂ ದಾನಂಗಳಂ ಭೂಪನಾ

(ಪ್ರಕೃತ, ನಮ್ಮ ಪ್ರತಿಯಲ್ಲಿ, ೨ನೆಯ ಪಾದದಲ್ಲಿ 'ಮಚ್ಚಿನಿಂ' ಎಂಬುದಕ್ಕೆ 'ಮೆಚ್ಚಿನೀಂ' ಎಂದಿದೆ).

ಈ ಪದ್ಯಪಾಠದ ವಿಚಾರವಾಗಿ, ಮುಳಿಯ ತಿಮ್ಮಪ್ಪಯ್ಯನವರ ಪರಾಮರ್ಶೆಯ ಆಶಯವನ್ನು ಹೀಗೆ ಸಂಗ್ರಹಿಸಬಹುದು :–

ಚಕ್ರಬಂಧದೊಳಗೆ ಹಲವು ಭೇದಗಳಿವೆ. ಅವುಗಳಲ್ಲಿ ಇದು 'ಷಡರ' ಚಕ್ರಬಂಧ. ಇದರಲ್ಲಿ ಚಕ್ರದ ಆರು 'ಅರ'ಗಳು (ಅಡ್ಡಕೋಲು, ಅರೆಕಾಲು) ಇರುವುದರಿಂದ ಆ ಹೆಸರು. ಆದರೆ, ಮೂರು ಅರಗಳೇ ಒಂದರ ಮೇಲೊಂದು ಅಡ್ಡನಾಗಿ ಹಾದು, ಆರು ಅರಗಳಾಗುತ್ತವೆ. ಈ (ಮೂರು) ಅರಗಳೊಳಗೆ ಪ್ರತಿಯೊಂದರಲ್ಲಿಯೂ ಹತ್ತೊಂಬತ್ತು ಅಕ್ಷರಗಳು ನೆಲಸುವಂತೆ ಹತ್ತೊಂಬತ್ತು ಸಂಪುಟಗಳಿವೆ. ಬಂಧನಿಯಮಕ್ಕನುಸಾರವಾಗಿ, ಮೊದಲ ಮೂರು ಪಾದಗಳ ಅಕ್ಷರಗಳು ಅನುಕ್ರಮವಾಗಿ ಮೂರು ಅರಗಳಲ್ಲಿಯೂ ನಾಲ್ಕನೆಯ ಪಾದದ ಅಕ್ಷರಗಳು ಚಕ್ರದ ಹೊರವಲಯದಲ್ಲಿಯೂ ಅಳವಡುತ್ತವೆ. ಅಲ್ಲದೆ, ಮೂರೂ ಅರಗಳು ಒಂದನ್ನೊಂದು ಹಾದುಹೋಗುವ ಕೇಂದ್ರ ಅಕ್ಷಸ್ಥಾನ (ಅಕ್ಷಸಂಪುಟ)ದಲ್ಲಿ ಪ್ರತಿ ಪಾದದ ಹತ್ತನೆಯ ಅಕ್ಷವು ಹಾದುಹೋಗುವುದರಿಂದ ಅದು ಆ ಮೂರು ಪಾದಗಳಿಗೂ ಸಮಾನಾಕ್ಷರವಾಗಿರಬೇಕು ; ಹಾಗೂ, ಮೂರನೆಯ ಪಾದದ ಕಡೆಯ ಅಕ್ಷರವೆ ಹೊರವಲಯದಲ್ಲಿ ಸುತ್ತುಬಳಸಿಬಂದಮೇಲೆ ಅದರ ಅಂತ್ಯಾಕ್ಷರವೂ ಆಗಿರಬೇಕು. ಸ್ಥೂಲವಾಗಿ, ಇದು ಬಂಧಲಕ್ಷಣ. "ಈ ನಿಯಮಕ್ಕೆ ಶ್ಲೋಕಾಕ್ಷರಗಳು ಸರಿಗೂಡದಿದ್ದಲ್ಲಿ, ಚಕ್ರಬಂಧವೇ ಸರಿಯಾಗಿಲ್ಲವೆಂದು ಅಥವಾ ಮಾತೃಕೆಯಲ್ಲಿ ತಪ್ಪು ಬಿದ್ದಿದೆ ಎಂದು ಭಾವಿಸಬೇಕು. ಪ್ರಕೃತ ಶ್ಲೋಕದ ಎರಡೂ ಪಾದಗಳ ಹತ್ತನೆ ಅಕ್ಷರಗಳು 'ರ' ಆಗಿರುವುದರಿಂದ ಅಕ್ಷಸ್ಥಾನವು ಸರಿಗೊಂಡರೂ ಮೂರನೆ ಪಾದದ ಆ ಸ್ಥಾನಾಕ್ಷರವು 'ಟಿ' ಎಂದು ತೋರಿ ಸಂಗಮಿಸುವುದಿಲ್ಲ. ಇಂಥ ಉದ್ಗ್ರಂಥಕಾರನು ತಪ್ಪಿಹೋಗಿದ್ದಾನೆ ಎನ್ನುವುದಕ್ಕಿಂತಲೂ ಇದು ಮತ್ತಿನ ಮಾತೃಕಾಕಾರನ ಹಸ್ತದೋಷವೆಂದೇ ಹೇಳಬೇಕು. ಮೂರನೆ ಪಾದದ ಆ ಅಕ್ಷರವು 'ಱ'ಕಾರವಾಗಿ ಇದ್ದಿರಬೇಕು. ಇಂಥ ದುಷ್ಕರ ಕಾವ್ಯಬಂಧಗಳಲ್ಲಿ 'ರ–ಱ'ಕಾರಭೇದಗಳನ್ನಷ್ಟೇ ಅಲ್ಲ, 'ಕ–ಖ, ದ–ಧ' ಮೊದಲಾದ ಏಕಜಾತೀಯುಗಳಾದ ಅಲ್ಪ ಮಹಾಪ್ರಾಣಾಕ್ಷರಗಳೊಳಗಿನ ಭೇದವೂ ಪರಿಗಣಿಸಲ್ಪಡುವುದಿಲ್ಲ. ಮಾತ್ರವಲ್ಲ ; ಬಿಂದು ಒತ್ತು ವ್ಯಂಜನ ಮೊದಲಾದವುಗಳು ಮಾತೃಕೆಯಲ್ಲಿ ಹೆಚ್ಚಾಗಿದ್ದರೆ ಬಿಡಲೂಬಹುದು ; ಇಲ್ಲವೆ ಸಂದರ್ಭಕ್ಕೆ ನ್ಯೂನವಾದಲ್ಲಿ ಸೇರಿಸಿಕೊಳ್ಳಲೂಬಹುದು.

ನಾಲ್ಕನೆಯ ಮತ್ತು ಆರನೆಯ ಸುತ್ತಣ ಅರಸಂಪುಟಾಕ್ಷರಗಳಕೂಟದ ವಾಕ್ಯಗಳಿಂದ ಕವಿಕಾವ್ಯಗಳ ವಿಚಾರವು ಗೊತ್ತಾಗುವಂತಿರಬೇಕೆಂಬುದಿದು ೧೫ನೆಯ ಶತಮಾನದಲ್ಲಿ ಹುಟ್ಟಿದ 'ಪ್ರತಾಪ ರುದ್ರೀಯ' ಎಂಬ ಲಕ್ಷಣ ಗ್ರಂಥದ ಸೂಚನೆ. ಈ ಹೇಳಿಕೆ ಎಷ್ಟೋ ಹಿಂದಿನದಾದ ೯ನೆಯ ಶತಮಾನದ ಈ ಕವಿರಾಜಮಾರ್ಗಕ್ಕೆ ಅಕ್ಷರಶಃ ಅನ್ವಯಿಸಬೇಕೆಂದು ಭಾವಿಸಿದರೆ ಅಪರಾಧವೇ ಆದೀತು. ಹಿಂದಿನವನಾದ ಕವಿರಾಜಮಾರ್ಗಕಾರನು ಬಹುಶಃ ದಂಡಿ–ರುದ್ರಟಾದಿಗಳನ್ನೋ ಅಲ್ಲವೆ ಇತರ ಲಾಕ್ಷಣಿಕರನ್ನೋ ಈ ವಿಷಯದಲ್ಲಿ ಅನುಸರಿಸಿರಬಹುದು. ಪರಾಂಬರಿಸಿ ನೋಡಿದಲ್ಲಿ ಬಂಧದ ಆರನೆಯ ಅಕ್ಷರಗಳ ಅರಸಂಪುಟಾಕ್ಷರಗಳನ್ನು ಪೂರ್ವೋಕ್ತ ಲಕ್ಷಣದಂತೆ ಕ್ರಮವಾಗಿ ಕೂಡಿಸಿದಲ್ಲಿ 'ಮೀಮಪಾ' – 'ಜಯಾಟ್ವಂ' ಎಂದಾಗುತ್ತಿದೆ". (ಮೇಲೆಲ್ಲ ಉಲ್ಲೇಖಿಸಿರುವ ಸಂಬಂಧಪಟ್ಟ ಅಕ್ಷರಗಳನ್ನು ಲಕ್ಷ್ಯಪದ್ಯದಲ್ಲಿ ಕಂಸಗಳೊಳಗೆ ತೋರಿಸಿದೆ.) ಇಲ್ಲಿ 'ಜಯಾಟ್ವಂ' ಎಂಬುದು ಕವಿಯ ಹೆಸರಾಗಿ ಹೊರಪಡುತ್ತಿದೆ. ಜಯ ಅಥವಾ ಜಯಟ್ವ ಎಂಬುದು ಕವಿಯ ಹುಟ್ಟು ಹೆಸರು; ಅವನು ನೃಪತುಂಗನಾಸ್ಥಾನದ ಸದಸ್ಯನಾದ ಮೇಲೆ 'ಪೂಜ್ಯಾರ್ಥಕಗಳಾದ 'ಶ್ರೀ–ವಿ' ಎಂಬೆರಡು ಅಕ್ಷರಗಳಿಂದೊಡವೆರೆದು 'ಶ್ರೀವಿಜಯ' ಎಂಬ ಅಭಿದಾನವೊದಗಿದುದಾಗಿರಬಹುದು..." 'ಜಯಾಟ್ವ' ಎಂಬಲ್ಲಿ ತೋರುವ 'ಆಟ್ವ' ಎಂಬುದು ಕವಿಯ ತಾತ್ತ್ವಿಕ ಸಂಸ್ಕೃತಿಯ ದ್ಯೋತಕ. ('ಆಳ್ವ' ಎಂದು ಮನೆತನವನ್ನು ಸೂಚಿಸುವ ಪದವಾದರೆ 'ಕುಳ'ಳಕಾರವಾಗುತ್ತದೆ.) ಆದರೆ, 'ಜಯಾಟ್ವ'ದ ಹಿಂದಿನ 'ಮೀಮಪಾ' ಎಂಬುದು ಅರ್ಥವಾಗುವುದಿಲ್ಲ. (ಆದ್ದರಿಂದಲೇ, ಮದ್ರಾಸು ಪ್ರತಿಯ ಸಂಪಾದಕರು 'ಈ ಬಂಧದಲ್ಲಿ ಅಂತಹ ವಿಷಯವು – ಎಂದರೆ ಕವಿ ವಿಷಯವು – ತಿಳಿಯುವಂತಿಲ್ಲ' ಎಂದು ತಿಳಿಸಿದ್ದಾರೆ). ಈ ಅರ್ಥವಾಗದ 'ಮೀಮಪಾ', ಪೂರ್ವಾಪರ ವಿರುದ್ಧಾರ್ಥಕವಾದ 'ಸೌಜನ್ಯ ಲಕ್ಷ್ಮೀಮದಾಂಧಂ' ಎಂಬ ಪದಪ್ರಯೋಗ, ಲಕ್ಷಣಾನುಗುಣವಾಗಿ ಬಂಧದಲ್ಲಿ ಹೊಂದಿಕೊಳ್ಳಬೇಕಾದ ಅಕ್ಷರಗಳು ಹೊಂದಿಕೊಳ್ಳದಿರುವುದು – ಈ ಕಾರಣಗಳಿಂದ "ಈ ಶ್ಲೋಕವು ತಪ್ಪಾಗಿ ಮಾರ್ಪಟ್ಟಿದೆ ಎಂಬುದು ಸ್ಫುಟವಾಗಿ ಕಾಣಿಸುತ್ತಿದೆ".

ಹೀಗೆ 'ತಪ್ಪಾಗಿ ಮಾರ್ಪಟ್ಟಿದೆ' ಎಂದು ತಾವು ಭಾವಿಸಿರುವ ಮೇಲ್ಕಂಡ ಚಕ್ರಶ್ಲೋಕವನ್ನು ಮುಳಿಯ ತಿಮ್ಮಪ್ಪಯ್ಯನವರು ಹೀಗೆ ತಿದ್ದಿರುತ್ತಾರೆ :

ಸಂತಂ ಬಾಟ್ವುದು (ಮೀ)ಱದಾ ನ(ರ)ಪನೊಳ್ ಸೌ(ಜ)ನ್ಯಲಕ್ಷ್ಮೀಪದಾ ನ್ದಾಂತಂ
ನಿಶ್ಚಯ(ಮ)ಚ್ಚಿನಿಂ ಪ(ರ)ಗುಣೌದಾ(ಯಾ)ರ್ಭಿಮಾನಂ ಗಳಾನ್ ಪಿಂತಂ ನೋಡದೆ
(ಪಾ)ಟಿಗೆಟ (ಱ)ವಿನಿಂ ಬಾ(ಟ್ವ)ಂತೆ ಬಾಳ್ದಯ್ಯ(ನಾ) (ನಾ)ಂತಂತಾನ್

ಸಮಯಸಂದನುಲ್ತೆ ಪಿರಿದುಂ ದಾನಂಗಳಾನ್ ಭೂಪನಾ.

ಇದರಿಂದ ಅವರು ಸಿದ್ಧಾಂತ ಮಾಡುವ ಕವಿ ವಿಚಾರ :

"ಹೀಗೆ ಬಂಧಗತವಾಗಿ ಮಾಡಿ ಓದಿದ ಶ್ಲೋಕದ ಆರನೆಯ ಅರಸಂಪುಟಗಳ ಅಕ್ಷರಕೂಟವು **'ಸಾಮಪಾ – ಜಯಾಟ್ವಿಂ'** ಎಂದಾಗುತ್ತದೆ. ನಾಲ್ಕನೆಯ ಸಂಪುಟಗಳಿಂದ ಕವಿವಿಚಾರ ಏನೇನೂ ಗೊತ್ತಾಗುವುದಿಲ್ಲ. ಆದರೆ ಒಂದನೆಯ ಆರು ಅರಸಪುಟಾಕ್ಷರಗಳನ್ನು **'ಸಂದ ಪಿಂದಾಳಾ ನಾ'** ಎಂದು ರೂಪಿತಗಳಾಗುತ್ತಿವೆ. ಎರಡನ್ನೂ ಒಟ್ಟುಗೂಡಿ ಓದಿದಲ್ಲಿ **'ಸಂದಪಿಂದಾಳಾ ನಾ– ಸಾಮಪಾಜಯಾಟ್ವಿಂ'** ಎಂದಾಗುವುದು. ಪ್ರಸಿದ್ಧಿ ಪಡೆದ ನೃಪತುಂಗ ಚಕ್ರವರ್ತಿಯ ಹಿಂದಾಳಾದ ನಾನು ಸಾಮಪನಾದ (ಸಂಧಾನಮಂತ್ರಿ') ಜಯಾಟ್ವನು ಎಂಬುದು ಆ ವಾಕ್ಯಾರ್ಥವು."

ದಿವಂಗತ ಮುಳಿಯ ತಿಮ್ಮಪ್ಪಯ್ಯನವರಂತಹ ಹಿರಿಯ ವಿದ್ವಾಂಸರ ಸಿದ್ಧಾಂತವನ್ನು ಅಲ್ಲಗಳೆಯಹೊರಡುವುದು ಸಾಹಸದ ಮಾತೇ ಸರಿ. ಆದರೂ ಈ ಸಂಬಂಧದಲ್ಲಿ ತಲೆದೋರುವ ಸಂದೇಹಗಳನ್ನು ವಿಚಾರಶೀಲರ ಮುಂದಿಡಬೇಕಾದದ್ದು ನಮ್ಮ ಕರ್ತವ್ಯ. ಚಕ್ರಬಂಧದಿಂದ ಕವಿಕಾವ್ಯ ವಿಚಾರವು ಗೊತ್ತಾಗಬೇಕೆಂಬ ೧೫ನೆಯ ಶತಮಾನದ[೪೦] 'ಪ್ರತಾಪ ರುದ್ರೀಯ'ದ ಲಕ್ಷಣ ನಿರ್ದೇಶವನ್ನು "೯ನೆಯ ಶತಮಾನದ ಈ ಕವಿರಾಜಮಾರ್ಗಕ್ಕೆ ಅಕ್ಷರಶಃ ಅನ್ವಯಿಸಬೇಕೆಂದು ಭಾವಿಸಿದರೆ ಅಪರಾಧವೇ ಆದೀತು'' ಎಂಬ ಮುಳಿಯ ತಿಮ್ಮಪ್ಪಯ್ಯನವರ ಮಾತಿನಿಂದಲೇ ಈ ಬಗೆಗೆ ಅದಕ್ಕೂ ಹಿಂದಿನ ಲಕ್ಷಣ ಗ್ರಂಥಗಳಲ್ಲಿ ನಿರ್ದಿಷ್ಟ ಸೂಚನೆಗಳಿಲ್ಲ ಎಂಬುದು ಸ್ವಯಂ ಸ್ಪಷ್ಟ. 'ಪ್ರತಾಪರುದ್ರೀಯ'ದಲ್ಲಿ ೪–೬ನೆಯ ಅರಸಂಪುಟಾಕ್ಷರಗಳಿಂದ ಕವಿಕಾವ್ಯ ವಿಚಾರವು ಸೂಚಿತವಾಗಿದೆ ಎಂಬುದರಿಂದ ಕ.ರಾ. ಮಾರ್ಗದ ಚಕ್ರಶ್ಲೋಕದಲ್ಲಿಯೂ ಅದೇ ಕ್ರಮಸಂಖ್ಯೆಯ ಅಕ್ಷರಗಳಿಂದ ಕವಿಕಾವ್ಯ ವಿಚಾರ ಸೂಚಿತವಾಗಿರಬೇಕೆಂದು ಏಕೆ ನಿರೀಕ್ಷಿಸಬೇಕು ? ಕ.ರಾ. ಮಾರ್ಗದ ಚಕ್ರಬಂಧ ಪ್ರಭೇದವು ಬೇರೆಯಾಗಿರಬಹುದಲ್ಲಾ? 'ಪ್ರತಾಪರುದ್ರೀಯ'ದಲ್ಲಿ

೪೦. ವಿದ್ಯಾನಾಥಕೃತ 'ಪ್ರತಾಪರುದ್ರ ಯಶೋಭೂಷಣ'ದ ಕಾಲ ೧೩ನೆಯ ಶತಮಾನದ ಕೊನೆ ಎಂದು 'ಕನ್ನಡ ಕೈಪಿಡಿ'ಯಲ್ಲಿ ತಿಳಿಸಿದೆ. (ಕ.ಕೈ., ಪು.೧೪೫.) ಕ.ರಾ. ಮಾರ್ಗದ ಮದ್ರಾಸು ಪ್ರತಿಯ ಸಂಪಾದಕರು ಚಕ್ರಬಂಧದಲ್ಲಿ ಕವಿಯ ಹೆಸರನ್ನು 'ವೈದ್ಯನಾಥ' ಎಂದು ತಪ್ಪಾಗಿ ಓದಿರುವಂತೆ ಕಾಣುತ್ತದೆ. ಇದು ಪರಿಶೀಲಿಸತಕ್ಕುದು.

ಕವಿ–ಕಾವ್ಯನಾಮುಗಳೆರಡೂ ಸೂಚಿತವಾಗಿರುವಲ್ಲಿ, ಮುಳಿಯ ತಿಮ್ಮಪ್ಪಯ್ಯನವರ 'ಉದ್ಧರಣ'ಕ್ರಮದಲ್ಲಿ ಕೇವಲ ಕವಿಯ ಹೆಸರಷ್ಟೇ (=ಸಾಮಪ ಜಯಾಟ್ವಿ) ಸೂಚಿತವಾಗಿದೆಯಲ್ಲವೆ ? ಬಂಧ ಲಕ್ಷಣದ ಪ್ರಕಾರ, ಕಾವ್ಯದ ಹೆಸರೂ ದೊರೆಯಬೇಡವೇ ? ಕವಿರಾಜಮಾರ್ಗಕಾರನು ಕೃತಿಯ ಕೆಲವೆಡೆಗಳಲ್ಲಿ ('ಶ್ರೀವಿಜಯ'ನೆಂದು) ತನ್ನ ಹೆಸರಿನ ಉಲ್ಲೇಖವನ್ನು ಸ್ಪಷ್ಟವಾಗಿಯೇ ಮಾಡಿರುವಲ್ಲಿ, ಚಕ್ರಶ್ಲೋಕದಲ್ಲಿ ಅದರ ಪರ್ಯಾಯನಾಮವೊಂದನ್ನು ಅಡಗಿಸುವ ಅವಶ್ಯಕತೆಯಾದರೂ ಏನು? ಅಲ್ಲದೆ, ಬೇರೆ ಹಸ್ತಪ್ರತಿಗಳು ದೊರೆತು, ಬೇರೆ ಬೇರೆ ಪಾಠಾಂತರಗಳ ಆಧಾರದ ಮೇಲೆ ಪ್ರಾಮಾಣಿಕವಾದ ಶುದ್ಧಪಾಠವು ನಿರ್ಣಯವಾಗುವವರೆಗೆ, ಪಾಠಗಳ ಆಧಾರವಿಲ್ಲದೆ ಸಂದರ್ಭೋಚಿತವಾಗಿ ತಿದ್ದುಪಡಿ ಮಾಡಿದ ಪಾಠದ ಆಧಾರದ ಮೇಲೆ ಇಂತಹ ಮುಖ್ಯ ವಿಚಾರದಲ್ಲಿ ಮಾಡಿದ ಸಿದ್ಧಾಂತವು ವಿಶ್ವಸನೀಯವಾಗಬಲ್ಲುದೆ?

ಈ ಸಂದೇಹದ ಪ್ರಶ್ನೆಗಳು ಬಗೆಹರಿಯುವವರೆಗೆ, '(ಸಾಮಪ) ಜಯಾಟ್ವಿ' ಎಂಬುದು 'ಶ್ರೀವಿಜಯನ' ಇನ್ನೊಂದು (ಹುಟ್ಟು) ಹೆಸರು ಎಂಬುದಾಗಿ ತಿಳಿಯುವುದು ಕಷ್ಟವಾಗಿ ಕಾಣುತ್ತದೆ.

### ಹೇಳಿಕೆ

ಪದ್ಯ ೧೪೩ : ಈ ಗೀತಿಕೆಯ ಮೊದಲ ಎರಡು ಪಂಕ್ತಿಗಳಿಗೂ ('ಪೇಟ್ದೆಂ' ಎಂಬ ಪದ ಹೊರತಾಗಿ) ಅಚ್ಚಾಗಿರುವ ಎರಡು ಪ್ರತಿಗಳಲ್ಲೂ ಒಂದೇ ಪ್ರಕಾರವಾಗಿದೆ. ಮದ್ರಾಸು ಮುದ್ರಣದಲ್ಲಿ ಕೊಟ್ಟಿರುವ ಪಾಠಾಂತರವನ್ನು (ಪು. ೧೨೪) ಅನುಸರಿಸಿ, ಈಗ ಇರುವ ಪಾಠವನ್ನು 'ಅನುಗತಂ ಪೂರ್ವ ಕವಿಗಳ ನೆನವಿನಿಂದ ಪೇಳ್ದೆಂ ದುಷ್ಕರೋಕ್ತಿಯಂ–' (=ಪೂರ್ವ ಕವಿಗಳು ನೆನೆದಿರುವ ಪ್ರಕಾರ ಈವರೆಗೆ ಕ್ರಮವಾಗಿ ದುಷ್ಕರಕಾವ್ಯ ಪ್ರಕಾರಗಳನ್ನು ಹೇಳಿದೆನು) ಎಂದು ತಿದ್ದಪಾಟುಮಾಡಿಕೊಂಡರೆ ಹೆಚ್ಚು ಸುಗಮವಾಗಿ ಅರ್ಥವಾಗುತ್ತದೆ. "ಇನ್ನು ಅನುಗತ ಕ್ರಮದಲ್ಲಿ 'ಹೇಳಿಕೆ'ಯ ವಿಭೇದಗಳನ್ನು ಸಂಕ್ಷೇಪವಾಗಿ ಹೇಳುವೆನು" ಎಂದು ಉಳಿದೆರಡು ಪಂಕ್ತಿಗಳ ತಾತ್ಪರ್ಯ.

ಪದ್ಯ ೧೪೪ : ಇದರಲ್ಲಿ ಮಾರ್ಗಕಾರ 'ಹೇಳಿಕೆಯ' ಏಳು ಪ್ರಭೇದಗಳನ್ನು ಹೆಸರಿಸಿದ್ದಾನೆಯೆ ಹೊರತು ಹೇಳಿಕೆಯ ಲಕ್ಷಣ ಸ್ವರೂಪವನ್ನು ತಿಳಿಸಿಲ್ಲ.

ನಾಗವರ್ಮನೂ ಏಳು ಪ್ರಭೇದಗಳನ್ನು ಹೆಸರಿಸಿದ್ದಾನೆ. ಆದರೆ ಎರಡು ಮೂರರ ಹೆಸರುಗಳು ಮಾತ್ರ ಬೇರೆಯಾಗಿವೆ. [ಅಸ್ಪಷ್ಟಾಕ್ಷರ – ಅಸ್ಪಷ್ಟಾರ್ಥ; ವರ್ಣವ್ಯತ್ಯ. – ಉಟಿವು (?) ; ಭಾವೆ–ಭಾವ]. ದಂಡಿಯನ್ನನುಸರಿಸಿ ನಾಗವರ್ಮನು 'ಕಾವ್ಯಾವಲೋಕನ'ದಲ್ಲಿ 'ಹೇಳಿಕೆ'ಯ ಸ್ಥೂಲಸ್ವರೂಪವನ್ನು ಹೀಗೆ ನಿರೂಪಿಸಿದ್ದಾನೆ :

ಸುಕವಿಪ್ರಕರಕ್ಕೆ ವಿನೋ<br>
ದಕೇಳಿಗುಪಯೋಗಹೇತುಗಳ್ ಪ್ರಚ್ಛನ್ನ ।<br>
ಪ್ರಕಾಟಾರ್ಥಂಗಳನೇಕ<br>
ಪ್ರಕಾರದಿಂದೊಂದಿ ವರ್ತಿಕುಂ ಪೇಳಿಕೆಗಳ್ ॥ – ಸೂ. ೧೪೦, ೧೫೩

ದಂಡಿಯ ಶ್ಲೋಕ :

ಕ್ರೀಡಾಗೋಷ್ಠಿವಿನೋದೇಷು ತಜ್ ಜ್ಞೈರಾಕೀರ್ಣಮಂತ್ರಣೇ ।<br>
ಪರವ್ಯಾಮೋಹನೇ ಚಾಪಿ ಸೋಪಯೋಗಾಃ ಪ್ರಹೇಲಿಕಾಃ ॥[೪೧] – III, ೯೭

ಒಟ್ಟಿನಮೇಲೆ, ಕವಿಗಳೂ ವಿದ್ವಾಂಸರೂ ನೆರೆದಿರುವ ವಿನೋದಗೋಷ್ಠಿಗಳಲ್ಲಿ ವಿನೋದಕ್ಕಾಗಿ, ಸಮಸ್ಯಾಪೂರಣ ಮಾಡುವುದು, ಕೊಟ್ಟ ಒಗಟ ಬಿಡಿಸುವುದು, ಮುಂತಾದ ವಾಕ್‌ಚಮತ್ಕೃತಿಗಳನ್ನು (ಪ್ರ) ಹೇಳಿಕೆ ಎಂದು ನಿರ್ದೇಶಿಸಬಹುದು.

ಪದ್ಯ ೧೪೫ : ಇದು 'ಭಾವೆ' ಎಂಬ ಹೇಳಿಕೆಯ ಪ್ರಭೇದದ ದೃಷ್ಟಾಂತ. ಈ ಪದ್ಯವೂ ರಾಮಾಯಣಕಥಾ ಸಂಬಂಧಿಕವಾದ ಪದ್ಯವಿರಬಹುದೆಂದು

---

೪೧. ಆಪ್ಟೆಯವರ ನಿಘಂಟುವಿನಲ್ಲಿ 'ಹೇಲಾ' ಎನ್ನುವುದಕ್ಕೆ amorous sport or dalliance (ಬೇಟದ ಆಟ, ಪ್ರಣಯ ವಿಲಾಸ, ಪ್ರೇಮಲೀಲೆ), Wanton sport (ಕುಚೇಷ್ಟೆಯ ವಿನೋದ, ಚೆಲ್ಲಾಟ) ಎಂದೂ, 'ಪ್ರಹೇಲಾ' ಎನ್ನುವುದಕ್ಕೆ free or unrestrained behaviour, loose conduct, playful dalliance (ಸ್ವಚ್ಛಂದವರ್ತನೆ, ಸ್ಥೈರವರ್ತನೆ, ಅಂಕೆಯಿಲ್ಲದ ನಡತೆ). 'ಪ್ರಹೇಲಿ(ಕಾ)' ಎನ್ನುವುದಕ್ಕೆ a riddle, an enigma, a conundrum (ಒಗಟು, ಒಡಪು, ಸಮಸ್ಯೆ, ಗೂಢಪ್ರಶ್ನೆ) ಎಂದೂ ಅರ್ಥಗಳನ್ನು ಕೊಟ್ಟಿದೆ. 'ಪ್ರಹೇಲಿಕೆ'ಯಲ್ಲಿ 'ಅರ್ಥೀ' ಮತ್ತು 'ಶಾಬ್ದೀ' ಎಂದು ಎರಡು ವಿಧ ಎಂದೂ ಹೇಳಿದೆ. ದಂಡಿಯಾದರೋ ೧೬ ಪ್ರಹೇಲಿಕಾ ಪ್ರಕಾರಗಳನ್ನು ಹೇಳಿದ್ದಾನೆ. (ಕಾವ್ಯಾದರ್ಶ : III, ೯೬–೧೨೪). ಅವು ಯಾವುವೆಂದರೆ : ಸಮಾಗತಾ, ವಂಚಿತಾ, ವ್ಯುತ್ಕ್ರಾಂತಾ, ಪ್ರಮುಷಿತಾ, ಸಮಾನರೂಪಾ, ಪರುಷಾ, ಸಂಖ್ಯಾತಾ, ಪ್ರಕಲ್ಪಿತಾ, ನಾಮಾಂತರಿತಾ, ನಿಭೃತಾ, ಪರ್ಯಾಯ ಸಾಧಿತಾ, ಸಂಮೂಢಾ, ಯೋಗಮಾಲಾತ್ಮಿಕಾ (ಪರಿಹಾರಿಕಾ) ಏಕಚ್ಛನ್ನಾ, ಉಭಯಚ್ಛನ್ನಾ, ಸಂಕೀರ್ಣಾ.

ಮುಳಿಯ ತಿಮ್ಮಪ್ಪಯ್ಯನವರ ಊಹೆ. ಆದರೆ, ಹೀಗೆ ಊಹಿಸಲು ಪದ್ಯದಲ್ಲಿ ಸ್ಪಷ್ಟಸೂಚನೆ ಯಾವುದೂ ಇಲ್ಲ. 'ಯಾವಾತನೋ ಒಬ್ಬ ತನ್ನ ಪ್ರಿಯೆಯನ್ನು ಪರಿತ್ಯಾಗ ಮಾಡಿದ ಮೇಲೆ ಅವಳ ಚೆಲುವನ್ನೂ ಗುಣಸೌಂದರ್ಯವನ್ನೂ ನೆನೆದು ಪಶ್ಚಾತ್ತಾಪಪಡುವ ಸಂಗತಿ ಇಲ್ಲಿ ನಿರೂಪಿತವಾಗಿದೆ' – ಎಂಬುದಿದೂ ಅವರು ತಿಳಿಸುವ ಪದ್ಯದ ತಾತ್ಪರ್ಯ. ನಮಗೆ ತೋರುವ ಅಭಿಪ್ರಾಯವೇ ಬೇರೆ. ಪದ್ಯದ ಅನ್ವಯಕ್ರಮವನ್ನು ತಿಳಿದರೆ ತಾತ್ಪರ್ಯವು ಸುಲಭಗ್ರಾಹ್ಯವಾಗುವುದು. ಅನ್ವಯ ಹೀಗೆ : 'ಕಿವಿವರಂ ನೀಳ್ದ ನಯನಯುಗದೊಳ್ ಒಪ್ಪುವವಳಾನ್ ಪ್ರಿಯೆಯಂ ಅವಯವದೆ ಸವಿಹಿತಮಪ್ಪ ಕರ್ಪೂರೋತ್ಪಳಮ ಧವಲವಿಲೋಚನೆಯು ಗುಣಸುಂದರಮಂ ಏಕೆ ಕಳೆಯವೇಟ್ಟಿಂ ? ನೀಳವಾದ ಧವಳವಾದ ಕಣ್ಣುಳ್ಳವಳನ್ನು ತನ್ನ ಕಿವಿಯೊಡವೆಯಾದ ನೈದಿಲೆಯನ್ನು ತೆಗೆದುಹಾಕುವಂತೆ ಪ್ರಿಯನು ಅವಳಿಗೆ ಹೇಳಿದ್ದೇಕೆ ? – ಎಂಬ ಪ್ರಶ್ನೆ ಇಲ್ಲಿ ಅಡಗಿದೆ. ಒಂದು ರೀತಿಯ ಗೂಢಪ್ರಶ್ನೆಯಿದು. ಕಿವಿಯವರೆಗೂ ನೀಳವಾಗಿದ್ದು, ಬೆಳ್ಳಗೆ ಬೆಳ್ನೈದಿಲೆಯಂತೆ ಸುಂದರವಾಗಿರುವ ಕಣ್ಣುಳ್ಳವರಿಗೆ ಕಿವಿಯ ನೈದಿಲೆ ಅನಾವಶ್ಯಕ ಎಂದು ಉತ್ತರ. (ನಾಗವರ್ಮನು ಕೊಟ್ಟಿರುವ ದೃಷ್ಟಾಂತ ಬಹುಮಟ್ಟಿಗೆ ಇದನ್ನು ಹೋಲುತ್ತದೆ.)

ಪದ್ಯ ೧೪೬ : 'ನುಸುಳ್' ಎಂದರೆ ('ದ್ವಾರಪ್ರವೇಶೇ – ಶ.ಮ.ದ.) 'ತೆರೆದಿರುವಷ್ಟು ಅಲ್ಪಕಾಲಾವಕಾಶದಲ್ಲಿಯೂ ಪ್ರವೇಶವನ್ನು ದೊರಕಿಸಿಕೊಂಡು ಹೋಗು' ಎಂದು ಧಾತ್ವರ್ಥ. ಇಲ್ಲಿ ಬಹುಶಃ ಅದೇ ಅರ್ಥ ಈ 'ಹೇಳಿಕೆ'ಯ ನಾಮವಾಚಕ (ನುಸುಳು)ದಲ್ಲಿಯೂ ಅಡಗಿರಬಹುದು. 'ಉದ್ದಿಷ್ಟವಾದ ಅರ್ಥವನ್ನು ಸೂಕ್ಷ್ಮವಾದ ರೀತಿಯಲ್ಲಿ ಅಡಗಿಸಿ ಹೊಳೆಯಿಸುವುದು' ನುಸುಳು ಎಂಬ ಹೇಳಿಕೆಯ ವೈಶಿಷ್ಟ್ಯವೆಂದು ಕಾಣುತ್ತದೆ. 'ಈ ಪದ್ಯದ ಅರ್ಥವು ಸ್ಪಷ್ಟವಾಗಿ ಹೊಳೆಯದು' ಎಂದು ಹೇಳಿ, 'ಕಾವ್ಯಾವಲೋಕನ'ದ ನುಸುಳಿನೊಂದಿಗೆ ಇದನ್ನು ಹೋಲಿಸಿ, 'ಸೂರ್ಯನಿಂದಲೂ ಕಳೆಯಲಾಗದಂತೆ ಪ್ರಪಂಚದಲ್ಲಿ ನುಸುಳಿಕೊಂಡಿರುವುದು ಗಾಳಿ' ಎಂದು ಮುಳಿಯ ತಿಮ್ಮಪ್ಪಯ್ಯನವರು ಊಹಿಸಿರುವರು. (ತನ್ನ ಜೊತೆಯ ಹಕ್ಕಿಯನ್ನು ಅಗಲಿದ ಚಕ್ರವಾಕ ಪಕ್ಷಿಯನ್ನು ಕುರಿತ 'ಅರ್ಥದ ನುಸುಳು' ಇಲ್ಲಿ ಇದ್ದಿರಬಹುದು).

ತಿರಿ = ತಿರುಪೆಗಾಗಿ ಸುತ್ತಾಡು, ತಿರುಪೆಬೇಡು ; ಅರಿ = ಕತ್ತರಿಸು

(ಕೃಂತನೇ – ಶ.ಮ.ದ) ; ಅರಮೆ = ಅರ್ಧವಾಗಿರುವುದು, ಕೊರತೆ; ಪೊರೆ = ಕೂಡಿಕೊ, ಸಮೀಪದಲ್ಲಿರು.

ಪದ್ಯ ೧೪೭ : 'ನಾವು ಅರಿಯದ ಸವಿಯನ್ನು ಉಳ್ಳ ಹಾಗೂ 'ಪುಟ್ಟಿದ ಆರುಂ ಅಱಿಯದ ಅದಱ ಪೆಸಱಿೊಳ್ ಅಟ್ಟುದಂ (= ಹುಟ್ಟಿದ ಯಾರೂ ಅರಿಯದಂತಹ ಹೆಸರಿನಿಂದ ಅಡಿಗೆ ಮಾಡಿದುದನ್ನು) (ಅಥವಾ 'ಆಱುಂ ಅಱಿಯದ ಅದಱ ಪೆಸಱಿೊಳ್ ಅಟ್ಟುದಂ = ಪ್ರಸಿದ್ಧವಾದ ಆರು ರಸಗಳೆಂದೂ ತಿಳಿಯದ ಬೇರೊಂದು ರಸದ ಹೆಸರಿನಿಂದ ಅಟ್ಟುದನ್ನು) ಅಂತಹ ಭೋಜನವನ್ನು ಬಹುಸವಿಯಾಗಿರುವಂತೆ ಅಟ್ಟು ಬಡಿಸು ; ಆ ಭೋಜನವೆಂಥದೆಂದು ಹೇಳೋಣವೆಂದರೆ ಅದನ್ನು ಕೇಳಿ ಅರಿಯೆ. ಇಲ್ಲಿ, 'ಆರುಂ–ಆಱುಂ' ಎಂಬಲ್ಲಿ 'ರ–ಱ' ಕಾರಗಳ ಭ್ರಾಂತಿಯಿಂದ ಬೇರೆ ಬೇರೆ ಅರ್ಥಗಳಾಗುವುದರಿಂದ, ಇದು 'ಅಸ್ಪಷ್ಟಾಕ್ಷರ' ಪ್ರಯೋಗದ ಚಮತ್ಕಾರ ಎಂದು ಕಾಣುತ್ತದೆ. ಇದನ್ನೇ 'ಕಾವ್ಯಾವಲೋಕನ'ದಲ್ಲಿ 'ಅಸ್ಪಷ್ಟಾರ್ಥ' ಎಂದು ಕರೆದಿರುವಂತೆಯೂ ಕಾಣುತ್ತದೆ.

ಒಂದು ಸಂದೇಹ ತಲೆದೋರುತ್ತದೆ : 'ಕವಿರಾಜಮಾರ್ಗ'ದ ಕಾಲಕ್ಕೆ 'ರ–ಱ' ಕಾರಗಳ ಉಚ್ಚಾರಣೆಯ ಭೇದದಲ್ಲಿ ಅಸ್ಪಷ್ಟತೆ ಪ್ರಾರಂಭವಾಗಿತ್ತೆ? ಇದು ವಿಚಾರಣೀಯ.

ಪದ್ಯ ೧೪೮ : ವರ್ಣವ್ಯತ್ಯಯು ಎಂದರೆ ಅಕ್ಷರಗಳ ಸ್ಥಾನಗಳು ಹಿಂದುಮುಂದಾಗುವುದು. ಪ್ರಕೃತ ಪದ್ಯದಲ್ಲಿ ಯಾವೆಡೆಗಳಲ್ಲಿ ವರ್ಣವ್ಯತ್ಯಯವಾಗಿದೆ ಎಂಬುದು ದುರೂಹ್ಯವಾಗಿದೆ.

ಪದ್ಯ ೧೪೯ : 'ಬಿಂದುಚ್ಯುತಕ' : ಎಂದರೆ, ಇರಬೇಕಾದ ಎಡೆಯಲ್ಲಿನ ಬಿಂದು (ಸೊನ್ನೆ) ಇಲ್ಲದಿರುವುದು. ಈ ಪದ್ಯದಲ್ಲಿಯೂ ಲಕ್ಷ್ಯಲಕ್ಷಣ ಸಮನ್ವಯ ಮಾಡುವುದು ದುಷ್ಕರವಾಗಿ ಪರಿಣಮಿಸಿದೆ.

ಪದ್ಯ ೧೫೦ : ಈ ಪದ್ಯದಲ್ಲಿಯೂ ಅರ್ಥಕ್ಲೇಶವಿದೆ.

ಬಸನ = (ಸಂ.ವ್ಯಸನ). ದೀವ = (ಸಂ.ದ್ವೀಪ). ದೀಹದ (ಬೇಟೆಯ ಮೃಗವನ್ನು ಆಕರ್ಷಿಸಲು ಉಪಯೋಗಿಸುವ ಹುಲ್ಲೆಕರು. ಮುಂತಾದ ಮೃಗ.) ಸಿತಗ = ದುಷ್ಟನಾದ ಕಾಮುಕ.

ಪದ್ಯ ೧೫೧ : ಈ ಪದ್ಯದ ಅನ್ವಯ ಹೀಗಿರಬಹುದು : 'ಅರಸಂ ಮನದೊಳ್ ಮುಳಿದು (ಕೋಪಿಸಿ) ಅಸಿಯುನೆ (ಕತ್ತಿಯುನ್ನು) ನೋಡಲು ಪರಿವಾರದವರ್ ತಳಮಳಗೊ(ಳು)ತ್ತುಂ, ಜನಿತ ನಿಜಭೀತಿ ಮನಂಗೊಳೆ,

ಕಳವಳಿಸಿ ಚಲಿತ (ಸಿ?) ನಿಲಲ್ ಅಣ್ಮದೆ (ಸಮರ್ಥರಾಗದೆ), ಮೊಕ್ಕಲಂ (ವೆಗ್ಗಳವಾಗಿ, ಒಗ್ಗಾಗಿ ?) ಒಳಗೆ ಸುಟಿದರ್.' 'ತಳಮಳಗೊತ್ತುಂ' ಎಂಬಲ್ಲಿ 'ಳು' ಎಂಬ ವರ್ಣ ಲೋಪವಾಗಿರುವುದರಿಂದ 'ವರ್ಣಚ್ಯುತಕಂ'(?)

ಪದ್ಯ ೧೫೨ : ೧೪೪ನೆಯ ಪದ್ಯದಲ್ಲಿ ಹೇಳಿರುವ 'ಹೇಳಿಕೆ'ಗಳಲ್ಲಿ 'ಸಮಂತಿ'ಯ ಉಲ್ಲೇಖವಿಲ್ಲ. ಅಲ್ಲಿ ಕಡೆಯಲ್ಲಿ ಹೇಳಿರುವ 'ಸುಸಮಸ್ತಕ' ವೇ 'ಸಮಂತಿ'ಯಿರಬಹುದು. ಇದು 'ವಿಗಳಿತರಾಗ'ನಾದ ಮುನಿಯೊಬ್ಬನನ್ನು ವರ್ಣಿಸುವ ಪದ್ಯವೆಂದು ಸೂಚಿತವಾಗುತ್ತದೆ.

ಪದ್ಯ ೧೫೪ : ಈ ಪದ್ಯದಲ್ಲಿ ಕವಿರಾಜಮಾರ್ಗಕಾರನು ತನ್ನ ಗಂಭೀರಶೈಲಿಯ ಅಗ್ಗಳಿಕೆಯನ್ನು ಹೆಮ್ಮೆಯಿಂದ ಬಣ್ಣಿಸಿರುವಂತೆ ಕಾಣುತ್ತದೆ. ಇದು ಶಬ್ದಾಲಂಕಾರ ಪ್ರಕರಣವಾದ್ದರಿಂದ, ಕವಿ ತನ್ನ ಶಾಬ್ದಿಕ ಸಾಮರ್ಥ್ಯವನ್ನು ಕುರಿತು ಹೇಳುವುದು ಉಚಿತವಾಗಿದೆ.

ಬುಧ = ವಿದ್ವಾಂಸ, ಶಬ್ದತತ್ತ್ವಾಂಬುಧಿ = ಶಬ್ದಪ್ರಯೋಗವನ್ನು ಕುರಿತ ಶಾಸ್ತ್ರವೆಂಬ ಸಮುದ್ರ. ವೀಚಿಮಾಲೆ = ಅಲೆಗಳ ಮಾಲೆ. ವಿಧುರಗತಿ = ಚಂಚಲವಾದ ಚಲನೆ. ವಿಲೋಢ್ಯ = ಕಲಕಿದ.

'ವಾಗಧಿಪ' = ವಾಕ್ ಪ್ರಭುತ್ವವುಳ್ಳವನು. ಇದು ಮಾರ್ಗಕಾರನ ಬಿರುದಾಗಿರಬಹುದು.

ಪದ್ಯ ೧೫೫ : ಈ ಪದ್ಯದಲ್ಲಿಯೂ ಕೂಡ ಕವಿ ಸ್ವವಿಷಯವನ್ನು ಹೇಳಿಕೊಂಡಿದ್ದಾನೆ. ಕವಿರಾಜಮಾರ್ಗದ ಕರ್ತೃತ್ವವಿಚಾರ ನಿರ್ಣಯದಲ್ಲಿ ಇದು ಅತ್ಯಂತ ಪ್ರಮುಖವಾದ ಪದ್ಯ.

"ಶ್ರೀ ವಿಜಯ ಪ್ರಭೂತ ಮುದಮಂ ತನಗಾಗಿಸಿದೊಂ ಕವೀಶ್ವರಂ".

ಪಾಠಕರ ಮುದ್ರಣದ ಪ್ರತಿಯಲ್ಲಿಯೂ ಮದ್ರಾಸು ಮುದ್ರಣದ ಪ್ರತಿಯಲ್ಲಿಯೂ ಮೇಲೆ ಕೊಟ್ಟಿರುವ ಚರಣದ ಪಾಠವು ಒಂದೇ ರೀತಿಯಾಗಿದೆ. ಬೇರೆಯ ಪಾಠಗಳಾವುವೂ ಇಲ್ಲ. ಹೀಗಿರುವಲ್ಲಿ ಮದ್ರಾಸು ಮುದ್ರಣದ ಸಂಪಾದಕರು ತಾವು ಅಂಗೀಕರಿಸಿರುವ ಪಾಠವನ್ನೇ ತಮ್ಮ ಪೂರ್ವನಿಶ್ಚಿತ ಸಿದ್ಧಾಂತಕ್ಕೆ ಅನುಕೂಲವಾಗುವಂತೆ –

'ಶ್ರೀವಿಜಯ ಪ್ರಭುತಮನಿದಂ ತನಗಾಗಿಸಿದೊಂ ಕವೀಶ್ವರಂ' ಎಂಬುದಾಗಿ ಮಾರ್ಪಡಿಸಿಕೊಂಡಿರುವುದು ನಿರಾಧಾರವಾಗಿಯೂ ಆಶ್ಚರ್ಯಕರವಾಗಿಯೂ ಕಾಣುತ್ತದೆ.

(ಈ ಪದ್ಯಭಾಗದ ಆಧಾರದ ಮೇಲೆ ಅವರುಗಳು, 'ಕವೀಶ್ವರನೆಂಬುವನು ಶ್ರೀವಿಜಯಕರ್ತೃಕವಾದ ಈ ಗ್ರಂಥವನ್ನು ತನ್ನ ಪ್ರಯೋಜನಕ್ಕಾಗಿ ಉಪಯೋಗಿಸಿಕೊಂಡನು' ಎಂದು ಅರ್ಥ ಮಾಡಿದ್ದಾರೆ.)

ದಿವಂಗತ ಮುಳಿಯ ತಿಮ್ಮಪ್ಪಯ್ಯನವರಾದರೋ ತಮ್ಮ 'ಕವಿರಾಜಮಾರ್ಗ ವಿವೇಕ' (ಭಾಗ–೧)ದಲ್ಲಿ ಈ ಪದ್ಯದ ತಾತ್ಪರ್ಯವನ್ನು ಹೀಗೆ ಗ್ರಹಿಸಿದ್ದಾರೆ: 'ದ್ವಿತೀಯ ಪರಿಚ್ಛೇದಾಂತ್ಯದಲ್ಲಿ ಆ 'ಕವಿಪ್ರಕರ'ದೊಳಗೆ ವಿಶಿಷ್ಟವಾದ ಆಗಿನ ಕಾಲದ ಯಾರೋ ಒಬ್ಬ ಕವೀಶ್ವರನು, ಈ ಶ್ರೀವಿಜಯ ಗ್ರಂಥದಿಂದ ಒದಗಿದ ಆನಂದವನ್ನು ಸ್ವೀಕರಿಸಿದನು ಎಂಬ ಅಂಶವನ್ನು 'ಶ್ರೀವಿಜಯ ಪ್ರಭೂತ ಮುದಮಂ ತನಗಾಗಿಸಿದೊಂ ಕವೀಶ್ವರಂ' ಎದು ಸಾರಿದ್ದಾನೆ. ಬಹುಶಃ ನೃಪತುಂಗನ ಮಹಾಸಭೆಯೊಳಗಿನ ಕವೀಶ್ವರನೊಬ್ಬನು ಈ ಲಕ್ಷಣ ಗ್ರಂಥದಿಂದ ವಿಶೇಷವಾಗಿ ಆನಂದಗೊಂಡು ತದನುಸಾರವಾಗಿ ಒಂದು ಕಾವ್ಯವನ್ನು ಬರೆದಿರಬೇಕು. ಪ್ರಥಮ ಪರಿಚ್ಛೇದಾಂತ್ಯದಲ್ಲಿ ಗ್ರಂಥಕಾರನು ತಾನೆಸಗಿದ ಪ್ರಾರ್ಥನೆ ಸಫಲವಾಗಲಾರಂಭಿಸಿತು ಎಂಬುದನ್ನೇ ದ್ವಿತೀಯ ಪರಿಚ್ಛೇದಾಂತ್ಯದಲ್ಲಿ ಈ ರೀತಿಯಲ್ಲಿ ಸೂಚಿಸಿರಲೂಬಹುದು."

ನಮ್ಮ ಅಭಿಪ್ರಾಯದಲ್ಲಿ ತಿಮ್ಮಪ್ಪಯ್ಯನವರ ಅರ್ಥವಿವೇಚನೆಯೂ ಸಮಂಜಸವಾಗಿ ಕಂಡುಬರುವುದಿಲ್ಲ.

ಮೇಲ್ಕಂಡ ಪದ್ಯಭಾಗದ ಸರಿಯಾದ ಅರ್ಥನಿರ್ಣಯವಾಗಬೇಕಾದರೆ ಇಡಿಯ ಪದ್ಯವನ್ನು ಗಮನದಲ್ಲಿರಿಸಿಕೊಂಡು ಸೂಕ್ಷ್ಮವಾಗಿ ಪರಿಶೀಲಿಸಬೇಕು. ಅಂತಹ ಪರಿಶೀಲನೆಯನ್ನು ಇಲ್ಲಿ ಮಾಡಲು ಪ್ರಯತ್ನಿಸಿದೆ :

ಈ ಪದ್ಯದಲ್ಲಿ 'ಕವೀಶ್ವರಂ' ಎಂಬುದು ಕರ್ತೃಪದ : ಇದಕ್ಕೆ ಅನ್ವಯವಾಗುವ ಕ್ರಿಯಾಸೂಚಕ ಪದಗಳೆಂದರೆ 'ಭಾವಿಸಿ', 'ಕುಜಿಕೊಂಡು', 'ಬಗೆದು ನೋಡಿ' ಇವು ; ಇವೆಲ್ಲ ಭೂತಕೃದಂತಗಳು. ಮುಖ್ಯಕ್ರಿಯೆಯನ್ನು ಸೂಚಿಸುವ (ಕೃಲ್ಲಿಂಗ) ಪದವೆಂದರೆ 'ತನಗಾಗಿಸಿದೊಂ' (=ತನಗಾಗಿಸಿದವನು); ಇದರ ಕರ್ಮಪದ, 'ಶ್ರೀವಿಜಯ ಪ್ರಭೂತಮುದಮಂ' (= ಶ್ರೀವಿಜಯ ರಚಿತ ಕವಿರಾಜಮಾರ್ಗದಿಂದ ದೊರಕುವ ಸಂತೋಷವನ್ನು). 'ಇಂಥ ಒಂದು ಸಂತೋಷವನ್ನು ತನಗೆ ಒದಗಿಸುವವನೇ ಕವೀಶ್ವರ ಎಂದರೆ ಕವಿಶ್ರೇಷ್ಠ' ಎಂದು

ಕವಿರಾಜಮಾರ್ಗಕಾರನು ಕರೆ (Challenge) ಕೊಟ್ಟಿದ್ದಾನೆ. (ಈ ಸಂದರ್ಭದಲ್ಲಿ 'ಕವೀಶ್ವರ' ಎಂಬುದು ಅಂಕಿತನಾಮವಾಗದು ; ಕವಿರಾಜಮಾರ್ಗವು ಕವೀಶ್ವರಕೃತ ಎಂಬ ವಾದಕ್ಕೆ ಸಮರ್ಥನೆ ಇಲ್ಲವಾಗುವುದು).

ಪದ್ಯದ ತಾತ್ಪರ್ಯಾರ್ಥ :

'ಶಬ್ದತತ್ತ್ವಕ್ಕೆ ಸಂಬಂಧಪಟ್ಟ (ಅಲಂಕಾರ ವ್ಯಾಕರಣಾದಿ) ಶಾಸ್ತ್ರಸಂಪ್ರದಾಯಗಳನ್ನು ಚೆನ್ನಾಗಿ ಆಲೋಚಿಸಿ ವಿಚಾರಮಾಡಿ, (ಸಂಸ್ಕೃತ ಪ್ರಾಕೃತ ಮುಂತಾಗಿ ಬಲ್ಲ) ಸಮಸ್ತ ಭಾಷಾ ವಿಷಯಕವಾದ ಉಕ್ತಿಗಳನ್ನು ಲಕ್ಷಿಸಿ, ಪ್ರಾಚೀನ ಕವಿಶ್ರೇಷ್ಠರ ಪ್ರಯೋಗಗಳಿಂದ ಸಿದ್ಧವಾದ ಗುಣೋತ್ಕರ್ಷವನ್ನು ಚೆನ್ನಾಗಿ ಆಲೋಚನೆ ಮಾಡಿ, – ಹೀಗೆ, ಶಾಸ್ತ್ರಪ್ರಜ್ಞೆ, ಬಹುಭಾಷಾ ಪಾಂಡಿತ್ಯ ಮತ್ತು ಪೂರ್ವಕಾವ್ಯ ಪರಿಚಯ – ಇವುಗಳಿಂದ ಆಯ್ದ ಗುಣಭಾಗಗಳಿಂದ ರಚಿಸಿದ ಕಾವ್ಯಮೂಲಕವಾಗಿ ಶ್ರೀವಿಜಯನಿಂದ ರಚಿತವಾದ (ಈ) ಕೃತಿಯಿಂದ ಉಂಟಾಗುವ ಸಂತೋಷವನ್ನು ತನಗಾಗಿಸಿದವನು ಕವೀಶ್ವರ (ಕವಿಶ್ರೇಷ್ಠ ಎಂಬ ಪದವಿಗೆ ಅರ್ಹನಾಗುವನು)'.

## ಪರಿಚ್ಛೇದ: ೩ (III)

ಪದ್ಯ ೧ : "ಭಾವಿಸಿ ಬೆಸಸಿದನ್ ಅಖಿಳ ಧರಾವಲ್ಲಭನ್ ಇಂತು ಅಮೋಘವರ್ಷ ನೃಪೇಂದ್ರಂ".

ಪ್ರಸಿದ್ಧಅರ್ಥಾಲಂಕಾರಗಳನ್ನು ಅಮೋಘವರ್ಷ ನೃಪೇಂದ್ರನು ವಿಚಾರಮಾಡಿ ಬೆಸಸಿದನು ಎಂಬುದರಿಂದ ಅಲಂಕಾರ ವಿಚಾರದಲ್ಲಿ ಇದಮಿತ್ಥಂ ಎಂದು ತನ್ನ ನಿರ್ಣಯವನ್ನು ಪ್ರಕಟಪಡಿಸಿದನೆಂದು ತಿಳಿಯಬೇಕು. ನೃಪತುಂಗನೇ ಗ್ರಂಥವನ್ನು ರಚಿಸಿದ್ದರೆ 'ಬೆಸಸಿದನ್' ಎಂದು ಹೇಳುತ್ತಿರಲಿಲ್ಲ.

ಪದ್ಯ ೨–೫ : ಈ ಪದ್ಯಗಳಲ್ಲಿ ಮುಂದೆ ಲಕ್ಷ್ಯ ಲಕ್ಷಣ ನಿದರ್ಶನಪೂರ್ವಕ ವಿವರಿಸಿರುವ ಅರ್ಥಾಲಂಕಾರಗಳ ಹೆಸರುಗಳನ್ನು ಹೇಳಿದೆ. ಅವು ಯಾವುವೆಂದರೆ :

ಜಾತಿ, ರೂಪಕ, ಅರ್ಥಾಂತರ(ವಿ)ನ್ಯಾಸ, ಅತಿರೇಕ, ಯಾಥಾಸಂಖ್ಯ, ದೀಪಕ, ಉಪಮಾ, ಅತಿಶಯ, ಸದೃಶಯೋಗಿತಾ, ಆಕ್ಷೇಪ (೧೦) ; ಶ್ಲೇಷೆ, ಉತ್ಪ್ರೇಕ್ಷೆ, ಸೂಕ್ಷ್ಮ, ವಿಶೇಷ, ಸಮಾಹಿತ, ಸಮಾಸೋಕ್ತಿ, ಪರ್ಯಾಯೋಕ್ತಿ, ವಿರೋಧ, ಅಪ್ರಸ್ತುತ(ಪ್ರಶಂಸೆ), ನಿದರ್ಶನ, ಸಹೋಕ್ತಿ, ಸಂಕೀರ್ಣ (೧೨) ; ಪರಿವೃತ್ತಿ, ವ್ಯಾಜಸ್ತುತಿ, ಹೇತು, ವಿಭಾವನೆ, ಲವ, ಉದಾತ್ತ, ಅಪಹ್ನುತಿ, ರಸವತ್, ಊರ್ಜಿತ, ವ್ಯಾವೃತ್ತಿ, ಪ್ರಿಯತರ, ಆಶಿ (೧೨).

ಮಾರ್ಗಕಾರನು ಇಲ್ಲಿ 'ಪುರಾಣಶಾಸ್ತ್ರೋಕ್ತಂಗಳ್' ಆದ ೩೪ ಅಲಂಕಾರಗಳನ್ನು ಮಾತ್ರ ಉಲ್ಲೇಖಿಸಿದ್ದರೂ, ಪ್ರಕರಣದ ಕಡೆಯಲ್ಲಿ 'ಭಾವಿಕ' ಮತ್ತು 'ಧ್ವನಿ' ಎಂಬ ಎರಡು ಅಲಂಕಾರಗಳನ್ನು ಹೆಚ್ಚಿನವಾಗಿ ಸೇರಿಸಿ ಹೇಳಿದ್ದಾನೆ. (ಅಲಂಕಾರ ನಿರೂಪಣ ಕ್ರಮದಲ್ಲಿ ಮಾರ್ಗಕಾರನು ದಂಡಿಯನ್ನೇ ವಿಶೇಷವಾಗಿ ಅನುಸರಿಸಿದ್ದಾನೆ. ದಂಡಿಯು ಹೇಳುವ ಮೂವತ್ತೈದು ಅಲಂಕಾರಗಳಿಗೆ[೪೨] ಮಾರ್ಗಕಾರನು ೩೬ನೆಯದಾಗಿ 'ಧ್ವನಿ'ಯನ್ನು ಸೇರಿಸಿದ್ದಾನೆ.

---

೪೨. ರನ್ನನು 'ಗದಾಯುದ್ಧ'ದಲ್ಲಿ 'ಪದಿನಾಜಿಲ್ಲವಲಂಕ್ರಿಯಾರಚನೆ ಮೂವತ್ತಾಱು ನೇರ್ಪಟ್ಟುವು' ಎಂದು ಉಲ್ಲೇಖಿಸಿರುವುದನ್ನು ಇಲ್ಲಿ ನೆನೆಯಬಹುದು.

## ೧. ಜಾತಿ

ಪದ್ಯ ೬ : ಪ್ರಪಂಚದ ಎಲ್ಲ ವಸ್ತುಗಳಲ್ಲಿ ಪ್ರತಿಯೊಂದಕ್ಕೂ ಅದರದ್ದೇ ಆದ 'ಸ್ವ–ಭಾವ', ಎಂದರೆ 'ತನ್ನತನ' ಇರುತ್ತದೆ. ಇದೇ ವಸ್ತುಸ್ವಭಾವ. ವಸ್ತು ಎಂದರೆ ಇರತಕ್ಕದ್ದು. ವಸ್ತುವು ಇರುವುದೆಂಬುದು ಅದರ ದ್ರವ್ಯ, ಗುಣ, ಕ್ರಿಯೆಗಳಿಂದ (ನಾಮರೂಪಗಳಿಂದ) ವ್ಯಕ್ತವಾಗುತ್ತದೆ. ಈ ದ್ರವ್ಯ, ಗುಣ, ಕ್ರಿಯೆ ಎಂಬವು ಎಲ್ಲ ವಸ್ತುಗಳಲ್ಲಿಯೂ ಇರತಕ್ಕ 'ಸಾಮಾನ್ಯತೆ' ಅಥವಾ ಸಮಾನಾಂಶಗಳು. ದ್ರವ್ಯ ಗುಣ ಕ್ರಿಯಾ ವಿಹೀನವಾಗಿ ಯಾವ ವಸ್ತುವೂ ಇರಲಾರದು. ಎಲ್ಲ ವಸ್ತುಗಳಿಗೂ ಸಾಮಾನ್ಯವಾದ ಈ 'ಸ್ವಭಾವ'ವನ್ನು (The nature of things in general) 'ಜಾತಿ' ಎಂಬ ಪಾರಿಭಾಷಿಕ ಶಬ್ದದಿಂದ ಇಲ್ಲಿ ವ್ಯವಹರಿಸಲಾಗಿದೆ. ಇದೇ ಪ್ರಕರಣದಲ್ಲಿ 'ಜಾತಿ' ಎಂಬ ಪದವನ್ನು ಬಳಕೆಯಲ್ಲಿರುವ, ಪ್ರಸಿದ್ಧವಾದ, ಬೇರೊಂದು ಅರ್ಥದಲ್ಲಿಯೂ ಬಳಸಲಾಗಿದೆ. ಸಮಾನವಾದ ಸ್ವಾಭಾವಿಕ ಲಕ್ಷಣಗಳುಳ್ಳ ಒಂದು ವರ್ಗದ ವಸ್ತುಗಳನ್ನು ಒಂದು ಜಾತಿ ಎಂದು ಗುರುತಿಸುತ್ತೇವೆ. ಉದಾ., ಮನುಷ್ಯಜಾತಿ, ಪ್ರಾಣಿಜಾತಿ, ಪಕ್ಷಿಜಾತಿ, ಇತ್ಯಾದಿ. ಪಕ್ಷಿಜಾತಿಯಲ್ಲಿ ನವಿಲುಗಳೆಲ್ಲಾ ಒಂದು ಜಾತಿ, ಗಿಳಿಗಳೆಲ್ಲ ಒಂದು ಜಾತಿ. ಹೀಗೆ, ಪ್ರಪಂಚದ ಎಲ್ಲ ವಸ್ತುಗಳ ಜಾತಿ, ಕ್ರಿಯೆ, ಗುಣ, ದ್ರವ್ಯ ಎಂಬೀ ಸ್ವಾಭಾವಿಕ ಗುಣವನ್ನು ವರ್ಣಿಸುವುದು ಒಟ್ಟಿನಲ್ಲಿ ಜಾತ್ಯಲಂಕಾರ. ವಸ್ತುಗಳ ಜಾತಿ, ದ್ರವ್ಯ, ಕ್ರಿಯೆ, ಗುಣಗಳನ್ನು ಅರ್ಥದ ವಕ್ರತೆಯಿಲ್ಲದೆ ಅವು (ಪ್ರತ್ಯಕ್ಷ ಗೋಚರವಾಗಿರುವಂತೆ) ಇರುವಂತೆಯೇ ವರ್ಣಿಸುವುದರಿಂದ ಇವು 'ವಾಸ್ತವಾಲಂಕಾರ'. ವಸ್ತುವಿನ ಸ್ವಭಾವ ವರ್ಣನೆಯಾದ್ದರಿಂದ 'ಸ್ವಭಾವಾಖ್ಯಾನ' ಅಥವಾ 'ಸ್ವಭಾವೋಕ್ತಿ' ಎಂದೂ ಇದನ್ನು ಕರೆಯಲಾಗಿದೆ.[೪೩]

ಈ ಸಂಬಂಧವಾದ ದಂಡಿಯ ಶ್ಲೋಕಗಳು ಇಂತಿವೆ :

---

೪೩. ಭಾರತೀಯ ತರ್ಕ ಮತ್ತು ನ್ಯಾಯಶಾಸ್ತ್ರಗಳಲ್ಲಿ ಈ ಸಂಬಂಧವಾದ ವಿಪುಲವಾದ ಚರ್ಚೆಯನ್ನು ಕಾಣಬಹುದು. ದಂಡಿಯ ಉಕ್ತಿಯಂತೆ, ಶಾಸ್ತ್ರದಲ್ಲಿ ಅದರದ್ದೇ ಪ್ರಭುತ್ವ; ಕಾವ್ಯದಲ್ಲಿ ಅಪೇಕ್ಷಣೀಯವಷ್ಟೆ. ಆದ್ದರಿಂದ ಈ ವಿಷಯದ ವಿವರಣೆಯನ್ನು ಇಲ್ಲಿ ಹೆಚ್ಚು ಬೆಳೆಸಬೇಕಾದದ್ದು ಅನಗತ್ಯ ; ಅಲ್ಲದೆ, ಈ ಗ್ರಂಥದ ಸಂಪಾದಕನಿಗೆ ಅದರಲ್ಲಿ ಪ್ರವೇಶವೂ ಇಲ್ಲ.

ನಾನಾವಸ್ಥಂ ಪದಾರ್ಥಾನಾಂ ರೂಪಂ ಸಾಕ್ಷಾದ್ವಿವೃಣ್ವತೀ ।
ಸ್ವಭಾವೋಕ್ತಿಶ್ಚ ಜಾತಿಶ್ಚೇತ್ಯಾದ್ಯಾ ಸಾಲಂಕೃತಿರ್ಯಥಾ ॥ (II–೮)

ಜಾತಿಕ್ರಿಯಾಗುಣದ್ರವ್ಯ ಸ್ವಭಾವಾಖ್ಯಾನಮೀದೃಶಂ ।
ಶಾಸ್ತ್ರೇಷ್ವಸ್ಕೈವ ಸಾಮ್ರಾಜ್ಯಂ ಕಾವ್ಯೇಷ್ವಪ್ಯೇತದೀಪ್ಸಿತಂ ॥ (II–೧೩)

ಪದ್ಯ ೭ : ಇದು ಜಾತಿಸ್ವಭಾವಾಖ್ಯಾನಕ್ಕೆ ದೃಷ್ಟಾಂತ. ದಂಡಿಕೊಟ್ಟಿರುವ ಗಿಣಿಯ ವರ್ಣನೆಯ ಸ್ಥಾನದಲ್ಲಿ ಮಾರ್ಗಕಾರನು ಮಾಡಿರುವ ನವಿಲಿನ ಕುಣಿತದ ವರ್ಣನೆ ಇದು. ಮಳೆಗಾಲದ ಮೊದಲಿನಲ್ಲಿ ಆ ನವಿಲು ಈ ನವಿಲು ಎನ್ನದೆ ಎಲ್ಲ ನವಿಲುಗಳೂ ಕುಣಿಯುತ್ತ ಸೊಗಸಾಗಿ ಕಾಣುವುವಾದ್ದರಿಂದ, ಒಟ್ಟು ನವಿಲಿನ ಜಾತಿಯ ಸ್ವಭಾವದ ವರ್ಣನೆಯಿದು. (ಪಯೋದಾಗಮದಲ್ಲಿ ನವಿಲು ಕೇಗುತ್ತ ಜಾಗರವಾಡುತ್ತ ನಲಿಯುವುದು 'ವಾಸ್ತವ'ವೇ ಎಂಬ ಪ್ರಶ್ನೆಗೆ, ಅದು 'ಕವಿಸಮಯ' ಎಂಬುದೇ ಉತ್ತರ). ಆದ್ದರಿಂದಲೇ ನವಿಲು ಎಂಬ ಏಕವಚನದ ಪ್ರಯೋಗ. ಕನ್ನಡ ವ್ಯಾಕರಣದಲ್ಲಿ ಇದು ಜಾತ್ಯೇಕವಚನ ಎಂದು ಪ್ರಸಿದ್ಧವಾಗಿದೆ.
ಅಪಾಂಗ = ಕಡೆಗಣ್ಣನೋಟ. ಕೇಕಾರವ ಮುಖರಂ = ಕೇಗುವ ಧ್ವನಿಯ ಅನುರಣದಿಂದ ಕೂಡಿದ. ಹರಿತ ಶಾಬಲಾಂಕ ಕಲಾಪ = ಹಸುರು ಬಣ್ಣದ ಗುರುತುಗಳ (ಕಣ್ಣುಗಳ)ಗರಿಯ (ಸೋಗೆಯ) ಅಣಿಪಾಡು (ಜಾಗರ). ಗಳ = ಕೊರಳು. ನವಿಲಾಟಂ = (ನವಿಲ + ಆಟಂ ; ಆಟ = ಕುಣಿತ, ನರ್ತನ).

ಪದ್ಯ ೮ : ತನ್ನ ಹೆಣ್ಣಾನೆಯೊಂದಿಗೆ ಮದನಾವಸ್ಥೆಯಲ್ಲಿರುವ ವನಕರಿ (ಕಾಡಾನೆ)ಯೊಂದರ 'ಕ್ರಿಯೆ'ಯನ್ನು ವರ್ಣಿಸುವ 'ಕ್ರಿಯಾಸ್ವಭಾವಾಖ್ಯಾನ'ದ ದೃಷ್ಟಾಂತವಿದು. ಹೆಣ್ಣಾನೆಯೊಂದಿಗಿರುವ (ಒಂದು) ವನಕರಿಯ ಕೆಲವು ವಿಶಿಷ್ಟ ಕ್ರಿಯೆಗಳನ್ನು ಇಲ್ಲಿ ವರ್ಣಿಸಿದೆ. ಮದನಾವಸ್ಥೆಯಲ್ಲಿರುವ ಎಲ್ಲ ಆನೆಗಳಿಗೂ ಈ ಕ್ರಿಯೆಗಳು ಸಾಮಾನ್ಯವೆನಿಸವು ; ಎಲ್ಲವೂ ತಮ್ಮ ಹೆಣ್ಣಾನೆಯೊಂದಿಗಿರಬೇಕಾಗಿಲ್ಲ ; ಆದ್ದರಿಂದ, 'ಒಂದು' ಎಂಬ ಸಂಖ್ಯಾಪದವಿಲ್ಲದಿದ್ದರೂ ಇದು ಒಂದು ಆನೆಯ ಕ್ರಿಯೆಗಳೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ, ಇಲ್ಲಿ 'ವನಕರಿ' ಜಾತಿಸೂಚಕವಲ್ಲ. ಅಲ್ಲದೆ, ವರ್ಣಿತವಾದ ಕ್ರಿಯೆಗಳೆಲ್ಲ ಗಜಜಾತಿಗೆ ಸ್ವಾಭಾವಿಕವಾದವು. ಆದ್ದರಿಂದ

ಇದು ಕ್ರಿಯಾಸ್ವಭಾವದ ವರ್ಣನೆಯೆನಿಸುತ್ತದೆ.
ಸಲ್ಲಕೀಪಲ್ಲವ = 'ಸಲ್ಲಕೀ' ಎಂಬ, ಆನೆಗಳಿಗೆ ಪ್ರಿಯವಾದ, ಸಸ್ಯದ ಚಿಗುರು. ಕರೇಣು = ಹೆಣ್ಣಾನೆ. ಪೇಚಕ = ಆನೆಯ ಬಾಲದ ತುದಿ. ಆಯತ ಹಸ್ತ = ದೀರ್ಘವಾದ ಸೊಂಡಿಲು.

ಪದ್ಯ ೯ : ಮದಿರಾ (ಮದ್ಯ)ಪಾನಮದದಿಂದ ಒಬ್ಬ ಸ್ತ್ರೀಯ ದೇಹದಲ್ಲಿ ತಲೆದೋರಿದ ಪರಿಣಾಮ 'ಗುಣ'ಗಳನ್ನು ವರ್ಣಿಸುವುದರಿಂದ ಇದು 'ಗುಣಸ್ವಭಾವಾಖ್ಯಾನ'. ಮದಿರಾಪಾನ ಮಾಡಿದವರೆಲ್ಲರಲ್ಲಿಯೂ ಈ ಗುಣಗಳು ಕಂಡುಬರುವುದು ಸ್ವಾಭಾವಿಕ. (ಇದು ದಂಡಿ ಕೊಟ್ಟಿರುವ ಲಕ್ಷ್ಯದ ಸರಳಾನುವಾದ. ಅಲ್ಲಿ 'ಪ್ರಿಯಾಸ್ಪರ್ಶ'ದ ಪರಿಣಾಮವನ್ನು ಬಣ್ಣಿಸಿದರೆ, ಇಲ್ಲಿ 'ಮದಿರಾಮದ'ದ ಪರಿಣಾಮವನ್ನು ಬಣ್ಣಿಸಿದೆ.)
ಆಮೀಳನ = (ಕಣ್ಣೆವೆ) ಮುಚ್ಚುವುದು. ಒಸಗೆ = ಸಂತೋಷ, ಪ್ರೀತಿ. ಕಂಚು = ಕಂಚುಕ ; ತೊಡಪು, ಕುಪ್ಪಸ. ತೆಗಟ್ಟು = ತೊದಲು, ಮಾತಿನ ತಡವಡಿಕೆ.

ಪದ್ಯ ೧೦ : ಲಲಿತವಿಲಾಸಿನಿಯಾದ ಕೋಮಲಾಂಗಿಯೊಬ್ಬಳನ್ನು ಆಕೆಯ ಪ್ರಿಯನು ಬಿಟ್ಟುಬಿಟ್ಟನೆಂದು ತಿಳಿಸುವ ಈ ಪದ್ಯದಲ್ಲಿ, ಆ ಕೋಮಲಾಂಗಿಯ ರೂಪಕಾರಣಗಳಾದ ಬೇರೆ ಬೇರೆ ಅಂಗಗಳನ್ನು ('ದ್ರವ್ಯ') ವರ್ಣಿಸುವುದರಿಂದ, ಇದು 'ದ್ರವ್ಯಸ್ವಭಾವಾಖ್ಯಾನ.'[ೞೞ]
ತಳಮಿತಮಧ್ಯೆ = ಕೆಳಗಡೆ ತೆಳ್ಳನೆಯ ನಡುವುಳ್ಳವಳು. ಆಯತ ವಿಲೋಲಲೋಚನೆ = ವಿಶಾಲವಾದ, ಚಂಚಲವಾದ, ಕಣ್ಣುಳ್ಳವಳು.

## ೨. ರೂಪಕ

ಪದ್ಯ ೧೧ : **ರೂಪಕ** (ಅಲಂಕಾರ) : 'ಪೆಱವಱ' ಎಂದರೆ ವರ್ಣ್ಯವಲ್ಲದ ಬೇರೆಯ (= ಅಪ್ರಕೃತ) ವಸ್ತುಗಳ ರೂಪಾದಿ ಗುಣಗಳನ್ನು ವರ್ಣ್ಯವಾದ ವಿಷಯದಲ್ಲಿ (=ಪ್ರಕೃತ) 'ಅಭೇದೋಕ್ತಿಯಿಂದ' (ಎಂದರೆ, 'ಅದರಂತೆ ಇದು ಇದೆ' ಎನ್ನದೆ 'ಅದೇ ಇದು' ಎನ್ನುವುದು) ರೂಪಿಸುವುದು

ೞೞ ರಾಮನು ಸೀತೆಯನ್ನುಳಿದ ರಾಮಾಯಣಕಥಾ ಸಂಗತಿಯೋ ಇಲ್ಲವೆ ಭೀಷ್ಮನು ಅಂಬೆಯನ್ನುಳಿದ ಭಾರತಕಥಾ ಸಂಗತಿಯೋ, ಈ ಪದ್ಯದ ವರ್ಣ್ಯವಿಷಯ ಎಂದು ಮುಳಿಯ ತಿಮ್ಮಪ್ಪಯ್ಯನವರ ಊಹೆ. ಹಾಗೆ ಊಹಿಸಲು ಪದ್ಯದಲ್ಲಿ ಪ್ರಬಲವಾದ ಆಧಾರವಿಲ್ಲ.

'ರೂಪಕ'. ಉದಾ : ಬಾಹುಲತೆ, ಪಾದಾಂಬುಜ, ಮುಖೇಂದು, ನಯನಾಳಿ. ('ಲತೆಯಂತಿರುವ ಬಾಹು' ಎಂದರೆ ಉಪಮಾಲಂಕಾರವಾಗುವುದು. ಬಾಹು ವರ್ಣ್ಯ ; ಲತೆ ಅವರ್ಣ್ಯ. ಲತೆಯ ರೂಪಗಳನ್ನು ಬಾಹುವಿನಲ್ಲಿ ಆರೋಪಿಸಿ ರೂಪಿಸಿದೆ. ಲತೆಯೇ ಬಾಹು ಎಂದುದರಿಂದ ಎರಡಕ್ಕೂ ಅಭೇದವನ್ನು ಕಲ್ಪಿಸಲಾಗಿದೆ.) (ಬಾಹುಲತೆ, ಪಾಣಿಪದ್ಮ ಇವು ದಂಡಿ ಕೊಟ್ಟಿರುವ ಉದಾಹರಣೆಗಳು.)

ಪದ್ಯ ೧೩ : **ಸಮಸ್ತರೂಪಕ** : 'ಸಮಸ್ತಾಶ್ರಿತಂ ಸಮಸ್ತಂ' – ಸಮಾಸದಮೂಲಕ ಪ್ರಕೃತಾಪ್ರಕೃತಗಳು ರೂಪಣಗೊಂಡಿರುವುದರಿಂದ ಇದು 'ಸಮಸ್ತ ರೂಪಕ'ದ ದೃಷ್ಟಾಂತ. ಸ್ಮಿತಕುಸುಮ (ನಗೆಹೂವು), ಅಧರಪಲ್ಲವ (ತುಟಿಚಿಗುರು), (ಅತಿಶಯ) ನಯನಾಳಿ (ಕಣ್ದುಂಬಿ), ಬಾಹುಶಾಖೆ (ತೋಳ್ಗವಲು), ಕಾಂತಾಲತೆ (ಪೆಣ್ಬಳ್ಳಿ) – ಇವೆಲ್ಲ ಸಮಸ್ತಪದಘಟಿತ ರೂಪಕಗಳು. (ದಂಡಿಯ ಲಕ್ಷ್ಯಪದ್ಯಗಳನ್ನು – II, ೬೭–ಮಾರ್ಗಕಾರನು ಸ್ವಲ್ಪ ಮಾರ್ಪಾಟು ಮಾಡಿಕೊಂಡಿದ್ದಾನೆ.)

ಪದ್ಯ ೧೪ : **ವ್ಯಸ್ತ ರೂಪಕ** : 'ಅಸಮಸ್ತಂ ವ್ಯಸ್ತ ರೂಪಕಂ' – ಸಮಾಸಪದ ಘಟಿತವಲ್ಲದ್ದು ವ್ಯಸ್ತರೂಪಕ. ಮೇಲೆ ಕೊಟ್ಟಿರುವ ಸಮಸ್ತ ರೂಪಕಗಳನ್ನೆ ಇಲ್ಲಿ ವ್ಯಸ್ತಮಾಡಿ, ಎಂದರೆ ಸಮಾಸವನ್ನು ಬಿಡಿಸಿ, ಕೊಟ್ಟಿದೆ. ('ಸ್ಮಿತಕುಸುಮಂ' ಎಂಬುದನ್ನು 'ಸ್ಮಿತವೆ ಕುಸುಮ' ಎಂದು ಮುಂತಾಗಿ). ವಿಟಪ = ಕೊಂಬೆ, ಕವಲು. ಅಸುವಲ್ಲಭೆ = ಪ್ರಾಣವಲ್ಲಭೆ.

ಪದ್ಯ ೧೫ : **ಸಾವಯವ ರೂಪಕ** : 'ಅವಯವ ನಿರೂಪಣಕ್ರಮದಿಂ ಅವಯವಂ'. ಕಾಂತೆ ಅವಯವಿ, ಎಂದರೆ ಅವಯವವುಳ್ಳವಳು. ಅವಳನ್ನು 'ಲತೆ' ಎಂದು ರೂಪಕ ಮಾಡದೆ, ಅವಳ ಅವಯವಗಳನ್ನು ಮಾತ್ರ (ಅಧರಪಲ್ಲವೆ = ತುಟಿ ಚಿಗುರುಳ್ಳವಳು, ಲೋಚನ ಕುಸುಮೆ = ಕಣ್ಣ ಹೂವುಳ್ಳವಳು, ಇತ್ಯಾದಿಯಾಗಿ) ರೂಪಕ ಮಾಡಿದೆ. (ಕಾಂತೆಯನ್ನು ಲತೆ ಎಂದು ರೂಪಕ ಮಾಡದಿದ್ದರೂ ಅದು ಧ್ವನಿತವಾಗುತ್ತದೆ). ('ಸ್ಫುರಿತಾಧರ ಪಲ್ಲವಂ' ಎಂಬುದು ದಂಡಿಯ ಮಾತು).

ಪದ್ಯ ೧೬ : **ಅವಯವಿ ರೂಪಕ** : ಪದ್ಯದ ಅನ್ವಯಕ್ರಮ : 'ನಿಸ್ನಾತರಳತರ ಲೋಚನಂ (ಚಂಚಲವಾದ ಕಣ್ಣುಳ್ಳ), ನಿರ್ಭರ ರಾಗರಸಂ (ಪೂರ್ಣ ಪ್ರೇಮರಸದಿಂದ ಕೂಡಿದ), ಮುಖಾರವಿಂದಂ ದೊರೆಕೊಳಿಸಿದ ಒಸಗೆ (ಸಂತೋಷ) ಏಂ ಬಂಧುರಂ' ಇಲ್ಲಿ ಮುಖ ಅವಯವಿ

(ಅವಯವಗಳನ್ನುಳ್ಳದು) ; ಅದನ್ನು ಅರವಿಂದ (ತಾವರೆ) ಎಂದು ರೂಪಕ ಮಾಡಿದೆ. ಅದರ ಅವಯವಗಳಾದ ಲೋಚನ ಮತ್ತು ರಾಗರಸಗಳನ್ನು ರೂಪಕ ಮಾಡಿಲ್ಲ ; ಆದರೂ, ಅವು 'ದುಂಬಿ ಮತ್ತು ಮಕರಂದ' ಎಂಬ ಅರ್ಥಗಳು ಧ್ವನಿತವಾಗುತ್ತವೆ.

ಪದ್ಯ ೧೭ : **ವಿಷಮ ರೂಪಕ :** 'ವಿಷಮಿತ ರೂಪ ವಿಷಮರೂಪಕಮಕ್ಕುಂ' ; (ಅಂಗಿಯನ್ನೂ ಅದರ ಅಂಗಗಳನ್ನೂ ರೂಪಣ ಮಾಡುವಾಗ ಅಂಗಿ ಅಂಗಗಳ) ರೂಪಕಗಳಲ್ಲಿ ವಿಷಮತೆ (ಸಮವಲ್ಲದಿರುವಿಕೆ, ಅಸಮತೆ) ಕಂಡುಬಂದರೆ ಅದು 'ವಿಷಮರೂಪಕ.'[೪೫] 'ಮೃದುವಾದ ಕಪೋಲ ಫಲಕವನ್ನುಳ್ಳ, ನೀಳವೂ ಮೇಲೆ ಬಾಗಿದ್ದೂ ಅದಭ್ರೂಚಾಪ (= ಹುಬ್ಬು ಬಿಲ್ಲು) ವನ್ನುಳ್ಳ ವದನಾಂಬುಜವು ನನಗೆ ಮುದವನ್ನುಂಟುಮಾಡಿತು. – ಇದು ದೃಷ್ಟಾಂತ. (ದಂಡಿಯ 'ಮುಖೇಂದು' ಎಂಬ ರೂಪಕ ಇಲ್ಲಿ 'ವದನಾಂಬುಜವಾಗಿದೆ'.) ವದನ ಅಂಗಿ ; ಕಪೋಲ(ಕೆನ್ನೆ) ಮತ್ತು ಭ್ರೂ (ಹುಬ್ಬು) ಅದರ ಅಂಗಗಳು. ಕಮಲಕ್ಕೂ ಫಲಕ ಚಾಪಗಳಿಗೂ ಯಾವ ರೀತಿಯಿಂದ ನೋಡಿದರೂ ಸಂಬಂಧವಿಲ್ಲ ; ಅವು (ಅಂಗಾಂಗಿ ರೂಪಕಗಳು) ಪರಸ್ಪರ ವಿಷಮ.

ಪದ್ಯ ೧೮ : **ವಿಶೇಷಣ ರೂಪಕ :** ಲಕ್ಷ್ಯಪದ್ಯದಲ್ಲಿ 'ವಿನಿಶ್ಚಿತ ವಿಶೇಷಣೋರು ರೂಪಕಂ' ಎಂದು ನಿರ್ದೇಶಿಸಿರುವುದರಿಂದ, ಇದು ವಿಶೇಷಣ ರೂಪಕಕ್ಕೆ ದೃಷ್ಟಾಂತವೆಂದು ಭಾವಿಸಬೇಕು. ಆದರೆ, ವಾಸ್ತವವಾಗಿ, ಈ ಪದ್ಯದಲ್ಲಿ: 'ಜಿನಚರಣನಖಾದರ್ಶಂ' ಎಂದು ವಿಶೇಷ್ಯವು ರೂಪಕವಾಗಿದೆ ; ವಿಶೇಷಣವು ರೂಪಣಗೊಂಡಿಲ್ಲ. ಇಲ್ಲಿನ ಪದ್ಯಕ್ಕೆ ಸಂವಾದಿಯಾದ

---

೪೫. ದಂಡಿಯ ಲಕ್ಷಣಲಕ್ಷ್ಯ ಸಮನ್ವಯ ಭಿನ್ನವಾಗಿದೆ :

ರೂಪಣಾದಂಗಿನೋಂಗಾನಾಂ ರೂಪಣಾರೂಪಣಾಶ್ರಯಾತ್ ।
ರೂಪಕಂ ವಿಷಮಂ ನಾಮ ಲಲಿತಂ ಜಯತೇ ಯಥಾ ॥
ಮದರಕ್ತ ಕಪೋಲೇನ ಮನ್ಮಥಸ್ತ್ವನ್ಮುಖೇಂದುನಾ ।
ನರ್ತಿತಭ್ರೂಲತೇನಾಲಂ ಮರ್ದಿತುಂ ಭುವನತ್ರಯಂ ॥ (II–೭೯,೮೦)

ಮಾರ್ಗಕಾರನ ಲಕ್ಷಣ ನಿರೂಪಣೆ ದಂಡಿಯದರಷ್ಟು ವಿಶದವಾಗಿಲ್ಲ. ಅಂಗಿಯನ್ನು ರೂಪಣ ಮಾಡಿ, ಅಂಗಗಳಲ್ಲಿ ರೂಪಣ, ಆರೂಪಣ ಎರಡೂ ಇದ್ದರೆ, ಅದು ವಿಷಮ. ಲಕ್ಷ್ಯದಿಂದ ಇದು ಸ್ಪಷ್ಟ.

ದಂಡಿಯ ಶ್ಲೋಕದಲ್ಲಿ 'ವಿಶೇಷಣಸಮಗ್ರ'ವೂ ರೂಪಕವಾಗಿರುವುದರಿಂದ, ಇಲ್ಲಿಯೂ ಹಾಗೆಯೇ ಇರಬೇಕು. ಆದ್ದರಿಂದ, ಈ ಭಾಗದ ಪಾಠದಲ್ಲಿ ಪ್ರತಿಕಾರನ ಲೇಖನಸ್ಖಾಲಿತ್ಯ ನಿಮಿತ್ತ ದೋಷವುಂಟಾಗಿರಬಹುದೆಂದು ಶಂಕಿಸಿ, 'ವಿನತಾಮರರಾಜ ರಾಜವದನಪ್ರತಿಮಂ' ಎಂಬುದನ್ನು 'ವಿನತಾಮರರಾಜ ವದನರಾಜಪ್ರತಿಮಂ' (ನಮಸ್ಕರಿಸುವ ದೇವೇಂದ್ರನ ಮುಖಚಂದ್ರನ ಬಿಂಬವುಳ್ಳ) ಎಂಬುದಾಗಿ ತಿದ್ದಿಕೊಂಡರೆ ದೋಷ ಪರಿಹಾರವಾಗುವುದೆಂದು ಮುಳಿಯ ತಿಮ್ಮಪ್ಪಯ್ಯನವರು ಸೂಚಿಸಿದ್ದಾರೆ. ಈ ತಿದ್ದುಪಾಟು ಸಾಧುವಾಗಿ ಕಂಡುಬರುತ್ತದೆ. (ಇದರಿಂದ ಯತಿನಿಯಮಕ್ಕೂ ಭಂಗಬರುವುದಿಲ್ಲ).

ಈ ಲಕ್ಷ್ಯಪದ್ಯದಲ್ಲಿ ಇನ್ನೊಂದು ಗಮನಾರ್ಹ ಸಂಗತಿ ಅಡಗಿದೆ. ದಂಡಿಯ ವಿಷ್ಣುಪರವಾದ ಸ್ತುತಿಯನ್ನು ಮಾರ್ಗಕಾರನು ಜಿನಸ್ತುತಿಯನ್ನಾಗಿ ಮಾರ್ಪಡಿಸಿದ್ದಾನೆ.

ದಂಡಿಯ ಶ್ಲೋಕ

ಹರಿಪಾದಶ್ಶಿರೋಲಗ್ನ ಜಹ್ನುಕನ್ಯಾಜಲಾಂಶುಕಃ ।
ಜಯತ್ಯಸುರನಿಶ್ಶಂಕ ಸುರಾನಾಂದೋತ್ಸವಧ್ವಜಃ ॥ – II, ೮೧

(ಇಲ್ಲಿ 'ಹರಿಪಾದ... ಜಲಾಂಶುಕ'ವು 'ಧ್ವಜ'ಕ್ಕೆ ವಿಶೇಷಣವಾಗಿದ್ದು ರೂಪಕವಾಗಿದೆ.)

'ಹರಿಪಾದವು' ಮಾರ್ಗಕಾರನ ಲಕ್ಷ್ಯದಲ್ಲಿ ಜಿನಚರಣವಾಗಿ ಮಾರ್ಪಟ್ಟಿದೆ. ಇದು ಮಾರ್ಗಕಾರನು ಜೈನನಾಗಿದ್ದಿರಬಹುದೆಂಬುದಕ್ಕೆ ಒಂದು ಆಂತರಿಕ ಪ್ರಮಾಣ. ಇಂಥ ನಿದರ್ಶನಗಳು ಗ್ರಂಥದಲ್ಲಿ ಇನ್ನೂ ಕೆಲವಿವೆ.

ನಖಾದರ್ಶ = ಉಗುರುಕಣ್ಣೆಂಬ ಕನ್ನಡಿ.

ಪದ್ಯ ೧೯ : **ವಿರುದ್ಧ ರೂಪಕ :** ಈ ಲಕ್ಷ್ಯದ ಪೂರ್ವಭಾಗವು ದಂಡಿಯ ದೃಷ್ಟಾಂತ ಭಾಗದ ಅನುವಾದ. 'ನಿನ್ನ ಮುಖೇಂದು ಬಿಂಬವು ಇಂದುವಿಗೆ ಸಮ ; (ಆದರೂ) ಕಮಲಾಕರದಲ್ಲಿ ಸಂಕೋಚವನ್ನೂ ಚಕ್ರವಾಕದಲ್ಲಿ (ವಿಯೋಗ ಮೂಲಕ) ದುಃಖವನ್ನೂ ಉಂಟುಮಾಡುವುದಿಲ್ಲ'. – ಇದು ತಾತ್ಪರ್ಯ. ಮುಖಚಂದ್ರ ಚಂದ್ರನಿಗೆ ಸಮವಾದರೂ ಅದರ ಕಾರ್ಯ ಮಾತ್ರ ಚಂದ್ರನ ಕಾರ್ಯಕ್ಕೆ ವಿರುದ್ಧವಾಗಿದೆ. ದಂಡಿಯಪ್ರಕಾರ, ಬೇರೆಯ ಕಾರ್ಯವನ್ನು ಮಾಡುವುದೆಂದು ವರ್ಣಿಸಿದರೂ ವಿರುದ್ಧರೂಪಕ. ('ಅಕ್ರಿಯಾ ಚಂದ್ರ ಕಾರ್ಯಾಣಾಂ ಅನ್ಯಕಾರ್ಯಸ್ಯ ಚ ಕ್ರಿಯಾ).

ಪದ್ಯ ೨೦ : **ಹೇತುರೂಪಕ :** ಇದು ಒಬ್ಬ ರಾಜನ (ನೃಪತುಂಗನ ?) ಗುಣಗಳ ವರ್ಣನೆ. 'ಗೌರವ ಹೇತುವಿನಿಂದ (ಕಾರಣದಿಂದ) ನೀನು ಕುಲಪರ್ವತ; ಸ್ಥೈರಣೆಯ ಕಾರಣದಿಂದ ನೀನು ನೆಲ ; ಶಾಂತಿಯ ಕಾರಣದಿಂದ ಚಂದ್ರ ; ಗುಣ್ಪಿನ (ಗುಣ್ಪು = ಗಂಭೀರತೆ, ಅಗಾಧತೆ) ನಿಮಿತ್ತದಿಂದ ಸಮುದ್ರ'. (ದಂಡಿಯ ಲಕ್ಷ್ಯ ಪದ್ಯದ ಕಲ್ಪವೃಕ್ಷದ ರೂಪಕಡೆಯಲ್ಲಿ ಇಲ್ಲಿ ನೆಲ ಮತ್ತು ಚಂದ್ರನ ರೂಪಕಗಳು ಬಂದಿವೆ). ವರ್ಣ್ಯ ವ್ಯಕ್ತಿಯನ್ನು ಕುಲಗಿರಿ ಇತ್ಯಾದಿಯಾಗಿ ರೂಪಕ ಮಾಡಲು ಅವುಗಳಲ್ಲಿನ ಗುಣಗಳು ಇವನಲ್ಲಿಯೂ ಇರುವುದೇ ಕಾರಣ (ಹೇತು)ವಾದದ್ದರಿಂದ ಇದು ಹೇತುರೂಪಕ. (ಗೌರವ, ಗುಣ್ಪು – ಈ ಪದಗಳ ಪ್ರಯೋಗದಲ್ಲಿ ಶ್ಲೇಷೆಯೂ ಕಾಣಿಸಿಕೊಂಡಿದೆ). (ಮುಂದೆ ವಿವರಿಸಿರುವ 'ಹೇತು' ಎಂಬ ಅಲಂಕಾರವನ್ನು ಇದರೊಂದಿಗೆ ಹೋಲಿಸಿ).

ಪದ್ಯ ೨೧ : **ಶ್ಲೇಷರೂಪಕ :** ರೂಪಕಗಳು ಶ್ಲೇಷಾರ್ಥಗಳಿಂದ ಕೂಡಿರುವುದು ಶ್ಲೇಷರೂಪಕ. (ಈ ಪದ್ಯವೂ ಒಬ್ಬ ರಾಜನನ್ನು, ಬಹುಶಃ ನೃಪತುಂಗನನ್ನು, ವರ್ಣಿಸುವ ಪದ್ಯ) "ಉದಾರನಾದ ನಿನ್ನ ವಿಮಳ ಯಶೋವಿಧು (ನಿರ್ಮಲವಾದ ಕೀರ್ತಿಚಂದ್ರ) : 'ಕುಮುದಾನಂದನಕರ = ೧ (ಕುಮುದ + ಆನಂದನ + ಕರ) ನೈದಿಲೆಗಳಿಗೆ ಆನಂದವುಂಟು ಮಾಡುವ ಕಿರಣಗಳುಳ್ಳದ್ದು : ಚಂದ್ರ ; (ಕು + ಮುದ + ಆನಂದ + ಕರ) ಭೂಮಿಗೆ ಸಂತೋಷ ಆನಂದಗಳನ್ನು ಉಂಟುಮಾಡುವವನು : ರಾಜ. 'ಕಮಲಾಕರರಾಗಹರಂ' = ೧. (ಕಮಲ + ಆಕರ + ರಾಗ + ಹರಂ) ಪದ್ಮಾಕರಗಳ (ತಾವರೆ ಹೂಗಳ ಸಮೂಹಕ್ಕೆ) ಪ್ರೀತಿಯನ್ನು (=ಸಂತೋಷವನ್ನು ) ಹೋಗಲಾಡಿಸುವುದು : ಚಂದ್ರ ; ೨ (ಕಮಲಾ + ಕರ + ರಾಗಹರಂ) ಶ್ಲೇಷ್ಠ ಸ್ತ್ರೀ ಉಂಟುಮಾಡುವ ಪ್ರೇಮವನ್ನು ಅಪಹರಿಸತಕ್ಕವನು ; ರಾಜ. ('ಕಾವ್ಯಾದರ್ಶ'ದ 'ಮುಖಾಂಬುಜ'ವು ಇಲ್ಲಿ 'ಯಶೋವಿಧು'ವಾಗಿದೆ).

ಪದ್ಯ ೨೨ : **ವಿಭಿನ್ನ ರೂಪಕ :** ಭಿನ್ನ ಗುಣಗಳು ಭಿನ್ನ ರೂಪಕಗಳ ಮೂಲಕ ಏಕತ್ರ ಇರುವಂತೆ ನಿರೂಪಿಸುವ ರೂಪಕ. (ಈ ಪದ್ಯದಲ್ಲಿ ರಾಜನೊಬ್ಬನ ಪರಾಕ್ರಮದ ವರ್ಣನೆಯಿದೆ). "(ನಿನ್ನ) ಪರಾಕ್ರಮವೆಂಬ ಪರಮ ಉದಯ ರವಿಯ ಗಗನವು ಪರಿಚಿತ ಸನಾಭಿಗಳ (=ಬಂಧುಗಳ) ರಾಗಾಂಕುರಕ್ಕೆ (=ಪ್ರೀತಿಯೆಂಬ ಮೊಳಕೆಗೆ) ಜಲಸೇಚವಾಗಿಯೂ (=

ಹೊಯ್ನೀರಾಗಿಯೂ), ವಿರೋಧಿ (=ಶತ್ರು)ಗಳೆಂಬ ತರು (=ಮರ)ಗಳಿಗೆ ದವದಹನವಾಗಿಯೂ (=ಕಾಡುಗಿಚ್ಚಾಗಿಯೂ) ಇದೆ". ಭಿನ್ನವಸ್ತುಗಳಾದ ಮಳೆಯೂ ಸಿಡಿಲೂ ಆಕಾಷದಿಂದಲೇ ಬರುವಂತೆ, ಕಾಪಾಡುವ ನೀರಿನ ಗುಣ ಹಾಗೂ ನಾಶಮಾಡುವ ಅಗ್ನಿಯಗುಣ ಎರಡೂ ರಾಜನಲ್ಲಿವೆ. (ಈ ಅಲಂಕಾರವು ಈ ಹಿಂದೆ ಹೇಳಿದ 'ವಿಷಮರೂಪಕ' ಹಾಗೂ 'ವಿರುದ್ಧರೂಪಕ' – ಇವುಗಳನ್ನು ಹೋಲುತ್ತದೆ).

ಪದ್ಯ ೨೩ : **ರೂಪಕೋರು ರೂಪಕ** (ಅಥವಾ ರೂಪಕ ರೂಪಕ) : ಒಂದು ರೂಪಕದಲ್ಲಿ ಮತ್ತೊಂದನ್ನು ಅಂತರ್ಗತಗೊಳಿಸುವುದು. "ವದನಾಂಬುಜ ರಂಗದಲ್ಲಿ (ಮುಖವೆಂಬ ಕಮಲ ; ಮುಖಕಮಲವೆಂಬ ರಂಗ), ಈ ಮದಾಲಸ ಭ್ರೂಲತಾ ವಿಲಾಸಿನಿ (ಮದಾಲಸಳಾದ ಭ್ರೂ, ಎಂದರೆ ಹುಬ್ಬು ; ಭ್ರೂಲತೆ, ಎಂದರೆ ಹುಬ್ಬೆಂಬ ಬಳ್ಳಿ ; ಭ್ರೂಲತಾ ವಿಲಾಸಿನಿ, ಎಂದರೆ ಭ್ರೂಲತೆಯೆಂಬ ವಿಲಾಸವತಿಯಾದ ಹೆಂಗಸು) ಲೀಲಾಸ್ಪದವಾದ ನೃತ್ಯವನ್ನು ಆಗಿಸುತ್ತದೆ." (ಮುಖದಲ್ಲಿ ಹುಬ್ಬು ಕುಣಿಯುತ್ತಿದೆ ಎಂದು ತಾತ್ಪರ್ಯ).

ಈ ಪದ್ಯ ಪೂರ್ತಿಯಾಗಿ ದಂಡಿಯ ಶ್ಲೋಕದ ಅನುವಾದ :

ಮುಖಪಂಕಜರಂಗೇಽಸ್ಮಿನ್ ಭ್ರೂಲತಾನರ್ತಕೀ ತವ ।
ಲೀಲಾನೃತ್ತಂ ಕರೋತೀತಿ ರಮ್ಯಂ ರೂಪಕ ರೂಪಕಂ ॥ – II, ೯೩

('ರೂಪಕರೂಪಕ ರಮ್ಯವಾದ ಅಲಂಕಾರ'.)

ಪದ್ಯ ೨೪ : **ರೂಪಕಾಪಹ್ನುತಿ :** "ಇದು ವದನವಲ್ಲ, ಕಮಲ ; ಇವು (ಮದದಿಂದ ಚಂಚಲಗಳಾದ) ಕಣ್ಣುಗಳಲ್ಲ, ದುಂಬಿಗಳು ; ಇದು (ಮುಖದ) ಸಂತೋಷವಲ್ಲ, ವಿಕಸನ (ಅರಳುವಿಕೆ)" – ಎಂಬುದಿದು ರೂಪಕಾಪಹ್ನುತಿ. ಇರುವುದನ್ನು ಅಲ್ಲಗಳೆದು ಅದನ್ನು ಇನ್ನೊಂದಾಗಿ ರೂಪಣಮಾಡುವುದು ರೂಪಕಾಪಹ್ನುತಿ. (ಅಪಹ್ನುತಿ ಎಂದರೆ ಅಲ್ಲವೆನ್ನುವುದು). 'ಇದು ಮುಖವಲ್ಲ, ಕಮಲ' ಎಂದುದರಿಂದ ಕಮಲದ ಗುಣವು ಮುಖದಲ್ಲಿ ರೂಪಣಗೊಂಡು, ಮುಖದ ಗುಣೋತ್ಕರ್ಷವಾಗುವುದು. ('ಅಪಹ್ನುತಿ' ಎಂಬ ಸ್ವತಂತ್ರವಾದ ಬೇರೆಯ ಅಲಂಕಾರವೂ ಇದೆ : ಪದ್ಯ ೧೮೨ ನೋಡಿ). (ಇದೂ ಬಹುಮಟ್ಟಿಗೆ ದಂಡಿಯ ಲಕ್ಷ್ಯದ ಅನುವಾದ).

ಪದ್ಯ ೨೫ : **ಯುಕ್ತರೂಪಕ** : "ಮುಖವೆಂಬ ಕಮಲಪುಷ್ಪದಲ್ಲಿನ ನಗೆಯೆಂಬ

ವಿಕಾಸವು (=ಅರಳು) ಸೊಗಸುವುದರಲ್ಲಿ ಕಣ್ಣುಗಳೆಂಬ ತುಂಬಿಗಳು ಸಂತೋಷದಿಂದ ಸುಳಿಯುತ್ತಿವೆ.'' ಎಂಬಲ್ಲಿ, ರೂಪಕಗಳಿಗೆ ಪರಸ್ಪರ (ವಿರುದ್ಧವಲ್ಲದ) ಸಾಂಗತ್ಯ (=ಹೊಂದಿಕೆ, ಯುಕ್ತತೆ) ವಿರುವುದರಿಂದ ಇದು ಯುಕ್ತರೂಪಕ. (ದಂಡಿಯ ಲಕ್ಷ್ಯದಲ್ಲಿಯಂತೆ ಇಲ್ಲಿಯೂ 'ಮುಖಾಂಬುಜ' ಇತ್ಯಾದಿಯಾಗಿ ಸಮಾಸಯುಕ್ತ ರೂಪಕಗಳಿದ್ದಿದ್ದರೆ ಮೇಲಾಗಿರುತ್ತಿತ್ತು).

ಪದ್ಯ ೨೬ : **ವ್ಯಾಜರೂಪಕ :** (ಚಂದ್ರನ) ಬೆಳಗನ್ನು ನಗೆಯೆಂಬ ನೆವ (ನೆಪ = ವ್ಯಾಜ)ದಿಂದಲೂ, ತಿಂಗಳನ್ನು (=ಚಂದ್ರನನ್ನು) ಮುಖವೆಂಬ ನೆವದಿಂದಲೂ, (ಚಂದ್ರನ) ಲಕ್ಷ್ಮವನ್ನು (=ಕಳಂಕವನ್ನು) ಎರಡು ಕಣ್ಣುಗಳೆಂಬ ನೆವದಿಂದಲೂ ವರ್ಣಿಸುವ ಅಲಂಕಾರ 'ವ್ಯಾಜರೂಪಕ'. ಅಪ್ರಕೃತ ವಸ್ತುವಿನ (ನಗೆ, ಮುಖ, ಕಣ್ಣು) ಗುಣಧರ್ಮಗಳನ್ನು ಪ್ರಕೃತ ವಸ್ತುವಿನಲ್ಲಿ (ಬೆಳಗು, ಚಂದ್ರ, ಕಳಂಕ) ವ್ಯಾಜಾಂತರದಿಂದ ಆರೋಪಿಸಿ ರೂಪಣಮಾಡುವುದು ಇದರ ಲಕ್ಷಣ. (ಮುಂದೆ ಕೊಟ್ಟಿರುವ 'ವ್ಯಾಜಸ್ತುತಿ'ಯೊಂದಿಗೆ ಹೋಲಿಸಿ : ಪ. III –೧೬೦, ೧೬೧, ೧೬೨). ಇದು ದಂಡಿಯಿಂದ ಉಕ್ತವಾಗಿಲ್ಲ.

## ೩. ಅರ್ಥಾಂತರನ್ಯಾಸ

ಪದ್ಯ ೨೮ : 'ಅರ್ಥಾಂತರನ್ಯಾಸ'ದ ಲಕ್ಷಣವನ್ನು ವಿವರಿಸುತ್ತದೆ ಈ ಪದ್ಯ. 'ದೊರೆಕೊಳ್ಳುವಂತೆ ಮೊದಲು ಹೇಳಿದ ಅರ್ಥವನ್ನು ಸಾಧಿಸುವುದಕ್ಕಾಗಿ (ಸಮರ್ಥಿಸುವುದಕ್ಕಾಗಿ) ಬೇರೊಂದು ಅರ್ಥಾಂತರವನ್ನು ಹೇಳುವುದು (ನ್ಯಾಸ ಮಾಡುವುದು) ಅರ್ಥಾಂತರ (ವಿ)ನ್ಯಾಸ' (ಪ್ರಸ್ತುತಾರ್ಥವನ್ನು ಅಪ್ರಸ್ತುತಾರ್ಥದಿಂದ ಸಮರ್ಥಿಸುವುದು).

ಪದ್ಯ ೨೯ : ಇದರಲ್ಲಿ ಅರ್ಥಾಂತರನ್ಯಾಸದ ಎಂಟು ಭೇದಗಳನ್ನು ಹೆಸರಿಸಿದೆ: ೧. ಸಕಲವ್ಯಾಪಿ, ೨. ವಿಶೇಷ ಪ್ರಕಾಶಕ, ೩. ಯುಕ್ತಕಾರಿ, ೪. ಯುಕ್ತಾಯುಕ್ತ, ೫. ಪ್ರಕಟಶ್ಲೇಷ, ೬. ವಿರುದ್ಧಾತ್ಮಕ, ೭. ವಿಪರ್ಯಯ, ೮. ಯುಕ್ತಾರ್ಥ.

ಪದ್ಯ ೩೦ : **ಸಕಲವ್ಯಾಪಿ :** 'ಸತತೋದಯನೂ ಪ್ರತಿಭಟನೆಯಿಲ್ಲದ ತೀವ್ರಗತಿಯುಳ್ಳವನೂ ಆದ ಆ ದಿನನಾಥನೂ ಕೂಡ ಅಸ್ತಂಗತನಾದನು' ಎಂಬುದಿದು ಹೇಳಬೇಕೆಂದಿರುವ ಪ್ರಕೃತಾರ್ಥ. ಸೂರ್ಯನಿಗೆ ಕೊಟ್ಟಿರುವ ವಿಶೇಷಣಗಳಿಂದ ಅವನು 'ಸಕಲವ್ಯಾಪಿ' ಎಂಬುದು ಸ್ಪಷ್ಟ. 'ಅಪ್ರತಿಹತಗತಿ

ತೀವ್ರನಾದ ಅವನೂ ಮುಳುಗಿದನೆಂದರೆ, ತನ್ನಷ್ಟೇ ಅಥವಾ ತನ್ನನ್ನೂ ಮೀರಿಸಿ 'ಸಕಲವ್ಯಾಪಿ'ಯಾದ ಬೇರೊಂದು ಶಕ್ತಿಗೆ ಅವನು ಮಣಿದಿರಬೇಕು. ಅದೆಂದರೆ, ಸರ್ವತ್ರ ವ್ಯಾಪಕವಾದ ನಿಯತಪ್ರತೀತಿ. ಅದನ್ನು ಮೀರಲು ಯಾರಿಂದಲೂ ಸಾಧ್ಯವಿಲ್ಲ. ('ನಿಯತಿಃ ಕೇನ ಲಂಘ್ಯತೇ' – ದಂಡಿ) ಸಕಲವ್ಯಾಪಿಯಾದ ಸೂರ್ಯನೂ ಪ್ರಕೃತಿನಿಯಮದಿಂದ ವ್ಯಾಪ್ಯನಾಗಿದ್ದಾನೆ. (ಕಾವ್ಯಾದರ್ಶದಲ್ಲಿ ಈ ಅಲಂಕಾರವನ್ನು 'ವಿಶ್ವವ್ಯಾಪಿ' ಎಂದು ಕರೆದಿದೆ).[೪೬]

ಪದ್ಯ ೩೧ : **ವಿಶೇಷ ಪ್ರಕಾಶಕಂ :** "ಸರಸಿಜ ಬಾಂಧವನಾದ ದಿನಾಧಿನಾಥನು ಅಸ್ತಂಗತನಾಗಿರಲು ಸರೋಜಿನೀ ವನವು ವಿಶೇಷವಾಗಿ ಕೊರಗುತ್ತ ಮುಚ್ಚಿಕೊಳ್ಳುವುವು" – ಇದು ವರ್ಣ್ಯವಾದ ಪ್ರಕೃತವಾಕ್ಯ. "ಈಶ್ವರ ವಿರಹದೆ (ಒಡೆಯನ ಅಗಲಿಕೆಯಿಂದ) ವಿಶೇಷಾಪ್ತಜನ' 'ಶೋಕಾಕುಲ'ವಾಗುವುದು" – ಇದು ಮುಂಚಿನ ವಾಕ್ಯಾರ್ಥವನ್ನು ಸಮರ್ಥಿಸುವ ಒಂದು ವಿಶೇಷವಾದ ಅಪ್ರಕೃತ ಸಂದರ್ಭ ; ವ್ಯಾಪಕವಲ್ಲ. ಈ ವಿಶೇಷವೂ ಪ್ರಕೃತದ ಅರ್ಥವನ್ನು ಬೆಳಗುವುದರಿಂದ ಇದು 'ವಿಶೇಷ ಪ್ರಕಾಶಕ'.

ಪದ್ಯ ೩೩ : **ಯುಕ್ತಕಾರಿ :** "ಮಲಯಾನಿಲನೂ ಮಲಯಜ ಜಲವೂ (ಶ್ರೀಗಂಧ ದ್ರವವೂ) ಶಶಿಕಿರಣವೂ ವಿಯೋಗಿಗಳ (ವಿರಹಿಗಳ) ಎದೆಯಲ್ಲಿ ನೆಲಸಿದ್ದುವು ; ಆದರೇನು? ಅವು ಅವರ 'ಪಾಪದಫಲಂ' ಅದ 'ಅಟಿಲೆ' (ದುಃಖವೇ) ಆಗಿ ಪರಿಣಮಿಸಿದುವು." (ಇದು ವರ್ಣ್ಯವಾದ ಪ್ರಕೃತ ವಾಕ್ಯ). ಏಕೆ ಹಾಗೆ ಪರಿಣಮಿಸಿದುವೆಂಬುದು, "(ಹಾಗೆ ಆಗತಕ್ಕದ್ದು) ಕಾಮುಕ ಜನದ (ವಿಷಯದಲ್ಲಿ) 'ಯುಕ್ತಕಾರಿ' (ತಕ್ಕದ್ದೇ)" ಎಂಬ ಕಾಮುಕಜನ ಸಂಬಂಧರಾದ ಸಾಮಾನ್ಯ ಹೇಳಿಕೆಯಿಂದ

---

೪೬. 'ಮಂಡಲ' ಶಾಸನದ ಪ್ರಕಾರ ನೃಪತುಂಗನ ತಂದೆಯಾದ ಗೋವಿಂದನಿಗೆ 'ನಿತ್ಯೋದಯ' ಎಂಬ ಬಿರುದಿದ್ದಿತೆಂದು ಹೇಳಿ, ಈ ಪದ್ಯದಲ್ಲಿಯ 'ಸತತೋದಯ' ಎಂಬ ವಿಶೇಷಣವು 'ನಿತ್ಯೋದಯ' ಎಂಬ ಬಿರುದನ್ನೇ ಸೂಚಿಸುತ್ತಿದ್ದು ಸೂರ್ಯಪ್ರತಿಮನಾದ ಗೋವಿಂದನ ಅವಸಾನವನ್ನು ಹೊಳೆಯಿಸುವುದು ಈ ದೃಷ್ಟಾಂತದ ಆಶಯವಿರಬಹುದೆಂದು ಮುಳಿಯ ತಿಮ್ಮಪ್ಪಯ್ಯನವರು ಅನುಮಾನಿಸುತ್ತಾರೆ. ಅಲ್ಲದೆ, ಮುಂದಿನ ಲಕ್ಷ್ಯಪದ್ಯದಲ್ಲಿನ "ಸಮರ್ಥಕವಾದ ಅಪ್ರಕೃತವಾಕ್ಯವು ಆ ಗೋವಿಂದ ರಾಜಾವಾಸದ ವಿಶೇಷಾಪ್ತಜನವು ಶೋಕಾಕುಲವಾದ ಈ ವಿಶಿಷ್ಟ ಸಂದರ್ಭಸೂಚಕವಾದುದೇ ಆಗಿರಬೇಕು."

ಸಮರ್ಥಿತವಾಗಿದೆ. ('ಕಾಮಿನಾಂ ಪಾಪಮೀದೃಶಂ' ಎಂಬ ದಂಡಿಯ ವಾಕ್ಯ ಇಲ್ಲಿ ಅನುವಾದಗೊಂಡಿದೆ). ('ಯುಕ್ತಕಾರಿ' ಎಂಬುದು ಅಲಂಕಾರದ ಹೆಸರೂ ಆಗಿದೆ.)

ಪದ್ಯ ೩೩ : **ಯುಕ್ತಾಯುಕ್ತಂ** : "ಹರಿಣಧರನು (ಚಂದ್ರನು) ಸೊಗಯಿಸಿದಂತೆಯೇ ಕುಸುಮಿತ ಚೂತ ವಿತತಿಯೂ (ಹೂತ ಮಾವಿನ ಮರಗಳ ಸಮೂಹ) ಸೊಗಯಿಸಿತು. ಸುಗಂಧಯುತವಾದ ಹೂಗಳಿಂದ ಕೂಡಿದ್ದರೂ ದೋಷಾಕರನಾದ ಚಂದ್ರನಿಂದ ಸೊಗಸುವದಾದ್ದರಿಂದ, (ವಸಂತವು) ಏಕಕಾಲದಲ್ಲಿ ಯುಕ್ತವೂ ಆಯುಕ್ತವೂ ಆಗಿದೆ". ವಸಂತದ ಚಂದ್ರನನ್ನೂ ಹೂತ ಮಾಮರವನ್ನೂ ವರ್ಣಿಸುವುದು ಪ್ರಕೃತ ವಿಷಯ ; ಗುಣದೋಷಗಳೆರಡೂ ಯುಕ್ತಾಯುಕ್ತಗಳೆನಿಸಿ ಒಡನೆಯೆ ಕೂಡಿಕೊಂಡಿರುವುವು ಎಂಬ ಹೇಳಿಕೆಯಿಂದ ಪ್ರಕೃತ ಸಂಗತಿಯನ್ನು ಸಮರ್ಥಸಿದೆ. (ಈ ಪದ್ಯದ ಲಕ್ಷ್ಯಲಕ್ಷಣ ಸಮನ್ವಯದಲ್ಲಿ ಸ್ವಲ್ಪ ಕ್ಲೇಶ ತಲೆದೋರಿದೆ).

ಪದ್ಯ ೩೪ : **ಪ್ರಕಟಶ್ಲೇಷ** ; (ಈ ಅರ್ಥಾಂತರನ್ಯಾಸ ಭೇದ ದಂಡಿಯಿಂದ ಉಕ್ತವಾಗಿಲ್ಲ). "ದಿನನಾಯಕನು ಅಪರ ದಿಗಂಗನೆಯೊಂದಿಗೆ (ಪಶ್ಚಿಮ ದಿಕ್ಕೆಂಬ ಸ್ತ್ರೀಯೊಂದಿಗೆ) ನೆರೆದು (=ಕೂಡಿಕೊಂಡವನಾಗಿ) 'ಪೀನಂ' (=ಬಹುವಾಗಿ) 'ಉದಿತ ರಾಗನಾದಂ'. (ಇಲ್ಲಿ ಶ್ಲೇಷೆಯಿದೆ : ೧. ರಕ್ತವರ್ಣದಿಂದ ಕಾಣಿಸಿಕೊಂಡನು. ೨. ಪ್ರೇಮೋದಯವುಳ್ಳವನಾದನು, ಅವನಲ್ಲಿ ಪ್ರೇಮ ಕಾಣಿಸಿಕೊಂಡಿತು). ಸೂರ್ಯ ಮುಳುಗಿದಾಗ ಸಂಧ್ಯಾರಾಗಯುಕ್ತನಾದನೆಂದು ಹೇಳುವುದು ಪ್ರಕೃತ ವಿಷಯ. ಪಶ್ಚಿಮ ದಿಗ್ವನಿತೆಯೊಂದಿಗೆ ನೆರೆದು 'ರಾಗ' ಯುಕ್ತನಾದನೆಂದು ಪ್ರಕಟವಾಗಿರುವ ಶ್ಲೇಷೆಯನ್ನು, ಮುಂದಿನ ವಾಕ್ಯದಿಂದ ಸಮರ್ಥಿಸಲಾಗಿದೆ : 'ಅಕ್ರಮದೆ ವಾರುಣೀ ಸಂಶ್ಲೇಷವು' (ವಾರುಣೀ = ಪಶ್ಚಿಮ ದಿಕ್ಕು ; ಪಶ್ಚಿಮದಿಗಧಿಪನಾದ ವರುಣನ ಪತ್ನಿ ವಾರುಣಿ : ಪರಸ್ತ್ರೀಯಾದ ವಾರುಣಿಯೊಂದಿಗೆ ಅಕ್ರಮವಾಗಿ ನೆರೆಯುವುದು, ಕೂಡಿಕೊಳ್ಳುವುದು) ಹೇಗೂ 'ಅಧಿಕ ರಾಗಮಂ' (=ಹೆಚ್ಚಾದ ಪ್ರೀತಿಯನ್ನು 'ಜನಿಯಿಸುಗುಂ' ('ರಾಗ' ಎಂಬ ಪದದ ಶ್ಲೇಷಾರ್ಥವನ್ನು 'ಸಂಶ್ಲೇಷ' ಎಂಬ ಪದಪ್ರಯೋಗದಿಂದ ಪ್ರಕಟಮಾಡಲಾಗಿದೆ.)

ಪದ್ಯ ೩೫ : **ವಿರುದ್ಧಾತ್ಮಕ** : "ದೋಷಾಕರಂ (=ಚಂದ್ರನು) ಅಂತರ್ಮಲಿನ

ನಾಗಿಯುಂ (=ಒಳಗೆ ಕಳಂಕವನ್ನು ಹೊಂದಿದ್ದರೂ ಕೂಡ) ಸರಿದಧಿಪತಿಯಂ (ಸಮುದ್ರವನ್ನು) ಪೆರ್ಚಿಸುಗುಂ." – ಇದು ಪ್ರಕೃತ. ಇದನ್ನು ಸಮರ್ಥಿಸುವ ವಾಕ್ಯ : "ಪರಿಪೂರ್ಣ ವಿದ್ಯಾವಂತನು ('ಪರಿಣತ ಕಲಾಕಲಾಪಂ') ತಾನು (ಇತರರ ಬಗೆಗೆ) ವಿರೋಧವುಳ್ಳವನಾದರೂ (ಅವರ) ಏಳಿಗೆಯನ್ನುಂಟು ಮಾಡತಕ್ಕವನಾಗುತ್ತಾನೆ."[೪೭] ('ಪರಿಣತ ಕಲಾಕಲಾಪಂ' ಎಂಬ ವಿಶೇಷಣವನ್ನು 'ಷೋಡಶ ಕಲಾಪೂರ್ಣ' ಎಂದು ಚಂದ್ರಪರವಾಗಿಯೂ ಅರ್ಥಮಾಡಬಹುದು.)

ಈ ಲಕ್ಷ್ಯಕ್ಕೆ ಮೂಲವಾದ ದಂಡಿಯ ಶ್ಲೋಕ ವಿಶದವಾಗಿದೆ :

ಜಗದಾನಂದಯತ್ಯೇಷ ಮಲಿನೋಽಪಿ ನಿಶಾಕರಃ ।
ಅನುಗೃಹ್ಣಾತಿ ಹಿ ಪರಾನ್ ಸದೋಷೋಽಪಿ ದ್ವಿಜೇಶ್ವರಃ ॥ –II, ೧೭೫

ಪದ್ಯ ೩೬ : **ವಿಪರ್ಯಯ** (ಅಥವಾ ವಿಪರೀತ) : "ವಸಂತಸಮಯಾನುಗತನಾದ, ಸುರಭಿಸಮಯೋದಿತನಾದ (=ವಸಂತಮಾಸದಲ್ಲಿ ಹುಟ್ಟಿದ), ನಿಶಾಕರ ಹಾಗೂ ಹಿಮಕರ ಎನಿಸಿಕೊಂಡವನು ನನಗೆ ಪರಿತಾಪವನ್ನೂ ದುಃಖವನ್ನೂ ಉಂಟುಮಾಡುತ್ತಾನೆ." ಹಗಲನ್ನುಂಟುಮಾಡುವ ಸೂರ್ಯನು ತಾಪಕಾರಿ ; ಆದರೆ ರಾತ್ರಿಯನ್ನುಂಟುಮಾಡುವ ಚಂದ್ರನು ಶೈತ್ಯಕಾರಿ (ಹಿಮಕರ) ; ಅಲ್ಲದೆ, ಹಿತಕರವಾದ ವಸಂತಮಾಸದಲ್ಲಿ ಉದಯಿಸಿದವನು. ಹೀಗಿದ್ದೂ ತನ್ನ ಸ್ವಭಾವಕ್ಕೆ 'ವಿಪರೀತ'ವಾದ ಎಂದರೆ ಅನುಗುಣವಲ್ಲದ, ವ್ಯತಿರಿಕ್ತವಾದ, ಪರಿಣಾಮವನ್ನೆ ಉಂಟುಮಾಡುತ್ತಿದ್ದಾನೆ (ಎಂದು ವಿರಹತಾಪದಿಂದ ದುಃಖಿಸುತ್ತಿರುವ ವ್ಯಕ್ತಿ ಹೇಳಿಕೊಳ್ಳುವ ಮಾತಿದು). 'ವಿರಹಿಗಳ ವಿಷಯದಲ್ಲಿ ಇದು ಸ್ವಾಭಾವಿಕವೇ' ಎಂಬ ಅರ್ಥಾಂತರವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಇಲ್ಲದಿದ್ದರೆ, ಲಕ್ಷಣ ಸಮನ್ವಯವಾಗುವುದಿಲ್ಲ.

ಪದ್ಯ ೩೭ : **ಯುಕ್ತಾರ್ಥಂ** : "ಅಶೋಕಪಲ್ಲವ (=ಅಶೋಕದ ಚಿಗುರು)ದಿಂದ ವಿರಚಿತವಾದ ಶಯನೀಯವು (=ಹಾಸುಗೆ) ನನ್ನ ಮೈಯನ್ನು ಬಹುವಾಗಿ ಉರುಪಿತ್ತು (=ಉರಿಯುವಂತೆ ಮಾಡಿತು, ಸುಟ್ಟು ಹಾಕಿತು)." ಚಿಗುರಿನ

---

೪೭. ಅರ್ಥವೈಶದ್ಯದ ದೃಷ್ಟಿಯಿಂದ ಪದ್ಯದ ತಿದ್ದುಪಾಟಾದ ನಾಲ್ಕನೆಯ ಪಾದವನ್ನು ಹೀಗೆ ತಿದ್ದಿಕೊಳ್ಳುವುದು ಮೇಲೆಂದು ಕಾಣುತ್ತದೆ : ಪರಿವರ್ಧ [ಕನ]ಕ್ಕುಮತಿವಿರುದ್ಧಾತ್ಮಕ [ನುಂ]. ಈ ಹೊಸ ತಿದ್ದುಪಾಟನ್ನು ಅನುಸರಿಸಿದೆ, ಮೇಲಿನ ಅರ್ಥವಿವರಣೆ.

ಹಾಸುಗೆ ತಂಪಾಗಿರಬೇಕು. ವಿರಹಿಗಳ ವಿಚಾರದಲ್ಲಿ ಅದು ಸುಡುವುದೆನ್ನುವುದು ಕವಿಸಮಯ. ಇದು ಸ್ವಾಭಾವಿಕ ಎನ್ನುವೆಡೆಯಲ್ಲಿ, 'ಇದು ಯುಕ್ತ, ಸರಿ' ಎಂದೆನ್ನುವಂತೆ ಬೇರೊಂದು ಸಮರ್ಥನೆಯನ್ನು ಕೊಡಲಾಗಿದೆ : ''ಅಶೋಕದ ಚಿಗುರು (ಉರಿಯಂತೆ ಕೆಂಪಗಿರುವುದರಿಂದ) 'ಸ್ಫುರದನಲ ಪ್ರತಿನಿಧಿ' (=ಪ್ರಕಾಶಮಾನವಾದ ಅಗ್ನಿಯ ಪ್ರತಿನಿಧಿ) ; ಅಗ್ನಿಯಂತೆ ಕಾಣುವ ಅಶೋಕವು ಅದರಂತೆಯೇ ಸುಡುವ 'ತತ್‌ಸ್ವರೂಪಗುಣ'ವುಳ್ಳದ್ದಾಗಿರುವುದು ಯುಕ್ತ(ಸರಿ)ವಾಗಿಯೇ ಇದೆ."

## ೪. ವ್ಯತಿರೇಕಾಲಂಕಾರ

ಪದ್ಯ ೩೯ : "ಆದಿಪ್ರತೀತಿಯಿಂದ (ಎಂದರೆ, ಅರ್ಥಪ್ರತೀತಿ ಮೂಲಕವಾಗಿ), ಇಲ್ಲವೆ, ಶಬ್ದಾದರದಿಂದ (ಶಬ್ದದ ಕಡೆ ಓಲುವುದರಿಂದ, ಶಬ್ದ ಮೂಲಕವಾಗಿ) ಸದೃಶವಾದ (ಒಂದನ್ನೊಂದು ಹೋಲುವ) ಎರಡು ವಸ್ತುಗಳಲ್ಲಿ ಭೇದವನ್ನು ತಿಳಿಸುವುದು 'ವ್ಯತಿರೇಕ'." ('ವ್ಯತಿರೇಕ' ಎಂದರೆ 'ಹೆಚ್ಚಾಗಿರುವುದು'. ಸಮಾನಗುಣಧರ್ಮವುಳ್ಳ ಎರಡು ವಸ್ತುಗಳಲ್ಲಿ ಒಂದರಲ್ಲಿ ಮಾತ್ರ ಒಂದೋ ಎರಡೋ ಹೆಚ್ಚಿನ ಗುಣವಿರುವುದು.) (ಈ ಪದ್ಯದಂಡಿಯ ಶ್ಲೋಕದ II, ೧೮೦ – ಯಥಾನುವಾದ).

(ವ್ಯತಿರೇಕದಲ್ಲಿ, ಏಕವ್ಯತಿರೇಕ, ಉಭಯ ವ್ಯತಿರೇಖ, ಸಶ್ಲೇಷ ವ್ಯತಿರೇಕ, ಸಹೇತುಕ ವ್ಯತಿರೇಕ, ಸಾಕ್ಷೇಪ ವ್ಯತಿರೇಕ ಮುಂತಾದ ಭೇದಗಳುಂಟು)

ಪದ್ಯ ೪೦ : **ಏಕ ವ್ಯತಿರೇಕ :** ಇಲ್ಲಿ, ಸದೃಶವಸ್ತುಗಳಲ್ಲಿ, ಕಂಡುಬರುವ ಭೇದಕಗುಣ ಒಂದೇ ಆದ್ದರಿಂದ ಇದು ಏಕವ್ಯತಿರೇಕ. ಸಮಾನ ಧರ್ಮಗಳನ್ನು ಸೂಚಿಸುವ ಪದಗಳಲ್ಲಿನ ಶ್ಲೇಷಾರ್ಥದ ಬಲದಿಂದಲೇ ಸಾದೃಶ್ಯ ಕಂಡುಬರತಕ್ಕದ್ದು.

'ಶ್ರೀವನಿತಾಪ್ರಸವದಿಂ' (೧. 'ಶ್ರೀದೇವಿ' ಜನ್ಮಕೊಟ್ಟಿದ್ದರಿಂದ ; ೨. ಶ್ರೀವನಿತೆಗೆ, ಎಂದರೆ ಲಕ್ಷ್ಮಿಗೆ, ಜನ್ಮಕೊಟ್ಟದ್ದರಿಂದ), 'ಆ ಲಾವಣ್ಯದಿಂದ' (೧. ಲಾವಣ್ಯ ಎಂದರೆ ಚೆಲುವಿನ, ಕಾರಣದಿಂದ ; ೨. ಲವಣ ಎಂದರೆ ಉಪ್ಪಿನ ಸಂಬಂಧದಿಂದ), 'ಅತಿಗಭೀರಭಾವದೆ' (೧. ಗಂಭೀರಸ್ವಭಾವದಿಂದ ; ೨. ಅಗಾಧತೆ ಅಥವಾ ಆಳವಾಗಿರುವುದರಿಂದ), ನೀನ್ ಇಂತು ಆ ವಾರಿಧಿಯಂ (=ಸಮುದ್ರವನ್ನು) ಪೋಲ್ತಯ್ ; (ನಿನಗೂ ಸಮುದ್ರಕ್ಕೂ

ಇರುವ) ಕೇವಲ ಭೇದವೆಂದರೆ, (ನಿನ್ನ) 'ದ್ವಿತೀಯ(ಎಂದರೆ ಹೆಚ್ಚಿನದಾದ) ಲಲಿತಕಾರಂ', (ಸಮುದ್ರವು ಅಲ್ಲಕಲ್ಲೋಲವಾಗುವುದರಿಂದ, ಅದರ ಆಕಾರ ಲಲಿತವಲ್ಲ).

ಪದ್ಯ ೪೧ : **ಉಭಯ ವ್ಯತಿರೇಕ** : ಈ ಪದ್ಯದಲ್ಲಿಯೂ ಸಾದೃಶ್ಯ ಸೂಚಕ ಪದಗಳಲ್ಲಿ ಶ್ಲೇಷಾರ್ಥಗಳಿವೆ. ಇಲ್ಲಿ ಸದೃಶ ವಸ್ತುಗಳ ನಡುವಣ ಭೇದಕ ಗುಣಗಳು ಎರಡು. ಆದ್ದರಿಂದ ಇದು ಉಭಯ ವ್ಯತಿರೇಕ.

"ಅರಸಾ, ದಿನೇಶನೂ ನೀನೂ 'ಪರಮೋದಯರಿರ್' (೧. ರಾಜ ಶ್ರೇಷ್ಠವಾದ ಅಭಿವೃದ್ಧಿಯುಳ್ಳವನು ; ೨. ಸೂರ್ಯ ; ಶ್ರೇಷ್ಠವಾದ ಉದಯ ಎಂದರೆ ಹುಟ್ಟುವಿಕೆ, ಉಳ್ಳವನು), 'ಕಮಲಾಕರ ಬೋಧಕರಿರ್ (೧. ರಾಜ: ಕಮಲಾ + ಆಕರ + ಬೋಧಕ = (ಅಂತಃಪುರದ) ಉತ್ತಮ ಸ್ತ್ರೀ ಸಮೂಹವನ್ನು ಎಚ್ಚರಿಸುವವನು(?) ; ೨. ಸೂರ್ಯ : ಕಮಲ ಸಮೂಹವನ್ನು ಅರಳಿಸುವವನು) ಭಾಸ್ಕರನು, 'ಅನಿಯತ' (ನಿಯತವಲ್ಲದ, ಅನಿಶ್ಚಿತ, ತಪ್ಪುವ, ಚಂಚಲವಾದ) 'ವೃತ್ತಕ್ರಮಂ' (ನಡತೆ ಹಾಗೂ ಸಂಚಾರವುಳ್ಳವನು) (ಸೂರ್ಯನು ಬೆಳಗ್ಗೆ, ಹಗಲು ಮತ್ತು ಸಂಜೆಗಳಲ್ಲಿ ಬೇರೆ ಬೇರೆ ಬಗೆಗಳಲ್ಲಿ ಪ್ರಕಾಶಿಸುತ್ತಾನೆ ಮತ್ತು ಅವನ ಉಷ್ಣತೆಯಲ್ಲಿ ಹೆಚ್ಚು ಕಡಮೆಗಳಿರುತ್ತವೆ ; ಅಲ್ಲದೆ ಉತ್ತರಾಯಣ ದಕ್ಷಿಣಾಯನಗಳಲ್ಲಿ ಅವನ ಸಂಚಾರಮಾರ್ಗ ವ್ಯತ್ಯಾಸವಾಗುತ್ತದೆ) ; ಅವನು 'ನಿನ್ನಂತೆ ನಿಯತ ವೃತ್ತಸ್ಥಿತನೇಂ ? (ಒಂದೇ ರೀತಿಯಾದ ನಡತೆಯುಳ್ಳವನೂ ಸ್ಥಿರನೂ ಆಗಿರತಕ್ಕವನೇ?) ಎಂದಿಗೂ ಅಲ್ಲ." ರಾಜನೂ ಸೂರ್ಯನೂ ಸದೃಶಗುಣವುಳ್ಳವರಾದರೂ, 'ವೃತ್ತ' ಮತ್ತು 'ಕ್ರಮ' – ಇವೆರಡು ಅವರಲ್ಲಿ ಕಂಡುಬರುವ ಭೇದಕ ಗುಣಗಳು

ಪದ್ಯ ೪೨–೪೪ : ಈ ಮೂರು ಪದ್ಯಗಳಲ್ಲಿ, ಮೇಲಿನ ಎರಡು ಪದ್ಯಗಳಲ್ಲಿಯಂತೆ ಒಬ್ಬ ರಾಜನಗೂ ಶಶಿ, ಮೇರು ಮತ್ತು ಕಲ್ಪವೃಕ್ಷಗಳಿಗೂ ಇರುವ ಸದೃಶ ಗುಣಗಳನ್ನು ವರ್ಣಿಸಿ, ಭೇದಕ ಗುಣವನ್ನು ನಿರ್ದೇಶಿಸಿದೆ. ಆ ರಾಜವರ್ಣನೆ ನೃಪತುಂಗನನ್ನೇ ಕುರಿತಿದ್ದಿರಬಹುದು. ಮೇಲ್ಕಂಡ ಪದ್ಯಗಳ ಮಾದರಿಯಲ್ಲಿ ಇನ್ನುಳಿದ ವ್ಯತಿರೇಕಾಲಂಕಾರದ ಪದ್ಯಗಳ ಬಗೆಗೂ ಲಕ್ಷ್ಯಲಕ್ಷಣ ಸಮನ್ವಯ ಮಾಡಿಕೊಳ್ಳತಕ್ಕದ್ದು. ಕೆಳಗೆ ಕಠಿನಪದಗಳ ಅರ್ಥಗಳನ್ನು ಮಾತ್ರ ಕಾಣಿಸಿದೆ.

ಪದ್ಯ ೪೨ : ಕಾಂತೋತ್ಕರಿರ್ = ಆಕರ್ಷಕ ಗುಣಸಮುದಾಯದಿಂದ ಕೂಡಿರುವಿರಿ.

(ರಾಜನ ಪರವಾಗಿ, ಕಾಂತಾ + ಉತ್ಕರ = ಕಾಂತೆಯರ ಸಮುದಾಯದಿಂದ ಕೂಡಿದವನು, ಎಂದೂ ಅರ್ಥಮಾಡಬಹುದು). ದೋಷಾಕರ = ದೋಷದಿಂದ, ಕಳಂಕದಿಂದ, ಕೂಡಿದವನು (=ಚಂದ್ರ). ಉದಾರಗುಣ ಸಮುದಯ (ಸಂ+ಉದಯ) = ಉದಾರಗುಣದ ಅತಿಶಯವಾದ ಏಳಿಗೆಯುಳ್ಳವನು.

ಪದ್ಯ ೪೩ : (೧. ರಾಜಪರವಾಗಿ ; ೨. ಮೇರುಪರವಾಗಿ) : ಅಲಘುಭುಜ = ೧. ದೊಡ್ಡ ಹೆಗಲುಳ್ಳವನು ; ೨. ದೊಡ್ಡ ಪಾರ್ಶ್ವಭಾಗವುಳ್ಳದ್ದು. ನಿಶ್ಚಲ = ೧. ದೃಢಚಿತ್ತ ೨. ಚಲಿಸದೆ ಇರತಕ್ಕದ್ದು. ಅಖಿಳ ಭೂಭೃದುತ್ತುಂಗತೆ = ೧. ಸಮಸ್ತ ರಾಜರಲ್ಲಿ ಉನ್ನತ ಸ್ಥಾನವನ್ನು ಹೊಂದಿರತಕ್ಕವನು, ರಾಜಾಧಿರಾಜ ; ೨. ಎಲ್ಲ ಪರ್ವತಗಳಿಗಿಂತ ಎತ್ತರವಾದದ್ದು. ಕಠಿನ ಭೋಗಾಧಾರಂ = (ಮೇರು) (ದೇವಾವಾಸವಾದ್ದರಿಂದ, ಮನುಷ್ಯರಿಗೆ) ಕಷ್ಟಸಾಧ್ಯವಾದ, ದುರ್ಲಭವಾದ, ಸುಖಾನುಭವಕ್ಕೆ ನೆಲೆಯಾದದ್ದು.

ಪದ್ಯ ೪೪ : (೧. ರಾಜಪರವಾಗಿ ; ೨. ಕಲ್ಪವೃಕ್ಷಪರವಾಗಿ) ಪಾರ್ಥಿವಗುಣಯುತ = ೧ ಕ್ಷತ್ರಿಯ ಗುಣದಿಂದ, ರಾಜಯೋಗ್ಯ ಗುಣದಿಂದ, ಕೂಡಿದವನು; ೨. ಭೂಗುಣದಿಂದ ಕೂಡಿದ್ದು ; ಪೃಥ್ವಿಯಸಂಬಂಧವುಳ್ಳದ್ದು. ಆರ್ಥಿತ ಫಲದಾಯಿ = ೧ ಬೇಡಿದ್ದನ್ನು ಕೊಡುವವನು ; ಬಯಸಿದ್ದನ್ನು ನೀಡತಕ್ಕದ್ದು. ಅಚೇತನತೆ = (ಕಲ್ಪವೃಕ್ಷ) ಜಡತ್ವ, ನಿರ್ಜೀವತ್ವ.

ಪದ್ಯ ೪೫ : ಇಲ್ಲಿ 'ವದನ'ದ ವರ್ಣನೆ. ಕಮಲಕ್ಕೂ ಮುಖಕ್ಕೂ ಇರುವ ಸಾದೃಶ್ಯವನ್ನು ಸೂಚಿಸಿ, ಮುಖದ (ಹೆಚ್ಚಿನ) ಭೇದಕ ಗುಣವನ್ನು ನಿರ್ದೇಶಿಸಿದೆ. ಮದಮುದಿತಾಳಿ = (ಮದ + ಮುದಿತ + ಅಳಿ) ಸೊಕ್ಕಿನಿಂದ ಸಂತೋಷಗೊಂಡ ದುಂಬಿ. ಕದಂಬ = ಸಮೂಹ, ಸರಸಕೇಸರ = ರಸಯುಕ್ತವಾದ ಕೇಸರ. ಸ್ಮಿತದಶನವಸನ ರಾಗೋಪಚಿತಂ = ನಗೆಯಿಂದ ಕೂಡಿದ ತುಟಿಯ (ದಶನವಸನ) ಕೆಂಪಿನಿಂದ ಉತ್ಕರ್ಷವನ್ನು ಪಡೆದಿರತಕ್ಕದ್ದು.

ಪದ್ಯ ೪೬ : ಆಕಾಶಕ್ಕೂ ಸರೋವರಕ್ಕೂ ಇರುವ ಸಾದೃಶ್ಯವನ್ನು ಸೂಚಿಸಿ, ಸರೋವರದ (ಹೆಚ್ಚಿನ) ಭೇದಕ ಗುಣವನ್ನು ತೋರಿಸಿದೆ. ಶರದಂಬರ = ಶರತ್ಕಾಲದ ಆಕಾಶ ಸರವರ = ಸರೋವರ, ಕೊಳ. ವಿಲಸದತನುಧವಳಚ್ಛವಿ = (ವಿಳಸತ್ + ಅತನು + ಧವಳ + ಛವಿ) ತೊಳಗುವ ಸಾಂದ್ರವಾದ ಬಿಳುಪಾದ ಪ್ರಕಾಶ. ಹರಿಣಾಂಕ = ಜಿಂಕೆಯ

ಲಾಂಛನ. ರಾಜಹಂಸೋತ್ತಂಸ = ರಾಜಹಂಸವೆಂಬ ಶಿರೋಭೂಷಣ.

ಪದ್ಯ ೪೭ : "ಕಮಲವು 'ಉಕ್ತಗುಣಭೂಷಣಂ' ಆದ ನಿನ್ನ ಮುಖವನ್ನು ಎಂದಿಗೂ ಹೋಲುವುದಿಲ್ಲ. (ಆ 'ಉಕ್ತಗುಣಭೂಷಣ' ಎಂದರೆ, 'ಮದಾಲಸಲೋಚನ ಲೀಲಂ', 'ಅಪಾಸ್ತಭ್ರೂಲತಾವಿಲಾಸವಿಶೇಷಂ'. ಇದು ಉಕ್ತವಾಗಿಲ್ಲದಿದ್ದರೂ ಸೂಚಿತವಾಗುತ್ತದೆ). ಏಕೆಂದರೆ, ಅದು 'ಅಮದಾಲಸ ಲೋಚನಲೀಲಂ' (ಮದದಿಂದ ಅಲಸವಾದ ಲೋಚನ ಲೀಲೆಯಿಲ್ಲದ್ದು), 'ಅಪಾಸ್ತ ಭ್ರೂಲತಾ ವಿಲಾಸ ವಿಶೇಷಂ' (ಹುಬ್ಬೆಂಬ ಬಳ್ಳಿಯು ಬೀರುವ ಸೊಬಗು ಇಲ್ಲದ್ದು)".

ಪದ್ಯ ೪೮ : ಇದು ಮಾರ್ಗಕಾರನ ಸ್ವಂತ ಲಕ್ಷ್ಯಪದ್ಯ. ಇದರಲ್ಲಿ ಪಾಠದೋಷವಿರುವಂತೆ ಕಾಣುತ್ತದೆ ಆದ್ದರಿಂದ, ಅರ್ಥಕ್ಲೇಶವಿದೆ. ತಾತ್ಪರ್ಯಾರ್ಥವು ಹೀಗಿದ್ದೀತು : "ಅಗ್ನಿ ತನ್ನ ಅಸಾಧ್ಯವಾದ ಕಳಂಕವನ್ನೂ (ಅಗ್ನಿ ಶುದ್ಧನಾದರೂ ಸರ್ವಭಕ್ಷಕನಾಗಿದ್ದರಿಂದ ಕಳಂಕಪೂರ್ಣ), ವಾಯು ಸುಡುವ ಧೂಳಿಯನ್ನೂ (ಗಾಳಿ ಧೂಳನ್ನು ಒಯ್ಯುವುದಷ್ಟೆ) ತೊಳೆಯುವ ನೀರು ತನ್ನೊಂದಿಗೆ ಕೂಡಿಕೊಂಡ ಕೆಸರನ್ನೂ, ಬಲ್ಲವನು (ಜ್ಞಾನ) ಅಪಕೀರ್ತಿಯನ್ನೂ ತೊರೆಯಲಿ."

## ೫. ಯಾಥಾಸಂಖ್ಯಾಲಂಕಾರ

('ದೋಷಪ್ರಕರಣ'ದಲ್ಲಿ ಮಾರ್ಗಕಾರನು 'ಚ್ಯುತಯಾಥಾಸಂಖ್ಯ'ವನ್ನು ಉಲ್ಲೇಖಿಸಿದ್ದಾನೆ. ಹಾಗೂ ಅದರ ಲಕ್ಷಣ ವಿವರಣೆಯನ್ನೂ ಕೊಟ್ಟಿದ್ದಾನೆ. (ನೋಡಿ: I–೮೬ ; ಟಿಪ್ಪಣಿ : I–೮೬ ರಿಂದ ೮೯). ದೋಷರಾಹಿತ್ಯವಾದ ಗುಣವೇ ಇಲ್ಲಿ ಅಲಂಕಾರವಾಗಿ ಉಕ್ತವಾಗಿದೆ. ಇದು 'ದಶಗುಣ'ಗಳಲ್ಲಿ ಸೇರಿಲ್ಲವಾದ್ದರಿಂದ ಇದನ್ನು 'ಉಪಗುಣ'ವೆಂದು ಭಾವಿಸಬಹುದಾಗಿದೆ. 'ಯಥಾಸಂಖ್ಯ' (ಗುಣವಿವರಣೆಯನ್ನು ಈ ಹಿಂದೆಯೆ ಮಾಡಿರುವುದರಿಂದ, ಅದನ್ನೇ ಅಲಂಕಾರ ಲಕ್ಷಣಕ್ಕೂ ಅನ್ವಯಿಸಿಕೊಳ್ಳಬಹುದು.)

ಪದ್ಯ ೫೦ : **ಅನುಗತ** (ಅಥವಾ ಅನ್ವಿತ) **ಯಾಥಾಸಂಖ್ಯ** : ಹಿಂದೆ 'ಚ್ಯುತಯಾಥಾಸಂಖ್ಯ' ದೋಷ ವರ್ಜನೆಗೆ ಕೊಟ್ಟ ಲಕ್ಷ್ಯವನ್ನೇ ಸ್ವಲ್ಪ ಮಾರ್ಪಾಟುಮಾಡಿ ಪುನರುಕ್ತಮಾಡಿದೆ. ಇಲ್ಲಿ ಅಳಕ. ಅನನ, ನಯನ – ಇವು 'ಉದ್ದೇಶಿ'ಗಳು ಅಥವಾ ಉದ್ದಿಷ್ಟಗಳು (ಪ್ರಕೃತ) ; ಇವು 'ಅನುದೇಶಿ' (ಅನುದ್ದಿಷ್ಟ, ಅಪ್ರಕೃತ)ಗಳಾದ ಅಳಿ, ನಳಿನ, ಉತ್ಪಲ –

ಇವುಗಳಲ್ಲಿ ಕ್ರಮವಾಗಿ 'ಅನ್ವಿತ' (ಅಥವಾ 'ಅನುಗತ')ವಾಗಿರುವುದರಿಂದ ಇದು 'ಅನ್ವಿತ ಯಾಥಾಸಂಖ್ಯ'ಕ್ಕೆ ದೃಷ್ಟಾಂತ.

ಪದ್ಯ ೫೧ : **ಅನನ್ವಿತ ಯಾಥಾಸಂಖ್ಯ** : ಈ ಲಕ್ಷಣದಲ್ಲಿ 'ಪ್ರಕೃತವು' (ಅಳಕಾದಿಗಳು) 'ಅಪ್ರಕೃತ'ದಲ್ಲಿ 'ಅನ್ವಿತ'ವಾಗಿಲ್ಲದಿರುವುದರಿಂದ, ಇದು 'ಅನನ್ವಿತ ಯಾಥಾಸಂಖ್ಯ'. ಮೇಲಿನ ಲಕ್ಷ್ಯದ ಪ್ರಕೃತಾಪ್ರಕೃತಗಳ ಕ್ರಮದಲ್ಲಿ ವಿಪರ್ಯಯವಾಗಿದೆಯೇ ಹೊರತು ಯಾಥಾಸಂಖ್ಯತೆಗೆ (ಸಂಖ್ಯಾಕ್ರಮಕ್ಕೆ) ಭಂಗ ಬಂದಿಲ್ಲ. ನಳಿನ (೧) ಉತ್ಪಳ (೨) ಅಳಿರುಚಿ (೩) : ಅಳಕ (೨) ವಿಲೋಚನ (೧) ಮುಖಂಗಳ್ : ಉತ್ಪಳ : ಅಳಿರುಚಿಃ ವಿಲೋಚನ: ಮುಖ : ಅಳಕ – ಹೀಗೆ 'ಅಕ್ರಮ'ವಾಗಿರುತ್ತಿತ್ತು. ('ಯಾಥಾಸಂಖ್ಯ'ದ ಕ್ರಮಬದ್ಧತೆ ಅರ್ಥಾನುಗುಣವಾಗಿರುವುದರಿಂದ – ಒಂದು ಕ್ರಮದಲ್ಲಿ ಉಪಮೇಯೋಪಾನ ಸಂಬಂಧ ಪ್ರತೀತವಾಗುವುದರಿಂದ – ಇದು ಅರ್ಥಾಲಂಕಾರಗಳ ಗುಂಪಿನಲ್ಲಿ ಸೇರ್ಪಡೆಯಾಗಿದೆ).

**೬. ದೀಪಕ**

ಪದ್ಯ ೫೩ : "ಜಾತಿ ಕ್ರಿಯಾ ಗುಣ ದ್ರವ್ಯ – ಇವುಗಳಲ್ಲಿ ಯಾವೊಂದರ ಅತಿಶಯ ವಿಶೇಷವನ್ನು ಸೂಚಿಸುವ ಪದವು ಒಂದು ನಿರ್ದಿಷ್ಟ ಸ್ಥಳದಲ್ಲಿ ನೆಲೆಗೊಂಡು (ಒರ್ಬಟೆನಿಂದು'), ಇಡಿಯ ವಾಕ್ಯವೆಲ್ಲವನ್ನೂ ಬೆಳಗುವ ಕಾರ್ಯವೆಸಗುತ್ತಿದ್ದರೆ, ಅದು ದೀಪಕನೆನಿಸುವುದು"[೪೮]

---

೪೮. "...ಪದಮೊ(ರ್ಬಟೆ) ನಿಂದೀತೆಐದಿನುಟೆ ದ(ವಾಕ್ಯ) ಸಮೇತಿಗಮುಪಕಾರಯೋಗ್ಯ ದೀಪಕಮಕ್ಕುಂ" – ಇಲ್ಲಿ ನಾವು ತಿದ್ದುಪಾಟು ಮಾಡಿರುವ ಎರಡು ಕಡೆಗಳಲ್ಲಿಯೂ 'ಒರ್ಬುಳಿ' ಮತ್ತು 'ಕಾವ್ಯ' ಎಂಬ ಪಾಠಗಳು ಪಾಠಕರ ಹಾಗೂ ಮದ್ರಾಸು ಮುದ್ರಣಗಳೆರಡರಲ್ಲಿಯೂ ಕಂಡುಬರುತ್ತವೆ. 'ಕಾವ್ಯ' ಎಂಬುದಕ್ಕೆ 'ವಾಕ್ಯ' ಎಂಬ ಪಾಠಾಂತರವನ್ನು ಪಾಠಕರು ಅಡಿ ಟಿಪ್ಪಣಿಯಲ್ಲಿ ಸೂಚಿಸಿದ್ದಾರೆ. ಮಾರ್ಗಕಾರನ ಪದ್ಯವನ್ನು ದಂಡಿಯ ಮೂಲಶ್ಲೋಕದೊಂದಿಗೆ ಹೋಲಿಸಿ ಪರಿಶೀಲಿಸಿದಲ್ಲಿ, 'ಒರ್ಬಟೆ' ಮತ್ತು 'ವಾಕ್ಯ' ಎಂಬ ಸರಿಯಾದ ಪದಗಳೆಡೆಯಲ್ಲಿ 'ಬರ್ಬುಳ' ಮತ್ತು 'ಕಾವ್ಯ' ಎಂಬ ಪದಗಳು ಪ್ರತಿಕಾರನ ಕೈತಪ್ಪಿನಿಂದ ಕಾಣಿಸಿಕೊಂಡಿವೆ ಎಂದು ಊಹಿಸಬಹುದು. (ನಮ್ಮ ಮುದ್ರಿತ ಪಾಠದಲ್ಲಿ 'ಒರ್ಬುಟೆ' ಎಂದು ತಪ್ಪಾಗಿ ಅಚ್ಚಾಗಿರುವುದುನ್ನು ತಿದ್ದಿಕೊಳ್ಳುವುದು). ಮಾರ್ಗಕಾರನು ದಂಡಿಯ ಶ್ಲೋಕವನ್ನು ಯಥಾವತ್ತಾಗಿ ಅನುವಾದ ಮಾಡಿರುವುದು ಸ್ಪಷ್ಟವಾಗಿದೆ :

ಜಾತಿಕ್ರಿಯಾಗುಣದ್ರವ್ಯವಾಚಿನೈಕತ್ರವರ್ತಿನಾ ।
ಸರ್ವವಾಕ್ಯೋಪಕಾರಶ್ಚೇತ್ ತದಾಹುರ್ದೀಪಕಂ ಯಥಾ ॥ – II, ೯೭

('ಧರ್ಮ'ಸೂಚಕ)ಪದವು ಒಂದು ನಿರ್ದಿಷ್ಟ ಸ್ಥಳದಲ್ಲಿ ನೆಲೆಗೊಳ್ಳುವುದೆಂದರೆ, ಅದು ಆದಿ ಮಧ್ಯ ಅಂತ ಸ್ಥಳಗಳಾಗಬಹುದು. ಮಾರ್ಗಕಾರನು ಆದಿದೀಪಕ ಪ್ರಭೇದಗಳಿಗೆ ಮಾತ್ರ ಲಕ್ಷ್ಯಗಳನ್ನು ಕೊಟ್ಟು 'ಮಧ್ಯಾಂತ ವ್ಯಾಪಕಮನದಂ ತಱಿಸಲ್ಗೀಪೆಟ್ಟಿ ವಿಕಲ್ಪ ಲಕ್ಷ್ಯದೊಳ್ ಕವಿ ಮುಖ್ಯರರ್' ಎಂದು ಮುಂದೆ (ಪ. ೫೮) ತಿಳಿಸಿದ್ದಾನೆ.

ಪದ್ಯ ೫೪ : **ಜಾತ್ಯನುಗತ ಆದಿದೀಪಕ :** "ಮಲಯಾನಿಲಂ ( = ವಸಂತಾರಂಭದಲ್ಲಿ ಮಲಯ ಪರ್ವತದಿಂದ ಬೀಸುವ ವಾಯು) ಒಯ್ಯನೆ ವಿಟಪಿಗಳೊಳ್ (=ಮರಗಳಲ್ಲಿ) ನೆಲೆಯಿಂ (=ಅವುಗಳ ಎಡೆಯಿಂದ) ಪಣ್ತೆಲೆಯಂ (=ಹಣ್ಣೆಲೆಗಳನ್ನು) ಕಳಲ್ಚುಗುಂ ; (ಹಾಗೂ) ಅವಱೆಡೆಯೆಡೆಯೊಳ್ (=ಆ ಎಲೆಗಳಿದ್ದ ಎಲ್ಲೆಡೆಗಳಲ್ಲಿ) ವಿಲಸಿತ ಕಳಿಕಾಕುಳ ಕೋಮಲಾಂಕುರಮನ್ (ಮೊಗ್ಗುಗಳಿಂದ ಕೂಡಿಕೊಂಡ ಕೋಮಲವಾದ ಚಿಗುರನ್ನು) ಪಡೆಗುಂ (=ಉಂಟುಮಾಡುತ್ತಾನೆ). ಇಲ್ಲಿ 'ಮಲಯಾನಿಲ'ವು ಏಕವಚನದಲ್ಲಿದ್ದರೂ ವಸಂತಾರಂಭದಲ್ಲಿ ಬಿಟ್ಟು ಬಿಟ್ಟು ಬೀಸುವ ಗಾಳಿಯ ಉರುಬುಗಳನ್ನು ಪ್ರತಿನಿಧಿಸುತ್ತಿದೆ ಎಂದು ಭಾವಿಸಿ, ಅದನ್ನು ಜಾತಿವಾಚಕವೆಂದೇ ತಿಳಿಯಬೇಕು. ಹೀಗೆ, ಜಾತಿವಾಚಕವಾದ ಮಲಯಾನಿಲವೆಂಬ ಪದವು ಪದ್ಯದ ಆದಿಯಲ್ಲಿದ್ದು, 'ವಿಟಪಿಗಳೊಳ್ ಪಣ್ತೆಲೆಯುಂ ಕಱಲ್ಚುಗುಂ' ಎಂಬ ವಾಕ್ಯದ ಕ್ರಿಯಾಪದಕ್ಕೆ ಕರ್ತೃವಾಗಿರುವುದಲ್ಲದೆ, '....ಕೋಮಲಾಂಕುರಮನ್ ಪಡೆಗುಂ' ಎಂಬ 'ವಾಕ್ಯಸಮೇತಿ'ಯ ಕ್ರಿಯಾಪದಕ್ಕೂ ಕರ್ತೃವಾಗಿದ್ದುಕೊಂಡು, ಎರಡು ವಾಕ್ಯಗಳಿಗೂ 'ದೀಪಕ'ವಾಗಿ ಪರಿಣಮಿಸಿದೆ.

ಪದ್ಯ ೫೫ : ಮೇಲಿನ ಪದ್ಯದಲ್ಲಿ ಜಾತಿವಾಚಕ ಕರ್ತೃಪದವು ಆದಿಯಲ್ಲಿರುವಂತೆ, ಇಲ್ಲಿ 'ತಿರಿತರ್ಕುಂ' (ಅಲೆದಾಡು, ತಿರುಗಾಡು) ಎಂಬ ಕ್ರಿಯಾಪದವು ಆದಿಯಲ್ಲಿದೆ. ಈ ಪದದ ಕ್ರಿಯೆಯು, 'ಜಳನಿಧಿ) ಪರಿಖಾವೃತ ಭೂಮಿಭಾಗಮಂ' (=ಸಮುದ್ರವೆಂಬ ಕಂದಕವು ಸುತ್ತುವರಿದ ಭೂಭಾಗವನ್ನು) ಎಂಬ ವಾಕ್ಯಕ್ಕೂ, 'ಭರದೆ ಸವಿಶೇಷರುಚಿರ ಸಂಭವ [ನಿ]ಧಿಯಂ, ಜಳಾಕರ ವಿಕ್ಷೇಪಕ ಕಕುದಂ ತರಮಂ' (=ಬೇಗನೆ ವಿಶೇಷ ಮನೋಹರವಾದ ಜನ್ಮಸ್ಥಾನವಾದ, ನಿರ್ಝರಿಗಳನ್ನು ಹೊರಹಾಕುವ ಪರ್ವತಶಿಖರಗಳ ನಡುವಣ ತೆರಪನ್ನು)

ಎಂಬ ವಾಕ್ಯಕ್ಕೂ 'ದೀಪಕ'ವಾಗಿ ಪರಿಣಮಿಸಿದೆ. ಹೀಗೆ, ಇದು 'ಆದಿಕ್ರಿಯಾನುಗತ ದೀಪಕ.'[೪೯]–

ಪದ್ಯ ೫೬ : 'ಗುಣಮಣಿ ವಿಶೇಷ ಭೂಷಣದಿಂ ಈ ತ್ವದೀಯಾಕಾರಂ' (=ಗುಣರತ್ನಗಳ ಒಡವೆಯಿಂದ ನಿನ್ನ ಆಕೃತಿಯೂ), 'ಶಶಧರ ಕಿರಣಾಭ ಭವದ್ ಯಶೋವಿತಾನದಿಂದ ಆಶೇಷಂ ಆಶಾವಳಯಂ' (=ಚಂದ್ರಕಿರಣ ಸಮವಾದ ನಿನ್ನ ಕೀರ್ತಿಯ ಹರಡುವಿಕೆಯಿಂದ ಎಲ್ಲ ದಿಗ್ವಲಯವೂ) ಹೆಚ್ಚು ವಿಶದವಾಯಿತು. 'ವಿಶದತರಮಾಯ್ತು' ಎಂಬಲ್ಲಿ 'ವಿಶದತರಂ' ಎಂಬುದನ್ನೆ ಆದಿಪದವಾಗಿ ಗ್ರಹಿಸಬೇಕು. ಅದು 'ವೈಶದ್ಯ' (ಸ್ವಚ್ಛತೆ, ಧಾವಳ್ಯ, ಪ್ರಕಾಶ) ಎಂಬ ಗುಣವನ್ನೆ ಸೂಚಿಸತಕ್ಕದ್ದು. 'ತ್ವದೀಯಾಕಾರಂ' ಮತ್ತು 'ಆಶಾವಲಯಂ' ಎಂಬ ಕರ್ತೃಪದಗಳುಳ್ಳ ಎರಡು ವಾಕ್ಯಗಳನ್ನೂ 'ದೀಪನ' ಮಾಡುತ್ತಿದೆ 'ವಿಶದತರಂ' ಎಂಬ ಗುಣವಾಚಿ. ಇಂತು ಈ ಪದ್ಯ 'ಗುಣಾನುಗತ ಆದಿ ದೀಪಕಕ್ಕೆ ದೃಷ್ಟಾಂತ'.

ಪದ್ಯ ೫೭ : 'ಉದಯಗಿರಿ ಶಿಖರ ವಿಶೇಷ ವಿಭೂಷಣ'ನಾದ 'ದಿವಸಕರಂ' (=ಸೂರ್ಯನು) 'ತಮೋರಿಪುಬಳಮಂ' (=ಕತ್ತಲೆಯೆಂಬ ಶತ್ರುಸೈನ್ಯವನ್ನು), 'ಪ್ರವಿಲೀನಂ ಮಾಡಿದಂ' (=ಕರಗಿಸಿಬಿಟ್ಟನು) ; ಹಾಗೆಯೇ, 'ತಾರಾವಿತಾನ ತೇಜಮನಟಿದಂ' (=ನಕ್ಷತ್ರಗಳ ಮೇಲ್ಕಟ್ಟಿನ ಪ್ರಕಾಶವನ್ನು ನಾಶಪಡಿಸಿದನು). ಈ ಪದ್ಯದ ಆದಿಯಲ್ಲಿರುವ 'ದಿವಸಕರನು' ತೇಜೋರೂಪವಾದ 'ದ್ರವ್ಯ'ವೇ ಆಗಿದ್ದಾನೆ. 'ದಿವಸಕರ' ಎಂಬ ಪದವು ಉಭಯ ವಾಕ್ಯಗಳಿಗೂ 'ದೀಪಕ'ವಾಗಿರುವುದೂ ಸ್ಪಷ್ಟವಾಗಿದೆ.

---

೪೯. 'ಪರಿಖಾವತ ಭೂಮಿಭಾಗಮಂಬರದೆ' : ಇದು ನಾವು ಅಂಗೀಕರಿಸಿದ ಪಾಠಕರ ಪ್ರತಿಯ ಪಾಠ. ಆದರೆ, ಮದ್ರಾಸು ಮುದ್ರಣದಲ್ಲಿರುವ '...ಭೂಮಿಭಾಗಮಂ ಭರದೆ' ಎಂಬ ಪಾಠವು ಅರ್ಥವೈಶದ್ಯ ದೃಷ್ಟಿಯಿಂದ ಅಂಗೀಕಾರಾರ್ಹವಾಗಿ ಕಾಣುತ್ತಿದೆ. ಟಿಪ್ಪಣಿಯಲ್ಲಿ ಇದನ್ನೇ ಅನುಸರಿಸಲಾಗಿದೆ.

'ಸವಿಶೇಷರುಚಿರ ಸಂಭವ ವಿಧಿಯಂ' ; ಎರಡು ಮುದ್ರಣಗಳಲ್ಲಿಯೂ ಇರುವ 'ವಿಧಿಯಂ' ಎಂಬ ಪಾಠವೇ ಪ್ರಕೃತ ಮುದ್ರಣದಲ್ಲಯೂ ಇದೆ. ಲಿಪಿಕಾರನ ಪ್ರಮಾದದಿಂದ 'ನಿಧಿಯಂ' ಎಂಬುದು 'ವಿಧಿಯಂ' ಎಂದಾಗಿರಬಹುದು.

ಈ ಪದ್ಯದಲ್ಲಿ 'ತಿರಿತರ್ಕುಂ' ಎಂಬ ಕ್ರಿಯಾಪದಕ್ಕೆ ಕರ್ತೃಪದವಿಲ್ಲ. ಮೇಲಿನ ಲಕ್ಷ್ಯದ 'ಮಲಯಾನಿಲಂ' ಎಂಬ ಕರ್ತೃಪದವನ್ನೇ ಇಲ್ಲಿಗೂ ಅನ್ವಯಿಸಬಹುದೆ?

## ೭. ಉಪಮಾ

(ಉಪಮಾಲಂಕಾರವು ಅರ್ಥಾಲಂಕಾರಗಳಲ್ಲೆಲ್ಲಾ ಅತಿ ವಿಶಾಲವಾದುದು. 'ಸಾದೃಶ್ಯ' ಅಥವಾ 'ಹೋಲಿಕೆ' ಈ ಅಲಂಕಾರದ ಮುಖ್ಯ ಕಾರ್ಯ. ಹೋಲಿಕೆಗೆ ಎರಡು ವಸ್ತುಗಳು ಬೇಕಷ್ಟೆ : ಒಂದು ಪ್ರಕೃತ (ಉಪಮೇಯ), ಇನ್ನೊಂದು ಅಪ್ರಕೃತ (ಉಪಮಾನ) ; ಈ ಉಪಮೇಯೋಪಮಾನಗಳಲ್ಲಿ ಕಂಡುಬರುವ ಗುಣಸಾಮಾನ್ಯವೆ 'ಸಾಧಾರಣ ಧರ್ಮ'. ಹೋಲಿಕೆಯನ್ನು ಸೂಚಿಸುವ ಮಾತು 'ಉಪಮಾವಾಚಕ'. ಇವೇ ಉಪಮಾಲಂಕಾರದ ನಾಲ್ಕು ಅಂಗಗಳು. ರೂಪಕಾದಿ ಅನೇಕ ಅರ್ಥಾಲಂಕಾರಗಳು ಸಾದೃಶ್ಯ ಮೂಲವಾದುವು. ಇದರಿಂದ ಉಪಮಾಲಂಕಾರದ ವ್ಯಾಪಕತ್ವವು ವ್ಯಕ್ತಪಡುತ್ತದೆ. ಆದ್ದರಿಂದಲೇ, ಇದರಲ್ಲಿ ಅನೇಕ ಭೇದಗಳನ್ನು ಗುರುತಿಸಿ ಇದನ್ನು 'ಉಪಮಾಪ್ರಪಂಚ' ವೆಂದು ಸಂಬೋಧಿಸಿದ್ದಾನೆ. ಬಹುಮಟ್ಟಿಗೆ ದಂಡಿಯನ್ನೆ ಅನುಸರಿಸಿರುವ ಮಾರ್ಗಕಾರನು ೨೬ ಉಪಮಾ ಪ್ರಭೇದಗಳನ್ನು ಹೆಸರಿಸಿ, ಅವುಗಳಿಗೆ ಲಕ್ಷ್ಯಗಳನ್ನು ಕೊಟ್ಟಿದ್ದಾನೆ).

ಪದ್ಯ ೫೯ : 'ವಾಸ್ತವವಾಗಿ ಬೇರೆ ಬೇರೆಯಾಗಿರುವ ನಾನಾ ವಸ್ತುಗಳನ್ನು ಯಾವುದಾದರೂ ರೀತಿಯಲ್ಲಿ 'ಪೋಲ್ಕೆ ಮಾಡುವುದು' ಉಪಮೆ ಎಂಬ 'ಮಾನಿತ' (ಗೌರವಕ್ಕೆ ಪಾತ್ರವಾದ) 'ಸದಳಂಕಾರಂ'. ಅದರದ್ದು 'ಅನೂನ ವಿಕಲ್ಪ ಪ್ರಪಂಚಂ' (=ಪರಿಪೂರ್ಣವಾದ ಬೇರೆ ಬೇರೆ ತೆರನುಳ್ಳ, ಪ್ರಪಂಚ.)

ಪದ್ಯ ೬೦ : **ವಸ್ತೂಪಮೆ** : 'ವನರುಹದಂತೆ ಮುಖಂ' ಇತ್ಯಾದಿಯಾಗಿ 'ಅನುರೂಪ'ವಾಗಿ ವರ್ಣಿಸುವುದು 'ವಸ್ತೂಪಮೆ'. (ಇಲ್ಲಿ, ಉಪಮಾನ, ಉಪಮೇಯ, ಉಪಮಾವಾಚಕ – ಮೂರೂ ಉಕ್ತವಾಗಿ 'ಸಾಧಾರಣ ಧರ್ಮ'ವು ಲುಪ್ತವಾಗಿದೆ. ಆಧುನಿಕ ಮತದಂತೆ ಇದು 'ಲುಪ್ತೋಪಮೆ'. ದಂಡಿ, 'ಇಯಂ ಪ್ರತೀಯಮಾನೈಕ ಧರ್ಮಾ ವಸ್ತೂಪಮೈವ ಸಾ' ಎಂದು ನಿರ್ವಚಿಸಿದ್ದಾನೆ. 'ರಾಜೀವಮಿವ ತೇ ವಕ್ತ್ರಂ' ಎಂಬ ದಂಡಿಯ ದೃಷ್ಟಾಂತದಲ್ಲೂ ಧರ್ಮವಾಚಕವಿಲ್ಲ. ಧರ್ಮವು ಅನುಕ್ತವಾದರೂ, ಮಾರ್ಗಕಾರನು ಹೇಳುವಂತೆ 'ಅನುರೂಪ' ವಸ್ತುಗಳಲ್ಲಿ ಧರ್ಮವು ಪ್ರತೀಯಮಾನವಾಗಿದ್ದರೆ, ಅದು ವಸ್ತೂಪಮೆ ಎಂದು ತಿಳಿಯಬೇಕು.

ಪದ್ಯ ೬೧ : **ಧರ್ಮೋಪಮೆ** : 'ತಳಿರ್ಗಳವೋಲ್ ಮೆಲ್ಲಿದುವೀ ತಳಂಗಳ್' (=ಈ ಅಂಗೈಗಳು ಚಿಗುರಿನಂತೆ ಮೃದು). 'ಅಳಿಕುಳದವೋಲ್ ವಿನೀಳಂಗಳ್ ನಿನ್ನಳಕಾಳಿಗಳ್' (=ನಿನ್ನ ಮುಂಗುರುಳು ತುಂಬಿವಿಂಡಿನಂತೆ ನೀಲಿ) : ಇಲ್ಲಿ 'ಮೆಲ್ಲಿದುವು', 'ವಿನೀಳಂಗಳ್' ಎಂಬ ಪದಗಳಲ್ಲಿ ಸಮಾನ

ಧರ್ಮವು ಪ್ರಕಟವಾಗಿರುವುದರಿಂದ ಇದು 'ಧರ್ಮೋಪಮೆ' ('ಧರ್ಮೋಪಮಾ ಸಾಕ್ಷಾತ್ ತುಲ್ಯ ಧರ್ಮಪ್ರಕಾಶನಾತ್.' – ದಂಡಿ)

ಪದ್ಯ ೬೨ : **ವಿಪರ್ಯಯೋಪಮೆ ;** 'ನಿನ್ನ ಮುಖದಂತೆ ಕಮಳಮಿದುನ್ನಿದ್ರಂ' (ನಿನ್ನ ಮುಖದ ಹಾಗೆ ಈ ತಾವರೆ ಪೂರ್ತಿಯಾಗಿ ಅರಳಿರುವುದು) ಉಪಮಾನ (ಅವರ್ಣ್ಯ)ವನ್ನೇ ಉಪಮೇಯ(ವರ್ಣ್ಯ)ದ ಸ್ಥಾನದಲ್ಲಿರಿಸಿ, ವಿಪರ್ಯಾಸ ಕ್ರಮದಲ್ಲಿ (ಹಿಂದುಮುಂದುಮಾಡಿ) ಹೋಲಿಕೆ ಮಾಡುವುದು 'ವಿಪರ್ಯಯೋಪಮೆ'. ಆರಕ್ತಂ = ಕೆಂಪು. ನನ್ನಿಯಿಂ [೫೦] = ನಿಜವಾಗಿ. ಪಲ್ಲವ = ಚಿಗುರು. (ಈಚಿನ ಲಕ್ಷಣ ಗ್ರಂಥಗಳಲ್ಲಿ ಇದು 'ಪ್ರತೀಪಾಲಂಕಾರ'ವೆಂದು ಪ್ರಸಿದ್ಧ).

ಪದ್ಯ ೬೩ : **ಅನ್ಯೋನ್ಯೋಪಮೆ :** 'ಕಮಲ ನಿನ್ನ ಮುಖದ ಹಾಗೆ, ಮುಖವೂ ಕಮಲದ ಹಾಗೆ' ಎಂದು ಹೇಳುವುದು 'ಅನ್ಯೋನ್ಯೋಪಮೆ' (ಇದರಲ್ಲಿ ಅನ್ಯೋನ್ಯೋತ್ಕರ್ಷ, ಎಂದರೆ ಒಂದರಿಂದ ಇನ್ನೊಂದಕ್ಕೆ ಹೆಚ್ಚುಗಾರಿಕೆ ಉಂಟಾಗುವುದೆಂದು ದಂಡಿಯ ವಿವರಣೆ : 'ಸೇಯಮನ್ಯೋನ್ಯೋತ್ಕರ್ಷ ಶಂಸಿನೀ'). (ಅರ್ವಾಚೀನ ಲಕ್ಷಣಕಾರರು ಇದನ್ನು 'ಉಪಮೇಯೋಪಮೆ' ಎಂದು ಕರೆದಿರುವರು. ಸದೃಶಗಳಾದ ಎರಡು ವಸ್ತುಗಳು ಹೊರತು ಮೂರನೆಯದು ಇಲ್ಲ ಎಂದು ಸೂಚಿತವಾಗುತ್ತದೆ.)

ಪದ್ಯ ೬೪ : **ನಿಯಮೋಪಮೆ :** 'ಸರಸಿಜದೊಳ್ ನಿನ್ನ ಮುಖಂ ಸದೃಷಂ ; ಪೋಲದು ಪೆಱತಂ' : ಒಂದು ಉಪಮೇಯಕ್ಕೆ ಒಂದೇ ಉಪಮಾನ, ಬೇರೆಯ ಉಪಮಾನವಿಲ್ಲ – ಎಂದರೆ ಇದು ನಿಯಮವಾಗುವುದು. ಆದ್ದರಿಂದ, ಇದು ನಿಯಮೋಪಮೆ ('ಅನ್ಯಸಾಮ್ಯ ವ್ಯಾವೃತ್ತೇಃ' – ಬೇರೆಯ ಹೋಲಿಕೆಯನ್ನು ಹೊರತುಪಡಿಸುವುದು – ದಂಡಿ).

ಪದ್ಯ ೬೫ : **ಅನಿಯಮೋಪಮೆ :** 'ಕಮಲವು ನಿನ್ನ ಮುಖದಲ್ಲಿ ಸದೃಶ ; ಬೇರೆಯದೂ ಕೂಡ ಅದೇ ರೀತಿ ಸದೃಶ' – ಇದು 'ನಿಯಮೋಪಮೆ'ಗೆ ವಿರುದ್ಧವಾದುದು. 'ನಿನ್ನ ಮುಖಕ್ಕೆ ಯಾವ ವಸ್ತುವನ್ನು ಬೇಕಾದರೂ

---

೫೦. 'ನನ್ನಿಯಿನೀ ಪಲ್ಲವಂ' : ಎರಡು ಮುದ್ರಿತ ಪ್ರತಿಗಳಲ್ಲಿಯೂ 'ನಿನ್ನಯನೀ' ಎಂಬ ಪಾಠವಿದೆ. ಮುಳಿಯ ತಿಮ್ಮಪ್ಪಯ್ಯನವರು 'ನಿರ್ನೆರಮೀ' ಎಂಬ ತಿದ್ದುಪಾಟನ್ನು ಸೂಚಿಸಿದ್ದಾರೆ. ಹೆಚ್ಚಿನ ಅಕ್ಷರ ವ್ಯತ್ಯಾಸವಿಲ್ಲದೆ, ಅಕ್ಷರ ಸ್ಥಾನಗಳನ್ನು ಪಲ್ಲಟ ಮಾಡಿ, ನಮ್ಮ ತಿದ್ದುಪಾಟಾಗಿದೆ. ಲಿಪಿಕಾರನ ಕೈಯಲ್ಲಿ ಈ ರೀತಿ ಅಕ್ಷರಸ್ಥಾನ ವ್ಯತ್ಯಯವಾಗುವ ಸಂಭವವುಂಟು.

ಹೋಲಿಸಬಹುದು' ಎಂದು ತಾತ್ಪರ್ಯ. ಇದು ಸಾಧ್ಯವೇ, ಎಂದರೆ – 'ಸಮವಾಯಂ (ಪರಸ್ಪರ ಸಾಮ್ಯ ಸಂಬಂಧ) ಉಳ್ಳೊಡೆ ಎಲ್ಲಂ ಸಮನಿಸುಗುಂ' ಎಂಬುದೇ ಸಮರ್ಥನೆ.

ಪದ್ಯ ೬೬ : **ಅತಿಶಯೋಪಮೆ :** 'ವದನಂ ಮದೀಯಲೋಚನ ಮುದಾವಹಂ' (ಮುಖವು ನನ್ನ ಕಣ್ಣುಗಳಿಗೆ ಸಂತೋಷಕಾರಿ) ; 'ಕಮಳಂ ಅಳಿಕುಳ ಉತ್ಸವಜನಕಂ' (=ಕಮಲವು ದುಂಬಿವಿಂಡಿಗೆ ಸಂತೋಷಕಾರಿ) ; 'ವಿದಿತ ವಿಭೇದಕ್ರಮಂ ಇಂತಿದಲ್ಲದೆ ಇಲ್ಲಂ' (ಮುಖಕ್ಕೂ ಕಮನಲಕ್ಕೂ) (=ಭೇದವೆಣಿಸುವ ರೀತಿ ಇದು ಅಲ್ಲದೆ ಬೇರೇನೂ ಇಲ್ಲ). ಈ ಒಂದು ಭೇದವೇ ಕಂಡುಬರತಕ್ಕ 'ಅತಿಶಯ', ಮುಖಕಮಲಗಳ ಸಾದೃಶ್ಯವನು ಮೀರಿದ ಹೆಚ್ಚಿನ ಅಂಶ. ಇದು ಹೊರತಾಗಿ ಮುಖಕಮಲಗಳು ಸದೃಶ್ಯ.

ಪದ್ಯ ೬೭ : **ಉಪಮೋತ್ಪ್ರೇಕ್ಷೆ :** 'ಈಕೆಯ ವದನಾಕಾರಂ, ಅನೇಕಾಂತಂ (=ಬಗೆಬಗೆಯಲ್ಲಿ ಕಾಣುವಂಥದು); (ಏನನ್ನಾದರೂ) ಹೋಲಬೇಕೆಂಬ ಕಾರಣಕ್ಕಾಗಿ, ಕನತ್‌ಕೋಕನದಕ್ಕೆ (=ಪ್ರಕಾಶಮಾನವಾದ ಕೆಂದಾವರೆಗೆ) ಮತ್ತು ಇಂದುಗೆ (=ಚಂದ್ರನಿಗೆ) ಅದಱೊಳ್ (=ಆ ಕಮಲದಲ್ಲಿ) ಉಂಟು ಆಕಾಂಕ್ಷಣಂ (=ಅಪೇಕ್ಷೆ, ಒಲವು ; ಎಂದರೆ ಹೋಲಿಕೆಯ ಕಡೆಗೆ ಒಲವು). ವದನಾಕಾರವು ಕೆಂದಾವರೆಯನ್ನೂ ಚಂದ್ರನನ್ನೂ ಹೋಲುವುದು ವಸ್ತುಸ್ಥಿತಿ ; ಹೋಲಿಕೆಗಾಗಿ ಹೋಲಿಕೆಯೇ ಹೊರತು, ವದನವು ಅನುಪಮ ಎನ್ನುವುದೇ ಇಲ್ಲಿನ ಉತ್ಪ್ರೇಕ್ಷೆ. ಆದ್ದರಿಂದ, ಇದು ಉಪಮೋತ್ಪ್ರೇಕ್ಷೆ.

ಪದ್ಯ ೬೮ : **ಅದ್ಭುತೋಪಮೆ :** 'ಕಮಳಂ, ಲಲಿತಭ್ರೂವಿಭ್ರಮಮಂ' (=ಲಲಿತವಾದ ಹುಬ್ಬಿನ ಬೆಡಗನ್ನೂ), 'ವಿಸ್ಮಿತವಿಲೋಲಲೋಚನಯು ಗಮಂ' (=ಅಚ್ಚರಿಪಡುವ ಚಂಚಲವಾದ ಕಣ್ಣೆರಡನ್ನೂ) 'ಸಮವಾಯಂ ಉಳ್ಳೊಡೆ' (=ಪರಸ್ಪರ ಸಾಮ್ಯ ಸಂಬಂಧವಾಗಿ ಹೊಂದಿದ್ದರೆ), 'ಅದು ನಿನ್ನ ಮೊಗಕ್ಕೆ ಎಣೆ' (=ಸರಿಜೋಡಿ). ಹುಬ್ಬಿನ ವಿಲಾಸ, ಬೆರಗಿನ ಕಣ್ಣು – ಇವೆರಡು ಮಾತ್ರ ಮುಖದ ಆಶ್ಚರ್ಯಕರ ವಿಶೇಷ ಗುಣಗಳು ; ಇವನ್ನು ಬಿಟ್ಟರೆ, ಮುಖಕ್ಕೂ ಕಮಲಕ್ಕೂ ಹೋಲಿಕೆಯುಂಟು.

ಪದ್ಯ ೬೯ : **ಮೋಹೋಪಮೆ :** 'ಭ್ರಮರಂ (=ತುಂಬಿ) ನಿನ್ನ ಮೊಗಕ್ಕೆ ಕಮಳವಿಮೋಹದಿಂ (=ಕಮಲ ಪುಷ್ಪದ ಆಕರ್ಷಣೆಯಿಂದ, ಎಂದರೆ, ಕಮಲದ ಆಕರ್ಷಕ ಗುಣವನ್ನು ಮುಖದಲ್ಲಿ ಕಂಡು), ವದನಂ ಇದು

ಅಲ್ತು ಎಂದು ಮೋಹದಿಂ (= ಭ್ರಾಂತಿಯಿಂದ), ಎಱಗುವುದು ; ಆ ಸರಸಿಜಮಂ ತೊಱೆವುದು.' – ಕಮಲದಲ್ಲಿ ತುಂಬಿಯನ್ನು ಸೆಳೆಯುವ ನಿಜವಾದ ಮೋಹಕ ಗುಣವಿದೆ ; ತತ್ಸದೃಶವಾದ ಗುಣಮಾತ್ರ (ಅದೇ ಗುಣವಲ್ಲ). ಮುಖದಲ್ಲಿರುವುದು ಈ ಸಮಾನಧರ್ಮವಾಗಿರುವುದರಿಂದ ಇದು 'ಮೋಹೋಪಮೆ'. (ಅರ್ವಾಚೀನ ಲಕ್ಷಣ ಗ್ರಂಥಗಳಲ್ಲಿ ಉಕ್ತವಾಗಿರುರ 'ಭ್ರಾಂತಿ ಮದಾಲಂಕಾರ'ದ ಛಾಯೆಯನ್ನು ಇಲ್ಲಿ ಗುರುತಿಸಬಹುದು).

ಪದ್ಯ ೭೦ : **ಸಂಶಯೋಪಮೆ** : 'ಇದು ಸರಸಿಜವೋ ಮುಖವೋ, ದ್ವಿರೇಫವೋ (=ತುಂಬಿಯೋ) ಲೋಲನಯನ ಯುಗವೋ, ಮನಸ್ಸಿನಲ್ಲಿ ಸಂಶಯವಾಗುವುದು.' ಇಲ್ಲಿ ಎರಡು ವಸ್ತುಗಳ (ಉಪಮೇಯೋಪಮಾನಗಳ) ನಡುವೆ ಸಾದೃಶ್ಯವಿರುವುದರಿಂದಲೇ ಸಂಶಯವುಂಟಾಗಿರುವುದು. (ಇದೇ ಈಚಿನ 'ಸಂದೇಹಾಲಂಕಾರ')

ಪದ್ಯ ೭೧ : **ಊರ್ಜಿತೋಪಮೆ** : 'ಸರಸಿರುಹಂ, ಇಂದು ದೀಧಿತಿಪರಾಜಿತ ಶ್ರೀವಿಲಾಸಂ' (= ಚಂದ್ರಕಾಂತಿಯಿಂದ ಗೆಲ್ಲಲ್ಪಟ್ಟ ಸೌಂದರ್ಯ ಸಂಪತ್ತನ್ನುಳ್ಳದು) ; 'ಈ ನಿನ್ನ ಮುಖಂ, ಹರಿಣಧರ ವಿಜಯ ಶೋಭಾಕರಂ' (=ಚಂದ್ರನ ಮೇಲೆ ಪಡೆದ ಗೆಲುವಿನ ಸೊಬಗನ್ನು ಹೊಂದಿರತಕ್ಕದ್ದು). (ದಂಡಿಯ ಕಾವ್ಯಾದರ್ಶದಲ್ಲಿ ಇದರ ಹೆಸರು 'ನಿರ್ಣಯೋಪಮೆ' ಎಂದಿದೆ). ಕಮಲ ವದನಗಳಿಗಿರುವ ಸಮಾನ ಧರ್ಮ ಸೌಂದರ್ಯ ; ಕಮಲದ ಸೌಂದರ್ಯವು ಚಂದ್ರಪ್ರಕಾಶಕ್ಕೆ ಕುಂದಿ ಅನೂರ್ಜಿತವಾಗಿರುವಲ್ಲಿ, (ವರ್ಣ್ಯವಾದ) ಮುಖ ಸೌಂದರ್ಯವು ಅದೇ ಚಂದ್ರಪ್ರಕಾಶವನ್ನು ಗೆದ್ದು ಊರ್ಜಿತವಾಗಿದೆ. ಆದ್ದರಿಂದ, ಇದು ಊರ್ಜಿತೋಪಮೆ. (ಮುಖಕಮಲಗಳ ಹೆಚ್ಚುಕಡಮೆಗಳನ್ನು ಚಂದ್ರಕಾಂತಿಯನ್ನೂ ಮೀರಿಸುವ ಮುಖದ ಕಾಂತಿ ನಿರ್ಣಯಿಸಿರುವುದರಿಂದ, ಇದನ್ನು ಕಾವ್ಯಾದರ್ಶದಲ್ಲಿ 'ನಿರ್ಣಯೋಪಮೆ' ಎಂದು ಕರೆದಿರಬಹುದು. ನಿರ್ಣಯ, ಊರ್ಜಿತತ್ವ – ಎರಡೂ ಒಂದೇ).

ಪದ್ಯ ೭೨ : **ಶ್ಲೇಷೋಪಮೆ** : 'ನಿನ್ನಾ ವದನಂ ಸರಸಿರುಹದವೋಲ್ ಪರಮ ಶ್ರೀನಿಳಯಂ', (೧. ವದನ: ಶ್ರೇಷ್ಠವಾದ ಸೌಂದರ್ಯದ ನೆಲೆ ; ೨. ಕಮಲ ; ಶ್ರೇಷ್ಠಳಾದ ಲಕ್ಷ್ಮಿಯ ವಾಸಸ್ಥಾನ) ; ಮತ್ತು 'ಶಶಧರ ಕಾಂತಿ ವಿರೋಧಿ ರೋಚಿ' (೧. ವದನ : ಚಂದ್ರಕಾಂತಿಯನ್ನು

ವಿರೋಧಿಸುವ ಎಂದರೆ ಅದಕ್ಕೆ ಸಮಾನವಾದ, ಇಲ್ಲವೆ ಅದನ್ನು ಮೀರಿಸಿರುವ, ಕಾಂತಿಯುಳ್ಳದ್ದು ; ೨. ಕಮಲ : ಚಂದ್ರಕಾಂತಿಯನ್ನು ವೈರಿಯಾಗಿ ಉಳ್ಳ ಎಂದರೆ ಅದನ್ನು ಸಹಿಸದ ಕಾಂತಿಯುಳ್ಳದ್ದು). ಹೀಗೆ, ಶ್ಲೇಷಾರ್ಥದ ಮೂಲಕ ಸಾದೃಶ್ಯವನ್ನು ಕಲ್ಪಿಸಿರುವ ಕಾರಣ, ಇದು 'ಶ್ಲೇಷೋಪಮೆ'.

ಪದ್ಯ ೭೩ : **ನಿಂದೋಪಮೆ :** 'ಸರಸೀಜಂ ಸರಜಂ' (=ಕಮಲವು ಸ + ರಜಂ ಎಂದರೆ ಪುಷ್ಪಧೂಳಿಯಿಂದ ಕೂಡಿದ್ದು ; ಇದು ಅದರ ದೋಷ) ; 'ಶಶಧರ ಬಿಂಬಂ ಅದು ಅತಿ ಕಳಂಕಿತಂ' (=ಚಂದ್ರಬಿಂಬವು ಅತಿ ಕಳಂಕದಿಂದ ಕೂಡಿದ್ದು) ; 'ನಿನ್ನ ಮೊಗಂ ನಿರುಮಮಾಗಿಯುಂ ಅವಱೊಳ್ (ಆ ಕಮಲ ಚಂದ್ರಗಳಲ್ಲಿ) ದೊರೆ (=ಸಮಾನ). ಇಲ್ಲಿ ಉಪಮಾನ ವಸ್ತುಗಳನ್ನು ದೋಷಪೂರ್ಣವೆಂದು ಹೇಳಿ ಅವುಗಳನ್ನು ನಿಂದಿಸಿರುವುದರಿಂದ, ಇದು 'ನಿಂದೋಪಮೆ'. (ಮುಖವು 'ನಿರುಪಮ'ವಾಗಿರುವುದರಿಂದ ನಿಂದೆಗೆ ಒಳಗಾಗದು).

ಪದ್ಯ ೭೪ : **ಪ್ರಶಂಸೋಪಮೆ :** (ಇದು 'ನಿಂದೋಪಮೆ'ಗೆ ವ್ಯತಿರಿಕ್ತ ಎಂಬುದು ಸ್ವಯಂಸ್ಪಷ್ಟ) 'ಅಮೃತಭವಂ ಶಿಶಿರಕರಂ' (ಚಂದ್ರನು ತಂಪುಂಟು ಮಾಡತಕ್ಕವನು) ; 'ಕಮಳಂ ಜಗದೇಕ ಪಾವನೀಯ ಶ್ರೀಕಂ' (ಕಮಲವು ಲೋಕದಲ್ಲಿ ಏಕಮಾತ್ರ ಪವಿತ್ರಳೆನಿಸಿದ ಲಕ್ಷ್ಮಿಯನ್ನು ಉಳ್ಳದ್ದು) ; 'ನಿನ್ನ ಮೊಗಂ ಕ್ರಮದೆ ಅವಱೊಳ್ (ಅವುಗಳೊಂದಿಗೆ) ಸಮಂ.' ಮುಖವನ್ನು ಸದ್ಗುಣಗಳೊಂದಿಗೆ ಕೂಡಿರುವ ವಸ್ತುಗಳಿಗೆ ಹೋಲಿಸಿರುವುದರಿಂದ ಮುಖವನ್ನೂ ಪ್ರಶಂಸೆ ಮಾಡಿದಹಾಗಾಯಿತು.[೫೧]

ಪದ್ಯ ೭೫ : **ವಿರೋಧೋಪಮೆ :** 'ಶರದುದಿತ ಶಿಶಿರಕರನುಂ ಸರಸಿರುಹಮುಂ ಈ ತ್ವದೀಯ ವದನಮುಂ' (=ಶರತ್ಕಾಲದಲ್ಲಿ ಹುಟ್ಟಿದ ಚಂದ್ರನೂ ಕಮಲವೂ ಈ ನಿನ್ನ ಮುಖವೂ), 'ಇನಿತುಂ ದೊರೆಕೊಳಿಸುವೊಡೆ ಪರಸ್ಪರ ವಿರೋಧಿಗಳ್' (=ಸ್ವಲ್ಪವಾದರೂ ಹೋಲಿಕೆಗೊಳ್ಳುವುವು

---

೫೧. 'ಜಗದೇಕ ಪಾವನೀಯ ಶ್ರೀಕಂ' : ಎರಡು ಮುದ್ರಿತ ಪ್ರತಿಗಳಲ್ಲಿಯೂ 'ಪಾವನೀಯ' ಎಂದೇ ಇದೆ. ಶುದ್ಧಪಾಠವು 'ಪಾವನೀಯಾ' ಎಂದು ಇದ್ದಿರಬಹುದಲ್ಲವೆ? 'ಬ್ರಹ್ಮಣೋಪ್ಯುದ್ಭವಃ ಪದ್ಮಶ್ಚಂದ್ರಃ ಶಂಭುಶಿರೋಧೃತಃ ಎಂದು ಕಾವ್ಯಾದರ್ಶದಲ್ಲಿ ಪದ್ಮಚಂದ್ರಗಳಿಗೆ ಬ್ರಹ್ಮಶಂಭು ಸಂಬಂಧವಿರುವುದನ್ನು ಮಾರ್ಗಕಾರನು ತನ್ನ ಉದಾಹರಣ ಪದ್ಯದಲ್ಲಿ ಮಾರ್ಪಡಿಸಿರುವುದು ಗಮನಾರ್ಹ.

ಎನ್ನುವುದಾದರೆ ಅವು ಪರಸ್ಪರ ವಿರೋಧಿಗಳು). (ಕಮಲಕ್ಕೂ ಚಂದ್ರನಿಗೂ ವಿರೋಧ ; ಎರಡನ್ನೂ ಹೋಲುವ ಮುಖವೂ ಅವುಗಳೊಂದಿಗೆ ವಿರೋಧ ಹೊಂದಲೇಬೇಕಲ್ಲವೆ ?)

ಪದ್ಯ ೭೬ : **ತತ್ತ್ವಾಖ್ಯಾನೋಪಮೆ :** 'ನಿಜಕಾಮಿನಿಯಾ ಕಣ್ಗಳ್ ಅಲ್ಲ ಇವು, ಅಳಿಗಳ್ ಇವು ; ಇದೀ ವದನಮಲ್ತು, ನಳಿನಂ', ('ಇತಿವಿಸ್ಪಷ್ಟಸಾದೃಶ್ಯಾತ್ ತತ್ತ್ವಾಖ್ಯಾನೋಪಮೈವ ಸಾ' – ಕಾವ್ಯಾದರ್ಶ, II–೪೬). ಸುಸ್ಪಷ್ಟವಾದ ಸಾದೃಶ್ಯವನ್ನು – ತತ್ತ್ವವನ್ನು ಎಂದರೆ ಬೋಧವಾಗುವ ನಿಜಾಂಶವನ್ನು ಆಧಾರವಾಗುಳ್ಳ ಹೋಲಿಕೆಯನ್ನು – ತಿಳಿಸುವುದು ತತ್ತ್ವಾಖ್ಯಾನೋಪಮೆ.

ಪದ್ಯ ೭೭ : **ಅಸಾಧಾರಣೋಪಮೆ :** 'ನಿನ್ನ ಮೊಗಂ ತಾನೆ ದೊರೆ, ಹರಿಣಧರ (= ಚಂದ್ರ) ಸರಸಿಜಂಗಳ್ ಇವು ದೊರೆಯಲ್ಲ' (=ಸಮವಲ್ಲ). ಚಂದ್ರಕಮಲಗಳೊಡನೆ ಸಾಮ್ಯವನ್ನು ಅತಿಕ್ರಮಿಸಿ ಮುಖವು ನಿರುಪಮವಾಗಿರುವುದರಿಂದ ('ಚಂದ್ರಾರವಿಂದಯೋಃ ಕಕ್ಷ್ಯಾಮತಿಕ್ರಮ್ಯ' – ದಂಡಿ) ಇದು 'ಅಸಾಧಾರಣೋಪಮೆ'.

ಪದ್ಯ ೭೮ : **ಅಭೂತೋಪಮೆ :** 'ನಿನ್ನ ಮುಖಂ ಶಿಶಿರಕಿರಣಕಾಂತಿ ಪ್ರತತಿಯಂ (=ಚಂದ್ರಕಾಂತಿ ಸಮುದಾಯವನ್ನು) ಒಡಗೂಡಿ ಮಾಡಿದವೊಲ್ ಇಂತು ಅತಿಶಯಂ ಆಯಿತ್ತು'. ಮುಖಕಾಂತಿಯನ್ನು ಚಂದ್ರಕಾಂತಿಗೆ ಹೋಲಿಸುವುದರಿಂದ ಅತಿಶಯತೆ ಇಲ್ಲ ; ಅದು ಸಾಮಾನ್ಯ. ಚಂದ್ರಕಾಂತಿಯನ್ನು ಭಟ್ಟಿಯಿಳಿಸಿ ಒಗ್ಗೂಡಿಸಿ ಮಾಡಿದ ಮುಖ ಎಂದರೆ, 'ಅಭೂತ', (ಸಾಧಾರಣವಾಗಿ) ಇಲ್ಲದ್ದು.

ಪದ್ಯ ೭೯ : **ಅಸಂಭವೋಪಮೆ :** 'ಹರಿಣಧರನೊಳ್ ವಿಷಂ, ಮಲಯರುಹದೊಳ್ (= ಶ್ರೀಗಂಧದ ಮರದಲ್ಲಿ) ಅನಲಾರ್ಚಿ (=ಅಗ್ನಿಯ ಜ್ವಾಲೆ), ನಿನ್ನ ವದನೋದರದೊಳ್ (= ಬಾಯಿಯಲ್ಲಿ) ಪರುಷತರ ವಚನಮಪ್ಪುದು (=ಕಠಿನತರವಾದ ಮಾತು ಕೇಳಿ ಬರುವುದು), ದುರವಾಪಂ (= ದೊರಕುವುದು ಅಸಾಧ್ಯ) ಚಂದ್ರ, ಶ್ರೀಗಂಧದ ಮರ, ಮುಖ – ಇವು ಸದೃಶ ವಸ್ತುಗಳು ; ಇವುಗಳಲ್ಲಿ ಕಠಿನತೆ ಅಸಂಭವ ಎಂಬ ಅಂಶದಲ್ಲಿಯೂ ಸಾಮ್ಯವಿದೆ. ಹೀಗೆ ಇದು ಅಸಂಭವೋಪಮೆ.

ಪದ್ಯ ೮೦ : **ಬಹೂಪಮೆ :** 'ಈ ಲಲನಾಲಿಂಗನ ಸುಖಕರವಿಲಾಸಂ, ಮಲಯರುಹ (=ಶ್ರೀಗಂಧ), ಶಿಶಿರಕರ (=ಚಂದ್ರ), ಶೀತಲಿಕಾ ಕರಕ (=ತಣ್ಣನೆಯ ಆಲಿಕಲ್ಲು), ಇಂದುಕಾಂತಜಲ (ಚಂದ್ರಕಾಂತಶಿಲೆ ಸ್ರವಿಸುವ ನೀರು) –

ಇವುಗಳಂತೆ, ಶೀತಳಂ' (= ತಂಪಾಗಿರುವುದು) – ಇಲ್ಲಿ ಅಪ್ಪುಗೆಯ ತಂಪಾದ ಸುಖಾನುಭವಕ್ಕೆ ಒಂದಕ್ಕಿಂತ ಹೆಚ್ಚು ಉಪಮಾನಗಳನ್ನು ಕೊಟ್ಟಿರುವುದರಿಂದ ಇದು ಬಹೂಪಮೆ.

ಪದ್ಯ ೮೧ : **ಮಾಲೋಪಮೆ :** 'ಪ್ರಗಲ್ಭದೊಳ್ (=ಧೈರ್ಯದಲ್ಲಿ), ಮಾನನದೊಳ್ (=ಗೌರವದಲ್ಲಿ), ಮಾಹಾತ್ಮ್ಯದೊಳ್, ನಿಜೋದಾರತೆಯೊಳ್, ಅನುಪಮ ಗುಣದೊಳ್, ಘನಂ (=ಹೆಚ್ಚಾಗಿ), ಶ್ರೀಶಂ' (=ವಿಷ್ಣುವಿಗೆ ಸಮಾನ). ದಂಡಿಯ ಉದಾಹರಣ ಶ್ಲೋಕದಿಂದ ಇದು ಭಿನ್ನವಾಗಿದೆ :

ಪೂಷ್ಣ್ಯಾತಪ ಇವಾಹ್ನೀವ ಪೂಷಾ ವ್ಯೋಮ್ನೀವ ವಾಸರಃ ।
ವಿಕ್ರಮಸ್ತ್ವಯ್ಯಧಾಲ್ಲಕ್ಷ್ಮೀಮಿತಿ ಮಾಲೋಪಮಾಕ್ರಮಃ ॥ – II, ೪೨

[ಬಿಸಿಲು ಸೂರ್ಯನಿಗೆ ಹೇಗೋ ಹಾಗೆ, ಸೂರ್ಯನು ದಿವಸಕ್ಕೆ ಹೇಗೋ ಹಾಗೆ, ದಿವಸವು ಆಕಾಶಕ್ಕೆ ಹೇಗೋ ಹಾಗೆ ಪರಾಕ್ರಮವು ನಿನಗೆ ಸೊಬಗನ್ನು (ಲಕ್ಷ್ಮೀ)ನೀಡಿದೆ ; ಇದು ಮಾಲೋಪನಮೆಯ ಕ್ರಮ.

ಈ ಲಕ್ಷ್ಯದಲ್ಲಿ ಕಂಡುಬರುವ ಮಾಲಾಬಂಧ ಚಮತ್ಕಾರವು ಮಾರ್ಗಕಾರನ ಪದ್ಯದಲ್ಲಿ ಇಲ್ಲವಾಗಿದೆ. ತನ್ನ ಲಕ್ಷ್ಯಪದ್ಯದಲ್ಲಿ ಮಾರ್ಗಕಾರನು ನೃಪತುಂಗನನ್ನೆ ವಿಷ್ಣುವಿಗೆ ಸಮಾನವೆಂದು ವರ್ಣಿಸಿರುವ ಹಾಗೆ ಕಾಣಬರುತ್ತದೆ.]

ಪದ್ಯ ೮೨ : **ವಾಕ್ಯೋಪಮೆ :** 'ಆಲೋಲ ವಿಲೋಚನ ಮುದಿತರಾಗಮಣಿ ವಿಲಸಿತ (ಮುಂ)[೫೨] ಭವದೀಯ ವದನಂ' (=ಚಂಚಲವಾದ ಕಣ್ಣುಗಳಿಂದ ಸಂತಸಗೊಂಡಿರುವುದೂ, ಕೆಂಪುರತ್ನದಿಂದ ಎಂದರೆ ಮಾಣಿಕ್ಯದಂತಿರುವ ಕೆಂದುಟಿಯಿಂದ ಸೊಬಗುವಡೆದಿರುವುದೂ ಆದ ನಿನ್ನ ಮುಖವು), 'ಪ್ರವಿಕಸಿತಾಂಬುಜವನಮಂ' (ಚೆನ್ನಾಗಿ ಅರಳಿರುವ ತಾವರೆಯ ವನವನ್ನು), 'ಸವಿಶೇಷಂ ಪೋಲ್ಗುಂ' ; (ಹೀಗೆ) 'ವಾಕ್ಯೋಪಮೆಯಂ ಎನ್ಗೆ'. ಇಲ್ಲಿ ಒಟ್ಟಿನಲ್ಲಿ ಒಂದು ವಾಕ್ಯಾರ್ಥವನ್ನು ಇನ್ನೊಂದು ವಾಕ್ಯಾರ್ಥದೊಂದಿಗೆ ಹೋಲಿಸುವುದು 'ವಾಕ್ಯೋಪಮೆ.'

ಅರಳಿದ ತಾವರೆಯಲ್ಲಿ 'ಲೋಲವಿಲೋಚನ'ವನ್ನೂ 'ರಾಗಮಣಿ'ಯನ್ನೂ

---

೫೨. 'ಅಲೋಲ.... ವಿಲಸಿತಮುಂ' : ಎರಡು ಮುದ್ರಿತ ಪ್ರತಿಗಳಲ್ಲಿಯೂ '....ವಿಲಸಿತಮಂ' ಎಂದೇ ಪಾಠವಿದೆ. ಇದು 'ಅಂಬುಜವನಂ' ಎಂಬ ಕರ್ಮಪದಕ್ಕೆ (ಉಪಮಾನ ವಿಶೇಷ್ಯಕ್ಕೆ) ವಿಶೇಷಣವಾಗಲು ಸಾಧ್ಯವಿಲ್ಲವಾದ್ದರಿಂದ 'ವದನಂ' ಎಂಬ ಕರ್ತೃಪದಕ್ಕೆ (ಉಪಮೇಯ ವಿಶೇಷ್ಯಕ್ಕೆ) ವಿಶೇಷಣವಾಗಬೇಕು. ಆದ ಕಾರಣ '... ವಿಲಸಿತಮುಂ' ಎಂಬ ಸಣ್ಣ ತಿದ್ದುಪಾಟು ಅಗತ್ಯ.

ಹೋಲುವ ತುಂಬಿ ಮತ್ತು ಕೇಸರ ಇರುವುದೆಂದು ಊಹಿಸಿಕೊಳ್ಳಬೇಕು. ಈ ಲಕ್ಷ್ಯಕ್ಕೆ ಸಂವಾದಿಯಾದ ದಂಡಿಯ ಲಕ್ಷ್ಯವು ವಾಕ್ಯಾರ್ಥಗಳ ಸಾದೃಶ್ಯದಲ್ಲಿ ಪರಿಪೂರ್ಣತೆಯನ್ನು ಹೊಂದಿದೆ. :

ತ್ವದಾನನಮಧೀರಾಕ್ಷಮಾವಿರ್ದಶನದೀಧಿತಿ ।
ಭ್ರಮದ್‌ಭೃಂಗಮಿವಾಲಕ್ಷ್ಯ ಕೇಸರಂ ಭಾತಿ ಪಂಕಜಂ ॥ – II,೪೪)

ಪದ್ಯ ೮೩ : **ಸಂಧಾನೋಪಮೆ :** (ಕಾವ್ಯಾದರ್ಶದಲ್ಲಿ ಇದು ಉಕ್ತವಾಗಿಲ್ಲ). (ಶ್ಲೇಷಾರ್ಥವುಳ್ಳ ಏಕರೂಪ ಪದಪ್ರಯೋಗದಿಂದ ಘಟಿತವಾದ ಸಾದೃಶ್ಯಾಭಾಸವುಳ್ಳ ಉಪಮಾನಗಳನ್ನು ಉಪಮೇಯದೊಂದಿಗೆ 'ಸಾಂಧಾನ' ಮಾಡುವುದು ಸಂಧಾನೋಪಮೆ – ಎಂದು ಇದರ ಲಕ್ಷಣವನ್ನು ವಿವರಿಸಬಹುದು.)

'ಕುಪಿತಾಕೃತಿ' (ಕುಪಿತ + ಆಕೃತಿ = ಕೋಪಗೊಂಡ ವ್ಯಕ್ತಿಯ ಆಕೃತಿ) ತರುತತಿಯವೋಲ್ ವಿಪರೀತಂ (೧.ವಿ. + ಪರೀತಂ = ಪಕ್ಷಿಗಳಿಂದ ಕೂಡಿದ್ದು ; ೨. ಯಥಾಸ್ಥಿತಿಯಲ್ಲಿ ಇಲ್ಲದ್ದು) ; ಶುದ್ಧ ಭೂಮಿಯವೋಲ್ ಅಪರಾಗಂ (೧. ಅ+ಪರಾಗಂ = ಧೂಳು ಇಲ್ಲದ್ದು ; ೨. ಅಪ + ರಾಗಂ = ಪ್ರೇಮವಿಲ್ಲದ್ದು) ; ಪದ್ಮಿನಿವೋಲ್ ಉಪಗತವಿಭ್ರಮರಹಿತಂ (೧. ಸಂಚಲನವಿಲ್ಲದ್ದು, ಇದ್ದಕಡೆ ಇರುವುದು ; ೨. ಸಹಜ ಸೌಂದರ್ಯವನ್ನು ಕಳೆದುಕೊಂಡದ್ದು.)

ಪದ್ಯ ೮೪ : **ಪ್ರತಿವಸ್ತೂಪಮೆ :**['ವಸ್ತುಕಿಂಚಿದುಪನ್ಯಸ್ಯ ನ್ಯಸನಂ ತತ್ ಸಧರ್ಮಣಃ ಸಾಮ್ಯಪ್ರತೀತಿರಸ್ತೀತಿ ಪ್ರತಿವಸ್ತೂಪಮಾ' – ಕಾವ್ಯಾದರ್ಶ (II, ೪೬) 'ಯಾವುದಾದರೂ ಒಂದು ವಸ್ತುವನ್ನು ಕುರಿತು ಹೇಳಿ, ಅದಕ್ಕೆ ಸಮಾನವಾದ ಧರ್ಮವುಳ್ಳ ಇನ್ನೊಂದು ವಸ್ತುವನ್ನು (ಪ್ರತಿವಸ್ತುವನ್ನು) ತಿಳಿಸುವುದರ ಮೂಲಕ ಅವುಗಳ ನಡುವಣ ಸಾಮ್ಯವು ಪ್ರತೀತವಾಗುವುದು' ಪ್ರತಿವಸ್ತೂಪಮೆ].

ಮಾರ್ಗಕಾರನ ಲಕ್ಷ್ಯ : 'ಧರಾಧಿಪಾ' (ರಾಜನೇ), 'ವಿತತಯಶನಿಲಯ ತಾರಾಪತಿ ದಿನಕರ ಸದೃಶ ತೇಜಂ ನಿನ್ನನ್ನಂ ಎಂಬುದುಂ ಉಂಟೇ' ('ವಿಶಾಲವಾದ ಕೀರ್ತಿಗೆ ನಿವಾಸನೂ, ಚಂದ್ರಸೂರ್ಯರಿಗೆ ಸಮನಾದ ತೇಜಸ್ಸುಳ್ಳವನೂ ಆದ ನಿನ್ನಂಥವನು (ಒಬ್ಬನಿರುವನು) ಎಂದು ಹೇಳುವುದಕ್ಕಾದರೂ ಅವಕಾಶವಿದೆಯೇ? – ಚಂದ್ರಸೂರ್ಯಸಮತೇಜಸ್ಸುಳ್ಳ ಆ ಇನ್ನೊಬ್ಬ (ಕಾಲ್ಪನಿಕ) ವ್ಯಕ್ತಿಯೆ ಇಲ್ಲ 'ಪ್ರತಿವಸ್ತು' ಇದರಿಂದ, ಮೊದಲು

ಹೇಳಿದ ರಾಜನಲ್ಲಿರುವ ಅದೇ ಗುಣ (ತೇಜಸು)) ಪ್ರತೀತವಾಗಿದೆ.

ಪದ್ಯ ೮೫ : **ಹೇತೂಪಮೆ :** 'ಹೇತು'ಎಂದರೆ ಕಾರಣ. ಉಪಮಾನೋಪಮೇಯಗಳ ಸಾದೃಶ್ಯಕ್ಕೆ ಕಾರಣಭೂತವಾದ ಸಮಾನಧರ್ಮವನ್ನು ಎತ್ತಿ ತೋರಿಸುವುದೇ 'ಹೇತೂಪಮೆ'.

ಧೈರ್ಯದಿಂದ (ಎಂದರೆ ಧೈರ್ಯವೇ ಕಾರಣವಾಗಿ) (ನೀನು ಸುರಗಿರಿಯ (=ಮೇರುವಿನ) ಹಾಗೆ ; ತೇಜಸ್ಸಿನಿಂದ 'ಅಂಬರಮಣಿ'ಯ (=ಸೂರ್ಯನ ಹಾಗೆ ; 'ಬಂಧುರ ಕಾಂತಿಗುಣದಿಂ' (= ಮನೋಹರವಾದ ಕಾಂತಿಗುಣನಿಮಿತ್ತ) 'ಶಶಾಂಕಂಬೋಲ್ (=ಚಂದ್ರನ ಹಾಗೆ).

### ಉಪಮಾಗುಣದೋಷಗಳು

ಪದ್ಯ ೮೬ : 'ಮಾನಧನರ್' (= ಕಾವ್ಯರಚನೆಯಲ್ಲಿ ಮಾನಕ್ಕೆ ಬೆಲೆ ಕೊಡುವವರು), 'ಲಕ್ಷ್ಯಾಗಮದೊಳ್' (= ಲಕ್ಷಣಾನುಗುಣವಾಗಿ ಕೃತಿರಚನೆ ಮಾಡುವ ಶಾಸ್ತ್ರದಲ್ಲಿ = ಕಾವ್ಯನಿಷ್ಠಲಕ್ಷಣ ಶಾಸ್ತ್ರದಲ್ಲಿ), 'ಹೀನಾಧಿಕ ಗುಣದೋಷ ವಿತಾನಮುಮಂ' (=ಉಪಮಾನಗಳನ್ನು ಕೊಡುವುದರಲ್ಲಿ ಕೀಳು ಮೇಲು ಎಂಬ ಭೇದಕ್ಕೆ ಸಂಬಂಧಿಸಿದ ಗುಣದೋಷಗಳ ಕಲ್ಪನೆಯನ್ನೂ), 'ಲಿಂಗವಚನ ಭೇದಂಗಳುಮಂ', 'ಅನುಮಾನಕ್ಕವಿರುದ್ಧಮಾಗೆ' (=ಯುಕ್ತಿಯುಕ್ತವಾಗಿ, ಊಹೆಗೆ ಮೀರದಂತೆ), 'ಅಜೆದುಪೇಟ್ಗೆ'.

ಪದ್ಯ ೮೭ : 'ನಿನ್ನಂತೆ ಸುರೇಶ್ವರಂ ಉತ್ಪನ್ನ ಮಹೈಶ್ವರ್ಯಂ', '(ನಿನ್ನಂತೆ) ಜಲನಿಧಿ ಸನ್ನುತ ಗಂಭೀರಂ' – ಎನ್ನುವಲ್ಲಿ 'ಹೀನಾಧಿಕಪ್ರಶಂಸೆ' ಗುಣಯುತ್ವಾಗಿಯೆ ಇದೆ. ಯಾವಾಗಲೂ ಉಪಮಾನವು ಗುಣದಲ್ಲಿ ಅಧಿಕ. ಆದ್ದರಿಂದ, ರಾಜನು ಉಪಮೇಯ ಆದರೆ, ಇಲ್ಲಿ, ಉಪಮಾನೋಪಮೇಯಗಳಲ್ಲಿ ವಿಪರ್ಯವಾಗಿ, 'ಅಧಿಕ'ವಾದದ್ದನ್ನು 'ಹೀನ'ಕ್ಕೆ ಹೋಲಿಸಲಾಗಿದೆ. ಹೀಗಿದ್ದರೂ, ಗುಣಾಧಿಕ್ಯವುಳ್ಳ ಸುರೇಶ್ವರ ಜಲನಿಧಿಗಳಿಗೆ ಹೀನತ್ವ ಪ್ರಾಪ್ತಿಯಾಗಿಲ್ಲ. ರಾಜನ ಐಶ್ವರ್ಯ ಗಾಂಭೀರ್ಯಗಳು ಪ್ರಕಾಶಗೊಂಡಿವೆಯಷ್ಟೆ. ಆದ್ದರಿಂದ, 'ಹೀನಾಧಿಕ ಪ್ರಶಂಸೆ'ಯಲ್ಲಿ ಇದು ಗುಣಭಾವಕ್ಕೆ ಉದಾಹರಣೆ.

ಪದ್ಯ ೮೮ : 'ಕೊಳದಂತೆ ಅಂಬರಂ (ಆಕಾಶವು) ಅತಿ ನಿರ್ಮಳಂ ; ಇಳೆಯೊಳ್ ಈತಂ ನಾಯ್ವೋಲ್ ಕರಂ ಎಂದುಂ ಸ್ವಾಮೀಭಕ್ತಂ'. – ಇಲ್ಲಿ ಉಪಮಾನಗಳು ಉಪಮೇಯಗಳಿಗಿಂತ ಗುಣದಲ್ಲಿ

'ಹೀನ'ವಾಗಿರುವುದರಿಂದ ಅವುಗಳ ಹೀನತ್ವ ಉಪಮೇಯಗಳಿಗೂ ಪ್ರಾಪ್ತವಾಗಿದೆ. ಆದ್ದರಿಂದ, 'ಹೀನಾಧಿಕ ಪ್ರಶಂಸೆ'ಯಲ್ಲಿ ಇದು ದೋಷಯುಕ್ತವಾದ ಉಪಮೆ.

ಪದ್ಯ ೮೯ : ಉಪಮಾಪ್ರಯೋಗದಲ್ಲಿ ಲಿಂಗವಚನಗಳಿಗೆ ಸಂಬಂಧಪಟ್ಟಂತೆ ಹೀನಾಧಿಕತೆಯ ದೋಷವುಂಟಾಗದೆಂದು ದಂಡಿ ಹೇಳಿ, ಲಕ್ಷ್ಯವನ್ನು ಕೊಟ್ಟಿದ್ದಾನೆ. ಮಾರ್ಗಕಾರನು ದಂಡಿಯ ಲಕ್ಷ್ಯವನ್ನು ಮಾತ್ರ ಭಾಗಶಃ ಅನುವಾದಮಾಡಿ ಕೊಟ್ಟಿದ್ದಾನೆ.

ದಂಡಿಯ ಲಕ್ಷಣ ವಿವರಣೆ :

ನ ಲಿಂಗವಚನೇ ಭಿನ್ನೇ ನ ಹೀನಾಧಿಕತಾಪಿ ವಾ ।
ಉಪಮಾದೂಷಣಾಯಾಲಂ ಯತ್ರೋದ್ವೇಗೋ ನ ಧೀಮತಾಂ ॥ – II, ೫೧

## ೮. ಅತಿಶಯೋಕ್ತಿ

ಪದ್ಯ ೯೧ : 'ವಿಶೇಷ ವಚಾರಮಂ ಮೇರೆಗಳೆದಿರೆ ಅಧಿಕೋಕ್ತಿಯೊಳ್, ತಗುಳ್ಚುವುದು ಅಕ್ಕುಂ ಸಾರತರಂ ಅತಿಶಯಾಲಂಕಾರಂ.'

ದಂಡಿಯ ಮೂಲಶ್ಲೋಕ :

ವಿವಕ್ಷಾ ಯಾ ವಿಶೇಷಸ್ಯ ಲೋಕಸೀಮಾತಿವರ್ತಿನೀ ।
ಅಸಾವತಿಶಯೋಕ್ತಿಃ ಸ್ಯಾದಲಂಕಾರೋತ್ತಮಾ ಯಥಾ ॥ – II, ೨೧೪

ಅತಿಶಯೋಕ್ತಿಯಲ್ಲಿ ಒಂದು 'ವಿಶೇಷ ವಿಚಾರ'ವನ್ನು 'ಮೇರೆಗಳೆದಿರೆ ('ಲೋಕಸೀಮಾತಿವರ್ತಿನಿ'ಯಾಗಿ, ಎಂದರೆ ಲೋಕದ ಸಂಭಾವ್ಯತೆಯ ಮೇರೆಯನ್ನು ಮೀರಿ) 'ಅಧಿಕೋಕ್ತಿಯೊಳ್ ತಗುಳ್ಚುವುದು' ಎಂದರೆ (ವಾಸ್ತವವಾಗಿ ಇರುವುದನ್ನೇ ಹೆಚ್ಚು ಮಾಡಿ ಹೇಳುವುದು 'ಅತಿಶಯೋಕ್ತಿ' ಎನಿಸುವುದು. ಎಂದ ಮೇಲೆ, ಇದರಲ್ಲಿ ಪ್ರಕೃತವೊಂದರ ವರ್ಣನೆಯಿರುತ್ತದೆಯೆ ಹೊರತು ಅಪ್ರಕೃತದ ಪ್ರಸಕ್ತಿಯಿರುವುದಿಲ್ಲ ; 'ಸ್ವಭಾವಾಖ್ಯಾನ' (III, ೬–೧೦) ಪ್ರಕಾರಗಳನ್ನೆ 'ಅತಿಶಯ' ರೀತಿಯಲ್ಲಿ ವರ್ಣಿಸುವುದೇ ಅತಿಶಯೋಕ್ತಿಯಾಗುತ್ತದೆ. ಈ ಅಲಂಕಾರವನ್ನು ದಂಡಿ 'ಅಲಂಕಾರೋತ್ತಮಾ' ಎಂದು ಕರೆದಿರುವುದನ್ನೆ ಮಾರ್ಗಕಾರನು ಬೇರೆಯ ಮಾತುಗಳಲ್ಲಿ 'ಕಾಂತಾಂತಿಕಂ' (III, ೯೦) ಎಂದೂ, 'ಸಾರತರಂ' ಎಂದೂ ಹೊಗಳಿದ್ದಾನೆ. ಎಂದರೆ, ಅಲಂಕಾರಗಳಲ್ಲೆಲ್ಲಾ ಇದು ಶ್ರೇಷ್ಠ ಎಂದು ಅರ್ಥವಾಗುತ್ತದೆ. ಇದು ವಿಚಾರಾರ್ಹವಾದ ಅಂಶ.

ಪದ್ಯ ೯೨ : ಇದು ಅತಿಶಯೋಕ್ತಿಯ ಉದಾಹರಣೆ ; ಮಾರ್ಗಕಾರನ ಸ್ವಂತ ಲಕ್ಷ್ಯ ಪದ್ಯ. ಇದರಲ್ಲಿ ಮಾರ್ಗಕಾರನು ಸಂಧ್ಯಾಕಾಲದ ಸನ್ನಿವೇಶವೊಂದನ್ನು ವರ್ಣಿಸಿ ತನ್ನ ಸ್ವೋಪಜ್ಞತೆಯನ್ನು ಪ್ರದರ್ಶಿಸಿದ್ದಾನೆ. ಲಕ್ಷ್ಯದ ಅರ್ಥ: "ಗೈರಿಕರಸಾರ್ದ್ರಮಂ, ಸಿಂದೂರದೆ ತಲೆವಟ್ಟಿದುದಂ ಮದವಾರಣಮಂ" (=ಬೆಟ್ಟಗಳಲ್ಲಿರುವ 'ಗೈರಿಕ' (ಗಿರಿಸಂಬಂಧವಾದದ್ದು ಗೈರಿಕ) ಎಂಬ ಕೆಂಪು ಧಾತುವಿನಿಂದ (Red Chalk) (ಮೈಯೆಲ್ಲ) ತೊಯ್ದಿರುವದೂ, ಸಿಂದೂರವನ್ನು ('ಚಂದ್ರ'ವನ್ನು) ತಲೆಗೆಲ್ಲ ಬಳಿದಿರುವಂಥದೂ ಆದ ಮದಿಸಿದ ಆನೆಯನ್ನು), "ಆಂ ಸಂಧ್ಯಾರಾಗದೊಳ್ ಕರಂ ಕಂಡು ಅಱಿಯದೆ, ಸೋಂಕಿ, ಕೆಲದೊಳ್ ಒಯ್ಯನೆ ಪೋದೆಂ" (=ನಾನು ಸಂಜೆಗೆಂಪಿನಲ್ಲಿ ಚೆನ್ನಾಗಿ ಕಂಡು (ಅದನ್ನು ಆನೆಯೆಂದು) ಅರಿಯದೆ, ಸೋಕಿಕೊಂಡು ಅದರ ಪಕ್ಕದಲ್ಲಿ ಮೆಲ್ಲನೆ ಹೋದೆನು)

ಸಂಜೆಗೆಂಪಿನಲ್ಲಿ, ಬೆಟ್ಟದ ತಪ್ಪಲಿನಲ್ಲಿ, ಒಬ್ಬ ವ್ಯಕ್ತಿ ಒಂದು ಮದ್ದಾನೆಯನ್ನು ಸಂಧಿಸುತ್ತಾನೆ. ಅದು ಬೆಟ್ಟದ ತಪ್ಪಲಿನಲ್ಲಿ ವಿಹರಿಸುತ್ತಿದ್ದದ್ದಾದ್ದರಿಂದ ಅಲ್ಲಿನ ಗೈರಿಕಧಾತುಮಿಶ್ರಿತವಾದ ಝರಿಯ ನೀರಿನಿಂದ ಅದರ ಮೈಯೆಲ್ಲ ತೊಯ್ದು, ತತ್ಪರಿಣಾಮವಾಗಿ ಕೆಂಪಾಗಿದೆ. ಅದರ ತಲೆ ಚಂದ್ರದಿಂದ ಲೇಪಿತವಾಗಿದೆ. ಇದು ಪಳಗಿಸಿದ ಆನೆಯೇ ಇರಬಹುದು. (ಮದವೇರಿ ಮದೋದಕ ಸುರಿಯುವ ಆನೆಯ ಕುಂಭಸ್ಥಲಕ್ಕೆ ಚಂದ್ರವನ್ನು ಬಳಿಯುವ ರೂಢಿಯುಂಟು ಎಂದು ಕವಿಸಮಯ). ಆ ವ್ಯಕ್ತಿ ಆನೆಯ ಪಕ್ಕದಲ್ಲಿಯೇ ಹೋದರೂ ಆನೆಯೆಂದು ಅರಿಯನು. ಆನೆಯನ್ನು ಬೆಟ್ಟವೆಂದೂ, ಅದರ ಮೈಗೆಂಪನ್ನು ಸಂಧ್ಯಾರಾಗವೆಂದೂ ಭ್ರಮಿಸಿದ್ದಾನೆ. ಈ ಭ್ರಮೆಗೆ ಕಾರಣ, ಎಲ್ಲೆಲ್ಲೂ ಹರಡಿದ್ದ 'ಅತಿಶಯ'ವಾದ ಸಂಜೆಗೆಂಪು. ಆನೆಯ ತಲೆಮೈಗಳ ಕೆಂಪು ಸಂಧ್ಯಾರಾಗದಲ್ಲಿ ಬೆರೆತು ಎರಡಕ್ಕೂ ಇದ್ದ ಭೇದ ತಟ್ಟನೆ ಅರಿವಿಗೆ ಬಾರದ್ದರಿಂದಲೇ ಆತ ಆನೆಯನ್ನೂ ಬೆಟ್ಟದ ತಪ್ಪಲೆಂದೇ ಭ್ರಮಿಸಿದ. ಈ ಸಕಾರಣವಾದ ಅಸಂಭವ ಘಟನೆಯ ನಿರೂಪಣೆಯಿಂದ ಸಂಜೆಗೆಂಪಿನ ಅತಿಶಯತೆಯನ್ನೆ ವರ್ಣಿಸಿದಂತಾಗಿದೆ.

ಪದ್ಯ ೯೩–೯೪ ; ಇವು ಕೂಡ 'ಅತಿಶಯೋಕ್ತಿ'ಯ ಅಲಂಕಾರಕ್ಕೆ ನಿದರ್ಶನಗಳು. ೯೩ನೆಯ ಪದ್ಯದಲ್ಲಿ ಬೆಳುದಿಂಗಳಿನ ಅತಿಶಯತೆಯನ್ನೂ ೯೪ನೆಯ ಪದ್ಯದಲ್ಲಿ (ಒಬ್ಬ ರಾಜವ್ಯಕ್ತಿಯ, ಬಹುಶಃ ನೃಪತುಂಗನ) ಯಶೋರಾಶಿಯ

ಅತಿಶಯತೆಯನ್ನೂ ವರ್ಣಿಸಲಾಗಿದೆ. ಇವೆರಡೂ ದಂಡಿಯ ಲಕ್ಷ್ಯ ಪದ್ಯಗಳನ್ನು ಅನುಸರಿಸಿವೆ.

ಮಲಯಜ ಚರ್ಚಿತೆ = ಶ್ರೀಗಂಧ'ವನ್ನು (ಮೈಗೆ) ಬಳಿದುಕೊಂಡಿರುವವಳು. ಧವಳಾಭರಣೆ = ಬಿಳಿಯೊಡವೆಯನ್ನು ತೊಟ್ಟಿರುವವಳು. ದುಕೂಲಾಂಬರೆ ರೇಷ್ಮೆಯ ಬಟ್ಟೆಯನ್ನು ಧರಿಸಿದವಳು. ಜ್ಯೋತ್ಸ್ನಾವಿಲಾಸ = ಬೆಳುದಿಂಗಳ ಸೊಬಗು. ಆಶಾವಳಯಿತಲೋಕಾಕಾಶಂ = ದಿಕ್ಕುಗಳಿಂದ ಸುತ್ತುವರಿಯಲ್ಪಟ್ಟ ಲೋಕಾಕಾಶ. (ವಿಶಾಲಂ ಭುವನತ್ರಿತಯೋದರಂ' ಎಂದು ದಂಡಿ ಹೇಳಿರುವುದನ್ನು 'ಲೋಕಾಕಾಶಂ ಇದೇನತಿ ವಿಶಾಲಮೋ' ಎಂದು ಮಾರ್ಗಕಾರನು ಮಾರ್ಪಡಿಸಿರುವುದು ಜೈನ ಮತಾನುಸಾರಿಯಾಗಿದೆ).[೫೩] ಇಂದುದ್ಯುತಿ = ಚಂದ್ರಕಾಂತಿ, ನಿಕಾಶ = ಹೋಲುವ, ಸಮನಾದ, ಅಳವಿಗಟಿ = ಮಿತಿಮೀರು.

## ೯. ಸದೃಶಯೋಗಿತಾ

ಪದ್ಯ ೯೫ : ಲಕ್ಷಣ ನಿರೂಪಣೆಯ ಈ ಪದ್ಯವು ಬಹುಮಟ್ಟಿಗೆ ದಂಡಿಯ ಶ್ಲೋಕವನ್ನೇ ಅನುಸರಿಸಿದೆ. ವ್ಯತ್ಯಾಸವೆಂದರೆ, ದಂಡಿ ಈ ಅಲಂಕಾರವನ್ನು 'ತುಲ್ಯಯೋಗಿತಾ' ಎಂದು ಕರೆದಿದ್ದಾನೆ. ಪದ್ಯದ ತಾತ್ಪರ್ಯ : ಸ್ತುತಿಸುವ ಇಲ್ಲವೆ ನಿಂದಿಸುವ ಮೂಲಕ (ಒಂದು ವಸ್ತುವಿನ ಇಲ್ಲವೆ ವ್ಯಕ್ತಿಯ, ಎಂದರೆ 'ಪ್ರಕೃತ'ದ)ವಿವಕ್ಷಿತ ಗುಣವನ್ನು ಇನ್ನೊಂದರಲ್ಲಿ (ಎಂದರೆ ಅಪ್ರಕೃತದಲ್ಲಿ) ಸದೃಶವಾಗಿರುವಂತೆ ('ಸಮೀಕೃತ್ಯ' = ಸಮೀಕರಿಸಿ)

---

೫೩. "ಜೀವಾದಿ ಪದಾರ್ಥಗಳನ್ನು ತನ್ನೊಳಗೆ ಇಟ್ಟುಕೊಂಡುದು ಆಕಾಶವು ; ಪಾಶ್ಚಾತ್ಯ ಶಾಸ್ತ್ರಜ್ಞರ 'ಸ್ಪೇಸ್' ಶಬ್ದವು ಹೇಳುವ ಅರ್ಥವನ್ನೇ ಆಕಾಶ ಶಬ್ಧವು ಹೇಳುವುದು. ಆಕಾಶವು ನಿತ್ಯವೂ ವ್ಯಾಪಕವೂ ಜೀವ, ಪುದ್ಗಲ, ಧರ್ಮ, ಅಧರ್ಮ, ಕಾಲ ಇವುಗಳ ಆಶ್ರಯವೂ ಆಗಿದೆ. ಜೈನರು ಆಕಾಶದಲ್ಲಿ ಲೋಕಾಕಾಶವೆಂದೂ ಅಲೋಕಾಕಾಶವೆಂದೂ ಎರಡು ಭಾಗಗಳನ್ನು ಹೇಳುವರು. ಲೋಕಾಕಾಶದ ಸುತ್ತಲೂ ಅನಂತವೂ ಶೂನ್ಯವೂ ಆದ ಅಲೋಕಾಕಾಶವುಂಟು. ಪದಾರ್ಥಗಳ ಪರಿವರ್ತನಕ್ಕೆ ಸಹಾಯವಾದ ಅಜೀವ ತತ್ತ್ವವು ಕಾಲವೆನಿಸುವುದು. ಕಾಲವು ನಿತ್ಯವೂ ಅಮೂರ್ತವೂ ಲೋಕಾಕಾಶ ಪರಿಪೂರ್ಣವೂ ಅಸಂಖ್ಯವೂ ಆದುದು – (ಶ್ರೀ.ಮ.ಪ್ರ.ಪೂಜಾರ : 'ಜೈನಧರ್ಮ ಪರಿಭಾಷೆ', ಪು. ೧೧)

ಹೇಳುವುದು ಸದೃಶಯೋಗಿತಾಲಂಕಾರ. (ಈ ಅಲಂಕಾರದಲ್ಲಿ ಪ್ರಕೃತಾಪ್ರಕೃತಗಳ ನಡುವೆ ಗುಣೈಕ್ಯವನ್ನು ಅಥವಾ ಧರ್ಮೈಕ್ಯವನ್ನು ಹೇಳುವುದರಿಂದ ಇದು 'ಧರ್ಮೋಪಮೆ' ಎಂಬ ಉಪಮಾಭೇದವನ್ನೇ ಹೋಲುತ್ತದೆ. ಬಹುಶಃ ಇದನ್ನು ಮನಗಂಡೇ ಮಾರ್ಗಕಾರನು ಮುಂದಿನ ೯೮ನೆಯ ಪದ್ಯದಲ್ಲಿ, "ಉಪಮಾಭೇದಗಳ ಉಕ್ತಿಕ್ರಮಗಳು ಪ್ರಯೋಗಗಳಿಗೆ ಅನುಗುಣವಾಗಿ ಅಪರಿಮಿತವಾದ ನಿರೂಪಣ ವಿಧಾನಗಳಿಂದ ಉಪಲಕ್ಷಿತಗಳಾಗಿವೆ. ಬಲ್ಲವನು ನೃಪತುಂಗ ದೇವ ಮತದಂತೆ ಹೇಳಿರುವ ಆ ಉಪಮಾಭೇದ (ಲಕ್ಷಣ)ಗಳಿಂದ ಅವು ಯಾವ ಪ್ರಕಾರದವೆಂಬುದನ್ನು ನಿಶ್ಚಯಿಸಿಕೊಳ್ಳಬೇಕು. ('ತಟಿಸಲ್ಗೆ')" – ಎಂದು ಈ ಅಲಂಕಾರಕ್ಕೂ ಅನ್ವಯಿಸುವಂತೆ ಉಪಸಂಹಾರ ವಾಕ್ಯವನ್ನು ನುಡಿದಿದ್ದಾನೆ.

ಪದ್ಯ ೯೬ : ಈ ಪದ್ಯದಲ್ಲಿ ಒಬ್ಬ ರಾಜನನ್ನು (ಬಹುಶಃ ನೃಪತುಂಗನನ್ನು) ಕುರಿತು, 'ಅಷ್ಟದಿಕ್ಪಾಲಕರಂತೆ ನೀನು ಒಬ್ಬ ಲೋಕಪಾಲಕ ; ನೀನು ಒಂಭತ್ತನೆಯ ಲೋಕಪಾಲಕ' ಎಂದು ಸ್ತುತಿಸಿ, ದಿಕ್ಪಾಲಕರಲ್ಲಿಯೂ ಆತನಲ್ಲಿಯೂ 'ಲೋಕಪಾಲಕ'ತ್ವ ಎಂಬ ಗುಣದಲ್ಲಿ ಕಂಡುಬರುವ 'ಸಾದೃಶ್ಯಯೋಗ'ವನ್ನು (ಸಾಮ್ಯ ಸಂಬಂಧವನ್ನು) ತಿಳಿಸಿದೆ. (ದಂಡಿ ನಾಲ್ವರು ದಿಕ್ಪಾಲಕರನ್ನು ಮಾತ್ರ ಹೆಸರಿಸಿದ್ದಾನೆ). ಹುತವಹ = ಅಗ್ನಿ. ಯಕ್ಷ = ಕುಬೇರ.

ಪದ್ಯ ೯೭ : 'ಮೋಡದ ನೆರಳೂ ಹರಹೂ ವಿಲಾಸವೂ, (ಅಂತೆಯೆ) ಬೆಲಗುವ ಉದಿತ (= ಹುಟ್ಟಿದ) ವದ್ಯುಲ್ಲತೆಯೂ (=ಮಿಂಚೂ) ಹಾಗೂ ವಿಲಾಸಿನೀ ಜನದ (=ವಿಲಾಸವತಿಯರಾದ ಸ್ತ್ರೀಜನದ) ನಲ್ಮೆಯೂ ಸಂಗಮವೂ (=ಕೂಟವೂ) ನೆಲಸವು (=ಸ್ಥಿರವಾಗಿರತಕ್ಕವಲ್ಲ), ಆದಂ (=ಬಹುವಾಗಿ) ಚಲಂಗಳ್ (=ಚಲಿಸತಕ್ಕವು, ಹೊರಟು ಹೋಗತಕ್ಕವು).' ಇಲ್ಲಿ ಮೋಡದ ನೆರಳು, ಮಿಂಚು, ವಿಲಾಸವತಿಯರ ಪ್ರೇಮ – ಇವುಗಳಿಗೆ ಸದೃಶವಾಗಿರುವ ಚಾಂಚಲ್ಯ ಗುಣವನ್ನು ನಿಂದಾತ್ಮಕವಾಗಿ ತಿಳಿಸಿದೆ. (ಈ ಪದ್ಯವೂ ದಂಡಿಯ ಶ್ಲೋಕದ ಅನುವಾದ).

## ೧೦. ಆಕ್ಷೇಪಾಲಂಕಾರ

ಪದ್ಯ ೯೯ : 'ವಿದಿತ ಅರ್ಥವಿಪರ್ಯಾಸಾಸ್ಪದಮೆ ದಲ್ ಆಕ್ಷೇಪಮೆಂಬ ಅಳಂಕಾರಂ' – ಪ್ರಸಿದ್ಧವಾದ ಅರ್ಥವನ್ನು ವಿರೋಧಿಸುವುದು ಅಥವಾ

ಅಲ್ಲಗಳೆಯುವುದು 'ಆಕ್ಷೇಪಾಲಂಕಾರ'. ನಿತ್ಯದ ಬಳಕೆ ಮಾತಿನಲ್ಲಿಯೂ 'ಆಕ್ಷೇಪ'ವೆಂಬ ಪದಕ್ಕೆ 'ವಿರೋಧವನ್ನು ಸೂಚಿಸುವುದು' ಎಂಬ ಅರ್ಥವುಂಟಷ್ಟೆ. ಆಕ್ಷೇಪ ಎಂಬ ಪದದ ಅರ್ಥವಾದರೂ 'ಇಲ್ಲವೆನ್ನುವುದು' ಅಥವಾ 'ನಿರಾಕರಣೆ'. ಇದನ್ನೇ 'ಪ್ರತಿಷೇದೋಕ್ತಿರಾಕ್ಷೇಪಃ' ಎಂದು ದಂಡಿ ಸಂಕ್ಷೇಪವಾಗಿ ಹೇಳಿದ್ದಾನೆ.[೫೪]

ಪದ್ಯ ೧೦೦ : ವೃತ್ತಾಕ್ಷೇಪ 'ಮದನಶರಾನೀಕಂ' (=ಮದನಬಾಣ ಸಮೂಹವು), ಮೃದುತರ ಮಾರ್ಗದೆ (=ಅದು ಪುಷ್ಪಬಾಣ ಸಮೂಹವಾದ್ದರಿಂದ, ಬಹು ಮೃದುವಾದ ರೀತಿಯಲ್ಲಿ) ಕೆನ್ನಂ (=ವಿಶೇಷವಾಗಿ, ಹೆಚ್ಚಾಗಿ) ಒಯ್ಯನೆ ಒಲವಂ ಪಡೆಗುಂ; ಹೃದಯಮಂ ಅೞಲಳವಿಂದೆ[೫೫] (=ದುಃಖದ ಬಲದಿಂದ) ಉಱೆ (=ಹೆಚ್ಚಾಗಿ) ವಿದಾರಿಸುವುದು (=ಸೀಳುವುದು, ಭೇದಿಸುವುದು) ; ಅದಱೆಂ ಕುಸುಮಮಯಮಲ್ತು'.

---

೫೪ 'ವೃತ್ತಾಕ್ಷೇಪ', 'ಅನುಶಯಾಕ್ಷೇಪ', 'ಶ್ಲೇಷಾಕ್ಷೇಪ', 'ಉಪಮಾಕ್ಷೇಪ', 'ಸಂಶಯಾಕ್ಷೇಪ', 'ಹೇತ್ವಾಕ್ಷೇಪ' – ಎಂಬಿವು ಮಾರ್ಗಕಾರನು ದಂಡಿಯನ್ನು ಅನುಸರಿಸಿ ಹೇಳಿರುವ 'ಆಕ್ಷೇಪ'ದ ಕೆಲವು ಒಳಭೇದಗಳು. ತ್ರಿಕಾಲವನ್ನು ಅನುಸರಿಸಿ ದಂಡಿ 'ವೃತ್ತಾಕ್ಷೇಪ', 'ವರ್ತಮಾನಾಕ್ಷೇಪ', ಭವಿಷ್ಯದಾಕ್ಷೇಪ', ಎಂದು ಮೂರು ಭೇದಗಳನ್ನು ಹೇಳಿದ್ದಾನೆ. ಇವಲ್ಲದೆ, ದಂಡಿಯು ನಿರೂಪಿಸಿರುವ ಇತರ ಭೇದಗಳು ಇವು : 'ಧಮಾಕ್ಷೇಪ', 'ಧರ್ಮ್ಯಾಕ್ಷೇಪ', 'ಕಾರಣಾಕ್ಷೇಪ', 'ಕಾರ್ಯಾಕ್ಷೇಪ', 'ಅನುಜ್ಞಾಕ್ಷೇಪ', 'ಅನಾದರಾಕ್ಷೇಪ', 'ಆಶೀರ್ವಚನಾಕ್ಷೇಪ', 'ಪರುಷಾಕ್ಷೇಪ', 'ಸಾಚಿವ್ಯಾಕ್ಷೇಪ', 'ಯತ್ನಾಕ್ಷೇಪ', 'ಶ್ಲಿಷ್ಟಾಕ್ಷೇಪ', 'ಸಂಶಯಾಕ್ಷೇಪ', 'ಅರ್ಥಾಂತರಾಕ್ಷೇಪ', 'ಹೇತ್ವಾಕ್ಷೇಪ' ಇವುಗಳ ಲಕ್ಷ್ಯಲಕ್ಷಣಗಳನ್ನು ವಿವರಿಸಿಯಾದಮೇಲೆ, 'ಅನಯೈವದಿಶಾನ್ಯೇಪಿ ವಿಕಲ್ಪಾಃ ಶಕ್ಯಮೂಹಿತುಂ' (ಇದೇ ರೀತಿಯಲ್ಲಿ ಇತರ ಪ್ರಕಾರಾಂತಗಳನ್ನೂ ಊಹಿಸಿಕೊಳ್ಳುವುದು ಸಾಧ್ಯ) ಎಂದು ಆ ಕಾರ್ಯವನ್ನು ನಮಗೇ ಬಿಟ್ಟಿದ್ದಾನೆ!

ಮೇಲಿನ 'ಆಕ್ಷೇಪಚಕ್ರ'ದಿಂದ ಕೆಲವನ್ನು ಮಾತ್ರ ಆಯ್ದುಕೊಂಡಿರುವುದು ಮಾರ್ಗಕಾರನ ವಿವೇಕಕ್ಕೆ ನಿದರ್ಶನ.

ಮಾರ್ಗಕಾರನು ಸ್ವತಂತ್ರಾಲೋಚನೆಯನ್ನೂ ಮಾಡಬಲ್ಲನೆಂಬುದಕ್ಕೆ, ಮುಂದೆ (೧೦೯ನೆಯ ಪದ್ಯದಲ್ಲಿ) 'ಆಕ್ಷೇಪ'ವನ್ನು ಕುರಿತು 'ವ್ಯತಿರೇಕ ವಿಕಲ್ಪಮಿದು' ಎಂದು ನುಡಿದಿರುವುದು ಸ್ಪಷ್ಟಸಾಕ್ಷಿ. ಅಥವಾ, ಅವನೇ ಸೂಚಿಸುವಂತೆ, 'ನೃಪತುಂಗ ದೇವಾನುಮತ'ದಿಂದ ಮಾಡಿದ ನಿರ್ಣಯ ಎಂದೆಣಿಸಿದರೂ ಪ್ರತ್ಯವಾಯವಿಲ್ಲ.

೫೫. 'ಅೞಲಳವಿಂದೆ' : 'ಅಳವಳವಿಂದೆ' ಎಂದು ಪಾಠಕರ ಪ್ರತಿಯಲ್ಲಿಯೂ, 'ಅಳವಳಲಿಂದೆ' ಎಂದು ಮದ್ರಾಸಿನ ಮುದ್ರಣದ ಪ್ರತಿಯಲ್ಲಿಯೂ ಪಾಠಾಂತರಗಳಿವೆ. ಎರಡೂ ಅಶುದ್ಧಗಳೆಂಬ ಗ್ರಹಿಕೆಯಿಂದ, 'ಅಳಲಳವಿಂದುಱೆ' ಎಂದು ಪ್ರಕೃತ ಮುದ್ರಣದಲ್ಲಿ ತಿದ್ದುಪಾಟು ಮಾಡಿದೆ. 'ಅದವೞಲಿಂದುಱೆ' ಎಂದಿರಬಹುದೆ?

ಇದು ದಂಡಿ ಕೊಟ್ಟಿರುವ 'ವೃತ್ತಾಕ್ಷೇಪ'ದ ಲಕ್ಷ್ಯದಿಂದ ಕೆಲಮಟ್ಟಿಗೆ ಭಿನ್ನವಾಗಿದೆ. ಮೃದುವಾದ ರೀತಿಯಲ್ಲಿ ಒಲವನ್ನು ಪಡೆಯುವ ಮನ್ಮಥಬಾಣವು ಹೂವಿನದಲ್ಲ ಎಂಬ 'ಆಕ್ಷೇಪ'ಕ್ಕೆ ಮಾರ್ಗಕಾರನು ಕೊಟ್ಟಿರುವ ಕಾರಣವಿವರಣೆ ಹೆಚ್ಚಿನದು. ಅಲ್ಲದೆ, ದಂಡಿಯು ಲಕ್ಷಣವಿವರಣೆಗೆ ಇದು ಅನುಗುಣವಾಗಿಲ್ಲ.

ಪದ್ಯ ೧೦೧ : **ಅನುಶಯಾಕ್ಷೇಪ :** ಇಲ್ಲಿ ಒಬ್ಬ ವ್ಯಕ್ತಿ (ಬಹುಶಃ ವೃದ್ಧ) ತನ್ನ ಜೀವಿತಕಾಲದಲ್ಲಿ ಧನವನ್ನು ಗಳಿಸದೆ, ವಿದ್ಯಾಧನವನ್ನು ಗಳಿಸದೆ, ತಪಸ್ಸನ್ನಾದರೂ ಮಾಡದೆ, 'ಮನುಜತ್ವಮಫಲಮಾಯ್ತು' (ತಾನು ಮನುಷ್ಯನಾಗಿ ಹುಟ್ಟಿದ್ದು ವ್ಯರ್ಥವಾಯಿತು) ಎಂದು ಪಶ್ಚಾತ್ತಾಪ ಪಡುವುದನ್ನು ವರ್ಣಿಸುವ ಮೂಲಕ ಧನಾರ್ಜನೆ ಮುಂತಾದ ಸಫಲ ಕಾರ್ಯಗಳನ್ನು ಮಾಡದಿರುವುದನ್ನು 'ಆಕ್ಷೇಪ'ಮಾಡಿದೆ. 'ಅನುಶಯ' ಎಂದರೆ ಕೊರಗು, ಪಶ್ಚಾತ್ತಾಪ. (ಈ ಪದ್ಯ ದಂಡಿಯ ಲಕ್ಷ್ಯದ ಅನುವಾದ).

ಪದ್ಯ ೧೦೨ : **ಶ್ಲೇಷಾಕ್ಷೇಪ :** ಈ ಪದ್ಯದಲ್ಲಿ ಶ್ಲೇಷೆಯ ಮೂಲಕ ಚಂದ್ರನಿಗೂ ಮುಖಚಂದ್ರಕ್ಕೂ ಇರುವ ಸಾಮ್ಯವನ್ನು ತಿಳಿಸಿ, 'ತದ್ವೀಯ (=ನಿನ್ನ) ಮುಖಶಶಿಯಿರುವಾಗ ಶಶಿಯುದೇವುದು' (=ಶಶಿಯಿಂದ ಪ್ರಯೋಜನವೇನು?) ಎಂದು ಚಂದ್ರನ ಅಸ್ತಿತ್ವವನ್ನು 'ಆಕ್ಷೇಪ' ಮಾಡಿದೆ. (ದಂಡಿಯ ಶ್ಲೋಕಕ್ಕೂ ಇದಕ್ಕೂ ಸ್ವಲ್ಪ ವ್ಯತ್ಯಾಸವಿದೆ. ಅಲ್ಲಿನ 'ತಾರಕಾ' – ನಕ್ಷತ್ರ ಹಾಗೂ ಕಣ್ಣುಗುಡ್ಡೆ – ಎಂಬ ಶ್ಲೇಷಾರ್ಥಕ ಪದದ ಎಡೆಯಲ್ಲಿ 'ಕಾಂತಿ' ಎಂಬ ಮಾತು ಇಲ್ಲಿದೆ).

ಸರಸಿಜ ವಿರೋಧಿ = ೧. ಚಂದ್ರ : ಕಮಲವೈರಿ ; ೨. ಮುಖಚಂದ್ರ: ಕಮಲ ಸ್ಪರ್ಧಿ. ಕಾಂತ್ಯಾಕರ (ಕಾಂತಿ + ಆಕರ) = ೧. ಚಂದ್ರ : ಪ್ರಕಾಶದ ಮೂಲ; ೨. ಮುಖಚಂದ್ರ : ಸೌಂದರ್ಯ ಮೂಲ. ಅಮೃತಮಯಂ = ೧ ಚಂದ್ರ : ಅಮೃತದಿಂದ ತುಂಬಿದವನು, ಸುಧಾಪೂರ್ಣ; ೨ ಮುಖಚಂದ್ರ : ಅಮೃತಕ್ಕೆ ಸಮಾನವಾದ ಲಾವಣ್ಯರಸದಿಂದ ತುಂಬಿರತಕ್ಕದ್ದು.

ಪದ್ಯ ೧೦೩ : **ಉಪಮಾಕ್ಷೇಪ :** (ದಂಡಿ 'ಉಪಮಾಕ್ಷೇಪ'ವನ್ನು ನಿರೂಪಿಸಿಲ್ಲ. ಆತನು 'ಸಂಶಯಾಕ್ಷೇಪ'ಕ್ಕೆ ಕೊಟ್ಟಿರುವ ಲಕ್ಷ್ಯವನ್ನೇ ಸ್ವಲ್ಪ ಮಾರ್ಪಾಟಿನೊಂದಿಗೆ 'ಉಪಮಾಕ್ಷೇಪ'ಕ್ಕೆ ಮಾರ್ಗಕಾರನು ಉದಾಹರಣೆಯಾಗಿ ತಿರುಗಿಸಿಕೊಂಡು, 'ಸಂಶಯಾಕ್ಷೇಪ'ಕ್ಕೆ ಬೇರೊಂದು

ಸ್ವಂತ ಉದಾಹರಣೆಯನ್ನು ಕೊಟ್ಟಿರುವನು.)
'ಅದು ವರ ಹಂಸಕದಂಬಕಂ' (= ಹಂಸಗಳ ಗುಂಪು), 'ಶರದಂಬುದಮಲ್ತು' (=ಶರತ್ಕಾಲದ ಮೋಡವಲ್ಲ) ; 'ಮುಖರ ನೂಪುರಸಂವಾದಿ ರವಂ ಬಂಧುರಂ ನೆಗಟ್ದಿಪ್ಪುದು, ಅದಱಿಂ' (=ಕಾರಣವೇನೆಂದರೆ, ಸದ್ದುಮಾಡುವ ಗೆಜ್ಜೆಯ ಬಂಧುರ ನಾದ ಉಂಟಾಗುತ್ತಿದೆ).' ಇಲ್ಲಿ ಹಂಸಗಳ ಗುಂಪು ಶರತ್ಕಾಲದ ಮೋಡದಂತೆ ಬೆಳ್ಳಗಿದ್ದುವು ಎಂಬ ಅರ್ಥಪ್ರತೀತಿಯುಂಟಾಗುವುದರಿಂದ ಉಪಮಾ ಲಕ್ಷಣವಿದೆ ; 'ನೂಪುರಸಂವಾದಿರವ' ಕೇಳಿಬಂದದ್ದರಿಂದ, 'ಶರದಂಬುದಮಲ್ತು' ಎಂದು ಪ್ರತಿಷೇಧಿಸುವುದಕ್ಕೆ ಕಾರಣವಾಯಿತು. ಹೀಗೆ, ಇದು ಉಪಮಾಮೂಲಕವಾದ 'ಆಕ್ಷೇಪ'.

ಪದ್ಯ ೧೦೪ : **'ಸಂಶಯಾಕ್ಷೇಪ'** : 'ಮದಕರಿಯೋ' (= ಮದಿಸಿದ ಆನೆಯೋ) 'ಘನಸಮಯಾಂಬುದಮೋ' (=ಮಳೆಗಾಲದ ಮೋಡವೋ) ; 'ಘನಮಲ್ತು' (= ಮೋಡವಲ್ಲ) ; 'ಅದಱಿಕೊಳ್, ನೆಗಟ್ದುದು ಸಪ್ತಚ್ಛದಗಂಧಸುರಭಿ, ಪದುಳಂ ಮದಕರಿ'. (ಅದರಲ್ಲಿ ಏಳೆಲೆಬಾಳೆಯ ಕಂಪಿಗೆ ಸಮವಾದ ಸುಗಂಧವು ಉಂಟಾಗಿದೆಯಾದ್ದರಿಂದ ಅದು ದಿಟವಾಗಿ ಮದಿಸಿದ ಆನೆ). (ಮದ್ದಾನೆಯ ಕುಂಭಸ್ಥಲದಲ್ಲಿ ಸ್ರವಿಸುವುದೆಂದು ಹೇಳಲಾದ ಮದೋದಕವು ಸುಗಂಧಯುಕ್ತವೆಂದು ಪ್ರತೀತಿ). ಕಪ್ಪಾದ ಆನೆಯನ್ನು ಕಂಡು, ಅದು ಮಳೆಗಾಲದ ಕಪ್ಪು ಮೋಡವೆಂಬ ಸಂಶಯವು ಮೊದಲು ಉಂಟಾಗುವುದು ; ಮದೋದಕದ ಸುಗಂದವು ಅನುಭವಕ್ಕೆ ಬಂದ ಬಳಿಕ 'ಘನಮಲ್ತು' ಎಂಬ 'ಆಕ್ಷಪ'ಕ್ಕೆ ಎಡೆಯಾಗುವುದು.

ಪದ್ಯ ೧೦೫ : **'ಹೇತ್ವಾಕ್ಷೇಪ'** : 'ಮಾನಧನನೇ, ನಿನ್ನನ್ನು ಹೊಗಳಿಸುವುದೇತಕ್ಕೆ? ನೀನು ಹಾಗೆ ('ಉಂತೆ', ಎಂದರೆ ಹೊಗಳಿಸಿಕೊಳ್ಳುವ ಮಟ್ಟಿಗೆ) ದಾನಿಯೆ? (ಎಂದಿಗೂ ಅಲ್ಲ – ಇದೇ 'ಆಕ್ಷೇಪ'. ಹೀಗೆ ಆಕ್ಷೇಪಿಸಲು 'ಹೇತು' ಎಂದರೆ ಕಾರಣ, ಏನೆಂದರೆ) : 'ನಿನ್ನ ಕಸವರಂ (= ಚಿನ್ನ) ಎಂದುಂ ದೀನಾನಾಥರ ಕೆಯ್ಯದು, ದಾನಿಯದೆಂತು ?' ನಿನ್ನ ಚಿನ್ನವೆಲ್ಲ ದೀನಾನಾಥರ ಕೈಯಲ್ಲೇ ಇರಬೇಕಾದದ್ದು, ಅವರಿಗೆ ಸೇರಬೇಕಾದದ್ದು ; ಅದರಿಂದ ಅವರ ಕೈಯಲ್ಲೇ ಇದೆ. ಕೂಡಲೇ ಇಲ್ಲದ, ನೀನು ಹೇಗೆ ದಾನಿಯಾಗುವೆ?' ಇಂದು ನೀನು ಕೇವಲ ಮಾನಧನನಷ್ಟೆ). ಮಾರ್ಗಕಾರನು ದಂಡಿಯ

ಲಕ್ಷ್ಯವನ್ನೇ ಅನುವಾದ ಮಾಡಿದ್ದರೂ, ಅದನ್ನು ಹೆಚ್ಚು ಸೊಗಸುಗೊಳಿಸಿದ್ದಾನೆ. ದಂಡಿಯ ಶ್ಲೋಕ ;

ನ ಸ್ತೂಯತೇ ನರೇಂದ್ರ ತ್ವಂ ದದಾಸೀತಿ ಕದಾಚನ ।

ಸ್ವಮೇವ ಮತ್ವಾ ಗೃಹ್ಣಂತಿ ಯತಸ್ತ್ವದ್ಧನಮರ್ಥಿನಃ ॥ –II, ೧೬೭

ಪದ್ಯ ೧೦೬ : ಆಕ್ಷೇಪಾಲಂಕಾರವನ್ನು 'ಅನುಮತಿ'ಯಿಂದ (ಎಂದರೆ ಊಹೆಯಿಂದ) 'ವ್ಯತಿರೇಕ ವಿಕಲ್ಪಂ' ಎಂದು ತಿಳಿದುಕೊಳ್ಳಲಿ ಎಂದು ಮಾರ್ಗಕಾರನು ಇಲ್ಲಿ ಸೂಚಿಸಿದ್ದಾನೆ. ಇದು ಗಮನಾರ್ಹ. ಮಾತ್ರವಲ್ಲ; ಎರಡೂ ಅಲಂಕಾರಗಳ ಲಕ್ಷ್ಯಲಕ್ಷಣ ವಿವರಣೆಗಳನ್ನು ಪರಸ್ಪರ ಹೋಲಿಸಿ ಪರಿಭಾವಿಸಿದಲ್ಲಿ, ಮಾರ್ಗಕಾರನ ಮಾತಿನ ಯಥಾರ್ಥತೆ ವೇದ್ಯವಾಗುತ್ತದೆ. ದಂಡಿ ಈ ಮಾತನ್ನು ಹೇಳಿಲ್ಲ. ('ವ್ಯತಿರೇಕ' ವಿಷಯುಕ್ತ ವಿವರಗಳಿಗೆ III–೩೯ ರಿಂದ ೪೮ ಪದ್ಯಗಳ ಟಿಪ್ಪಣಿಗಳನ್ನು ನೋಡಿ).

ಪದ್ಯ ೧೦೭ : 'ಪ್ರತಿಪದಾರ್ಥ ತತ್ತ್ವಭೇದದಲ್ಲಿ ಪ್ರತಿಷೇಧವನ್ನು ಮಾಡುವುದೇ ಅತಿಶಯವಾದ ಆಕ್ಷೇಪಾಲಂಕಾರ' ಎಂದು 'ಆಕ್ಷೇಪ'ದ ಲಕ್ಷಣವನ್ನು ಮಾರ್ಗಕಾರನು ಇಲ್ಲಿ ಬೇರೆಯ ಮಾತುಗಳಲ್ಲಿ ಸ್ಪಷ್ಟಪಡಿಸಿದ್ದಾನೆ. ಇಲ್ಲಿ 'ಪ್ರತಿಪದಾರ್ಥ' ಎಂದರೆ 'ಸದೃಶವಸ್ತು' ಎಂದು ಅರ್ಥ ಹಿಡಿಯಬೇಕು.

## ೧೧. ಶ್ಲೇಷಾಲಂಕಾರ

ಪದ್ಯ ೧೦೮ : ಶ್ಲೇಷೆ – 'ಏಕರೂಪಧೀನ ವಚೋರಚಿತಂ ; ನಾನಾರ್ಥಂ'. ಒಂದೇ ರೂಪವನ್ನುಳ್ಳ ಪದದಲ್ಲಿ ಒಂದಕ್ಕಿಂತ ಹೆಚ್ಚು ಅರ್ಥಗಳು ಅಡಕವಾಗಿದ್ದರೆ ಅದು ಶ್ಲೇಷೆ.

('ಶ್ಲೇಷ' ಎಂದರೆ ಒಂದು ಇನ್ನೊಂದರೊಡನೆ ಕೂಡಿಕೊಂಡಿರುವುದು ಇಲ್ಲವೆ ಹೆಣೆದುಕೊಂಡಿರುವುದು. ಒಂದೇ ಪದದಲ್ಲಿ ನಾನಾರ್ಥಗಳು ಕೂಡಿಕೊಂಡಿರುವುದರಿಂದ ಅದು 'ಶ್ಲೇಷ' ಎನ್ನಿಸುತ್ತದೆ. ದಂಡಿಯ ಲಕ್ಷಣ ಶ್ಲೋಕ ಹೀಗಿದೆ :

ಶ್ಲಿಷ್ಟಮಿಷಅಟವನೇಕಾರ್ಥಮೇಕರೂಪಾನ್ವಿತಂ ವಚಃ ।

ತದಭಿನ್ನಪದಂ ಭಿನ್ನಪದಪ್ರಾಯಮಿತಿ ದ್ವಿಧಾ ॥ –II, ೩೧೦

ಪದವನ್ನು ಒಡೆಯದೆ ನಾನಾರ್ಥಗಳು ಪ್ರತೀತವಾದಲ್ಲಿ, ಅದು ಅಭಿನ್ನಪದ ಶ್ಲೇಷ (ಉದಾ., ರಾಜ : ದೊರೆ, ಚಂದ್ರ) ; ಪದವನ್ನು ಒಡೆಯುವುದರಿಂದ ನಾನಾರ್ಥಗಳು ಪ್ರತೀತವಾದರೆ, ಅದು ಭಿನ್ನಪದ ಶ್ಲೇಷ (ಉದಾ., ಸದಾನಭೋಗಂ : ಸದಾ =

ನಭೋ + ಗಂ = ಯಾವಾಗಲೂ ಆಕಾಶದಲ್ಲಿ ಸಂಚರಿಸುವವನು ; ಸ + ದಾನ + ಭೋಗಂ = ದಾನಕೊಡುವ ಸುಖವುಳ್ಳವನು). ಈ ಎರಡು ಸಂದರ್ಭಗಳಲ್ಲಿಯೂ ಪದವು 'ಏಕರೂಪಾನ್ವಿತ'ವಾಗಿರುತ್ತದೆ.

ಸ್ವತಂತ್ರವಾಗಿಯಾಗಲಿ ಉಪಮಾದಿ ಲಂಕಾರಗಳಲ್ಲಿಯಾಗಲಿ ಕೃತಿರಚನೆಯ ಸೊಬಗನ್ನು ಹೆಚ್ಚಿಸಿದಾಗ ಮಾತ್ರ ಶ್ಲೇಷಯ ಸಾರ್ಥಕ್ಯ. ದಂಡಿಯ ಈ ಉಕ್ತಿ ಗಮನಾರ್ಹ.

ಶ್ಲೇಷಃ ಸರ್ವಾಸು ಪುಷ್ಣಾತಿ ಪ್ರಾಯೋವಕ್ರೋಕ್ತಿಷು ಶ್ರಿಯಂ ।
ಭಿನ್ನಂ ದ್ವಿಧಾ ಸ್ವಭಾವೋಕ್ತಿರ್ವಕ್ರೋಕ್ತಿಶ್ಚೇತಿ ವಾಙ್ಮಯಂ ॥ –II, ೪೬೩

(ವಾಙ್ಮಯವು ಎರಡು ವಿಧ ; ಒಂದು ಸ್ವಭಾವೋಕ್ತಿ, ಇನ್ನೊಂದು ವಕ್ರೋಕ್ತಿ. ಶ್ಲೇಷೆಯು ಸಾಧಾರಣವಾಗಿ ಎಲ್ಲ 'ವಕ್ರೋಕ್ತಿ' (ಅಲಂಕಾರಿಕ ರಚನೆ)ಗಳಲ್ಲಿಯೂ ಅದರ ಸೊಬಗನ್ನು ಪೋಷಿಸುತ್ತದೆ.)]

ಪದ್ಯ ೧೦೯ : ಈ ಪದ್ಯವು ದಂಡಿಯ ಲಕ್ಷ್ಯವನ್ನೆ ಅನುಸರಿಸಿದೆ. ಇದರಲ್ಲಿನ ನಾಮಪದಗಳೆಲ್ಲವೂ ಅಭಿನ್ನಪದಗಳಾಗಿದ್ದು, ಎರಡು ಅರ್ಥಗಳನ್ನು ಕೊಡುತ್ತ, 'ಪಡೆಗುಂ' ಎಂಬ ಕ್ರಿಯಾಪದದೊಂದಿಗೆ ಅನ್ವಯಗೊಂಡಿವೆ. 'ರಾಜ' ಎಂಬ ಕರ್ತೃ ಪದವು (ವಿಶೇಷ್ಯ) 'ಅರಸ' ಮತ್ತು 'ಚಂದ್ರ' ಎಂಬ ಶ್ಲೇಷಾರ್ಥವನ್ನು ಹೊಂದಿದೆ. ಈ ಪದದ ವಿಶೇಷಣಗಳನ್ನೂ ಇತರ ಪದಗಳನ್ನೂ 'ರಾಜ' (ದೊರೆ) ಪರವಾಗಿಯೂ 'ಚಂದ್ರ' ಪರವಾಗಿಯೂ ಅರ್ಥಮಾಡಬೇಕು. (ಮುಂದೆ, ಕಂಸದಲ್ಲಿ ಒಂದನೆಯ ಅರ್ಥದಲ್ಲಿ ರಾಜಪರವಾಗಿಯೂ ಎರಡನೆಯದನ್ನು ಚಂದ್ರಪರವಾಗಿಯೂ ಅನ್ವಯಿಸಿಕೊಳ್ಳಬೇಕು.)

"ಉದಯಾರೂಢಂ (೧. ಉದಯದಲ್ಲಿ ಎಂದರೆ ತನ್ನ ಏಳಿಗೆಯಲ್ಲಿ ನೆಲೆಸಿರುವವನಾದ ; ೨. ಉದಯ ಪರ್ವತದಲ್ಲಿ ನೆಲೆಸಿರುವನಾದ, ಎಂದರೆ ಉದಯಿಸುತ್ತಿರುವವನಾದ), ಕಾಂತ್ಯಾಸ್ಪದಂ (೧. ಸೌಂದರ್ಯಕ್ಕೆ ನೆಲೆಯಾದವನು ; ೨. ಕಾಂತಿಗೆ ಎಂದರೆ ಪ್ರಕಾಶಕ್ಕೆ ನೆಲೆಯಾದವನು), ಅನುರಕ್ತಾತ್ಮಮಂಡಳಂ (ಅನುರಕ್ತ + ಆತ್ಮ + ಮಂಡಳಂ) (೧. ಪ್ರೇಮಾದರಗಳಿಂದ ಕೂಡಿದ ಭೂಮಂಡಲವನ್ನು, ರಾಜ್ಯವನ್ನು ಹೊಂದಿರುವವನು ; ೨. ಅನುಸರಿಸಿ ಬಂದ ಕೆಂಪು ಬಣ್ಣದಿಂದ ಕೂಡಿದ ತನ್ನ ಮಂಡಲಾಕೃತಿಯುಳ್ಳವನು), ಕುಮುದಕರಂ (ಇದು ಮಾತ್ರ ಭಿನ್ನಪದ ಶ್ಲೇಷೆ) (೧. ಕು + ಮುದ + ಕರಂ = ಭೂಮಿಗೆ + ಆನಂದವನ್ನು

+ ಉಂಟುಮಾಡತಕ್ಕವನು ; ೨. ಕುಮುದ + ಕರಂ = ನೈದಿಲೆಗಳನ್ನು + ಉಂಟುಮಾಡತಕ್ಕವನು, ಎಂದರೆ ಅರಳಿಸತಕ್ಕವನು), ಲೋಕಕ್ಕೆ ಮುದಮಂ ಪಡೆಗುಂ (ರಾಜ ಚಂದ್ರರಿಬ್ಬರೂ) (ಲೋಕಕ್ಕೆ ಸಂತೋಷವನ್ನು ಉಂಟುಮಾಡುವರು)."

ಪದ್ಯ ೧೧೦ : ದಂಡಿಯ ಶ್ಲೋಕದ 'ಮಹೀಭೃದ್ಭೂರಿಕಟಕಂ' ಎಂಬ ಭಾಗವನ್ನು ಮಾತ್ರ ಇಟ್ಟುಕೊಂಡು, ಉಳಿದುದನ್ನೆಲ್ಲಾ ಸ್ವತಂತ್ರವಾಗಿ ರಚಿಸಿದ್ದಾನೆ ಮಾರ್ಗಕಾರ. 'ಭೂಭೃನ್ನಾಥಂ'[೫೬] ಎಂಬ ಕರ್ತೃಪದಕ್ಕೆ 'ರಾಜಾಧಿರಾಜ ಅಥವಾ ಚಕ್ರವರ್ತಿ' ಮತ್ತು 'ಪರ್ವತಗಳ ಒಡೆಯ ಅಥವಾ ಹಿಮಾಲಯ' ಎಂದು ಶ್ಲೇಷಾರ್ಥ. (ಮುಂದೆ ಕೊಟ್ಟಿರುವ ಅರ್ಥಗಳಲ್ಲಿ, ಮೊದಲನೆಯದು 'ರಾಜ' ಪರವಾದ ಅರ್ಥ ; ಎರಡನೆಯದು 'ಪರ್ವತ' ಪರವಾದದ್ದು). ವಿಪುಳತರಕಟಕಂ = ೧. ವಿಶಾಲವಾದ ರಾಜದಾನಿಯುಳ್ಳವನು ; ೨. ವಿಸ್ತಾರವಾದ ಪಾರ್ಶ್ವಭಾಗವುಳ್ಳದ್ದು ದ್ವಿಪ + ಹರಿ + ಮಹಿಷೀ + ನಿಷೇವ್ಯಂ = ೧. ಆನೆ + ಕುದುರೆ (ಎಂದರೆ ಗಜಾಶ್ವ ಸೈನ್ಯ) + ಪಟ್ಟದರಾಣಿ ಇವರಿಂದ ಸೇವ್ಯನಾದವನು ; ೨. ಆನೆ + ಸಿಂಹ (ಅಥವಾ ಸರ್ಪ) + ಎಮ್ಮೆ – ಇವುಗಳಿಂದ ಸೇವ್ಯವಾದದ್ದ (ಎಂದರೆ, ಅವುಗಳ ನಿವಾಸ). ಉನ್ನತ ಪಾದಂ = ೧, ಉನ್ನತವಾದ ಗೌರವವುಳ್ಳವನು; ೨. ಎತ್ತರವಾದ ತಪ್ಪಲನ್ನು ಉಳ್ಳದ್ದು. ವ್ಯಪನೀತ ಶ್ರೀಫಲದಂ =[೫೭] ೧. ಸಂಗ್ರಹಿಸಿದ ಐಶ್ವರ್ಯ ಫಲವನ್ನು ದಾನ ಮಾಡತ್ಕವನು ; ೨. ಬಿಟ್ಟ ಬಿಲ್ವಫಲವನ್ನು ಕೊಡತಕ್ಕದ್ದು. ವಿಪರೀತಕಂ = ೧ (ಹಗೆಗಳ ವಿಷಯದಲ್ಲಿ) ಕೋಪಗೊಂಡವನು, ವಿರೋಧಿ ; ೨. (ವಿ + ಪರೀತಕಂ) ಪಕ್ಷಿಗಳಿಂದ ಬಳಸಲ್ಪಟ್ಟದ್ದು, (ಇಲ್ಲಿ ಭಿನ್ನಪದೀಯ ಶ್ಲೇಷೆ).

ಪದ್ಯ ೧೧೧ : "ನೆರೆದ (ಒಟ್ಟುಗೂಡಿದ) ವಿಸಂವಾದಂ (ವಿ + ಸಂವಾದಂ = ೧. ಹಕ್ಕಿಗಳ ಮಾತು ; ೨. ಕೆಟ್ಟ ಮಾತು), ಪಂಜರ ಶುಕತಿತಿಯೊಳ್ (ಪಂಜರದ ಗಿಳಿವಿಂಡಿನಲ್ಲಿ) ; ಪರಚಕ್ರಭ್ರಾಂತಿಗಳ್ (ಪರ + ಚಕ್ರ +

---

೫೬. ದಂಡಿ'ಮಹೀಭೃತ್' (= ರಾಜ) ಎಂದಿಷ್ಟೇ ಹೇಳಿರುವುದನ್ನು ಮಾರ್ಗಕಾರನು 'ಭೂಭೃನ್ನಾಥಂ'(= ರಾಜಾಧಿರಾಜ, ಚಕ್ರವರ್ತಿ) ಎಂದು ಉದ್ದೇಶಪೂರ್ವಕವಾಗಿ ಮಾರ್ಪಡಿಸಿ, ನೃಪತುಂಗನನ್ನು ಈ ಪದ್ಯದಲ್ಲಿ ಪ್ರಶಂಸಿಸಿರಬಹುದು.

೫೭. ಮದ್ರಾಸು ಮುದ್ರಣದಲ್ಲಿ 'ವ್ಯಪನೀತ' ಎಂಬ ಪಾಠ ಸ್ವೀಕೃತವಾಗಿದೆ. ಇಲ್ಲಿನದು ಪಾಠಕರ ಮುದ್ರಣದ್ದು.

ಭ್ರಾಂತಿಗಳ್ = ೧ ಶ್ರೇಷ್ಠವಾದ ಚಕ್ರಗಳ ತಿರುಗುವಿಕೆ ; ೨. ಶತ್ರುಮಂಡಲದ ಭ್ರಮೆ), ಕುಲಾಲಗೇಹಂಗಳೊಳ್ (ಕುಂಬಾರ ಮನೆಗಳಲ್ಲಿ) ; ಮಹಾಹವಧ್ವನಿ (೧. ಮಹಾ + ಹವ + ಧ್ವನಿ = ಗಟ್ಟಿಯಾದ, ಬಲವಾದ, + (ದೇವತೆಗಳನ್ನು) ಕರೆಯುವ, ಆಹ್ವಾನಿಸುವ + ಶಬ್ಧ, ಕೂಗು ; ೨. ಮಹಾ + ಅಹವ + ಧ್ವನಿ = ದೊಡ್ಡದಾದ + ಯುದ್ಧದ + ಶಬ್ಧ) – (ಇವು) ನಿಯತಂ ನೆಗಟ್ಟುಂ (ಕ್ರಮವಾಗಿ ಉಂಟಾಗುವುವು, ಕಂಡುಬರುವುವು)." (ಇದು ದಂಡಿಯ ನಿರ್ದೇಶದ ಪ್ರಕಾರ 'ವಿರುದ್ಧ ಕರ್ಮ'ದ ಶ್ಲೇಷೆ; ಪ್ರತಿ ಶ್ಲೇಷಾರ್ಥಕ ಪದವೂ ವಿರುದ್ಧಗಳಾದ ಎರಡು ಅರ್ಥಗಳನ್ನು ಒಳಗೊಂಡಿದೆ).

ಪದ್ಯ ೧೧೨ : "ಈ ಭೂಪಾಳಂ, 'ಅರಿಗೋತ್ರಭೇದಿ' (ಅರಿ + ಗೋತ್ರ + ಭೇದಿ = ೧. ಹಗೆಗಳೆನಿಸಿದ ಪರ್ವತಗಳನ್ನು ಭೇದಿಸುವವನು ; ೨. ಹಗೆಗಳ ವಂಶವನ್ನು ನಾಶಮಾಡುವವನು), 'ವಿಭುಧೇಶ್ವರನಲ್ಲಂ' = ಇಂದ್ರನಲ್ಲ ; 'ಧೃತಕಳಾಕಳಾಪಂ' (ಧೃತ + ಕಲಾ + ಕಲಾಪಂ = ೧. (ಷೋಡಶ) ಕಲೆಗಳ ಸಮೂಹವನ್ನು ಹೊಂದಿದವನು (ಚಂದ್ರ) ಚ ೨. (ಚತುಷ್ಷಷ್ಟಿ) ಕಲೆಗಳ (ವಿದ್ಯೆಗಳ) ಸಮೂಹವನ್ನುಳ್ಳವನು (ಸಕಲ ವದ್ಯಾಪಾರಂಗತ), 'ದೋಷಾಕರನಲ್ಲಂ' = (ದೋಷದಿಂದ ಕೂಡಿದ) ಚಂದ್ರನಲ್ಲ ; 'ವಿದಿತೋಮಾವರಂ' (ವಿದಿತ + ಉಮಾ + ವರಂ = ೧, ಪ್ರಸಿದ್ಧನಾದ ಉಮೆಯ (ಪಾರ್ವತಿಯ) ಪತಿ ; ೨. ಪ್ರಸಿದ್ಧವಾದ ಕೀರ್ತಿಗೆ ಒಡೆಯನು), 'ಅತ್ತ ಭುಜಂಗನಲ್ಲಂ = ಸರ್ಪವನ್ನು ಹೊಂದಿದವಲ್ಲನ, ನಾಗಭೂಷಣನಾದ ಶಿವನಲ್ಲ. (ಇದು ದಂಡಿ ನಿರ್ದೇಶಿಸಿರುವ 'ಆಕ್ಷೇಪರೂಪೋಕ್ತಿಯ ವಿರೋಧಿ ಶ್ಲೇಷೆ'. ಮಾರ್ಗಕಾರನ ಪ್ರಕಾರ (ಪ. ೧೧೩) ಮೇಲಿನ ಲಕ್ಷ್ಯಗಳೆಲ್ಲ 'ವಿರುದ್ಧ (ನಿಯಮಿತ) ಶ್ಲೇಷೆ'ಯ ಪ್ರಭೇದಗಳು)[೫೮]

---

೫೮. ಈ ಲಕ್ಷ್ಯಪದ್ಯವು ದಂಡಿಯ ದೃಷ್ಟಾಂತವನ್ನೇ ಹೋಲುವುದಾದರೂ ಕೆಲವು ಗಮನಾರ್ಹ ಮಾರ್ಪಾಟುಗಳಿವೆ. ಮಾರ್ಗಕಾರನು 'ಭೂಪಾಲ'ನನ್ನು ಇಂದ್ರ, ಚಂದ್ರ, ಶಿವರೊಂದಿಗೆ ಹೋಲಿಸಿದ್ದರೆ, ದಂಡಿ ನಿರ್ದಿಷ್ಟ ರಾಜನನ್ನು ಅಚ್ಯುತ, ಚಂದ್ರ, ದೇವ, ಶಂಕರರೊಡಗೂಡಿಸಿ ಬಣ್ಣಿಸಿರುವನು. ದಂಡಿಯ ಶ್ಲೋಕ :

ಅಚ್ಯುತೋಪ್ಯವೃಷಚ್ಛೇದೀ ರಾಜಾಪ್ಯವಿದಿತಕ್ಷಯಃ ।
ದೇವೋಪ್ಯವಿಬುಧೋ ಜಜ್ಞೇ ಶಂಕರೋಪ್ಯಭುಜಂಗವಾನ್ ॥ – II,೩೨೨

## ೧೨. ಉತ್ಪ್ರೇಕ್ಷಾಲಂಕಾರ

ಪದ್ಯ ೧೧೪ : "ಪ್ರಸಿದ್ಧವಾದ ('ನೆಗಟ್ದಿರ್ದುದು') ಒಂದು ವಸ್ತುವಿನ ಯಥಾಸ್ಥಿತಿಯನ್ನು ಮರಸಿ, ಬೇರೊಂದು ರೀತಿಯಿಂದ ('ಪೆಱತೊಂದು ಮಾಟ್ಕೆಯಿಂ') ತಿಳಿಸುವುದು ಉತ್ಪ್ರೇಕ್ಷೆ."

("ಚೇತನಾಚೇತನಗಳಲ್ಲಿರುವ 'ವೃತ್ತಿ'ಯನ್ನು (ಸ್ಥಿತಿಯನ್ನು) ಅದು ಇರುವುದಕ್ಕಿಂತ ಬೇರೆಯ ರೀತಿಯಲ್ಲಿ 'ಉತ್ಪ್ರೇಕ್ಷಿಸು'ವುದೇ ಉತ್ಪ್ರೇಕ್ಷೆ" – ದಂಡಿ.

'ಉತ್ + ಪ್ರ + ಈಕ್ಷೆ' = 'ಮೇರೆ ಮೀರಿದ ಪ್ರಕರ್ಷವಾದ (ಕವಿಯ) ನೋಟ, ಭಾವನೆ, ಕಲ್ಪನೆ' ಎಂದು ಮಾತಿನ ಅರ್ಥ. ಅತಿಶಯೋಕ್ತಿಯಲ್ಲಿ ಕವಿ ಇರುವುದನ್ನು ಹೆಚ್ಚುಮಾಡಿ ಹೇಳಿದರೆ, ಇಲ್ಲಿ ಬೇರೆಯ ರೀತಿ ಕಲ್ಪಿಸಿ ಹೇಳುತ್ತಾನೆ. ಎಂದರೆ ಉತ್ಪ್ರೇಕ್ಷೆಯಲ್ಲಿ ಕವಿಕಲ್ಪನೆಗೆ ಪ್ರಾಧಾನ್ಯ).

ಪದ್ಯ ೧೧೫ : 'ಉತ್ಪ್ರೇಕ್ಷೆ'ಗೆ ಲಕ್ಷ್ಯ : 'ನಡುಹಗಲಿನ ಬಿಸಿಲು ತನ್ನನ್ನು ಸುಡಲು ಕಾಡಾನೆ ('ವನಕರಿ') ಕಮಲಬಂಧುವಾದ ಸೂರ್ಯನಲ್ಲಿ ತನಗೆ ಉಂಟಾದ ಕಡುಕೋಪದಿಂದ ಎನ್ನುವಂತೆ ('ಕಡುಕಾಯ್ಪು ಎನೆ') ಕಮಲವನ್ನು ಧ್ವಂಸಮಾಡಬೇಕೆಂದು ಯೋಚಿಸಿ ('ಕಿಡಿಸಲ್ ಬಗೆದು') ಕೊಳವನ್ನು ಪ್ರವೇಶಿಸಿತು.

ಬೇಸಗೆಯಲ್ಲಿ ನಡುಹಗಲಿನ ಬಿಸಿಲನ್ನು ತಾಳಲಾರದೆ ಕಾಡಾನೆಯೊಂದು ನೀರಿನಿಂದ ಮಿಂದು, ನೀರು ಕುಡಿದು, ತಾವರೆ ದಂಟನ್ನು ತಿನ್ನುವುದಕ್ಕಾಗಿ ಕೊಳವನ್ನು ಹೊಕ್ಕದ್ದು ವಸ್ತುಸ್ಥಿತಿ. ಬಿಸಿಲಿನ ಬೇಗೆಗೆ ಸೂರ್ಯನೆ ಕಾರಣ; ಅವನು ಕಮಲಬಂಧು ; ತನಗೆ ಬೇಗೆಯನ್ನೊಡ್ಡಿದ ಸೂರ್ಯ ಮೇಲೆ ಸೇಡು ತೀರಿಸಿಕೊಳ್ಳಲು ಅಸಾಧ್ಯವೆನಿಸಿ, ಕೊಳದಲ್ಲಿರುವ ಸೂರ್ಯಬಂಧುವಾದ ಕಮಲವನ್ನು ಕೆಡಿಸುವ ಉದ್ದೇಶದಿಂದ ಆನೆ

---

(ಅಚ್ಯುತ = ೧, ಸ್ಥಾನಚ್ಯುತನಲ್ಲದವನು ; ೨. ಕೃಷ್ಣ. ಅವೃಷಚ್ಛೇದಿ = ೧ ಧರ್ಮ ವಿಧ್ವಂಸಕನಲ್ಲದವನು ; ೨. ವೃಷಾಸುರನನ್ನು ಕೊಲ್ಲದವನು ರಾಜ = ದೊರೆ ; ೨. ಚಂದ್ರ. ದೇವ = ೧. ರಾಜ ; ೨. ದೇವತೆ. ಶಂಕರ = ೧, ಮಂಗಳಕಾರಿ ; ೨. ಈಶ್ವರ, ಅಭುಜಂಗವಾನ್ = ೧. ಹೊಗಳುಭಟ್ಟರಿಲ್ಲದವನು ; ೨. ಸರ್ಪ ಧರಿಸಿದವನು.)

ಕನ್ನಡ ಪದ್ಯದ 'ಉಮಾವರಂ' ಎಂಬುದಕ್ಕೆ ಮೂಲದಲ್ಲಿ 'ಶಂಕರಂ' ಎಂದಿದೆ. ಈ ಪದ್ಯವು ನೃಪತುಂಗ ಪ್ರಶಂಸಾತ್ಮಕ ಎಂದು ಭಾವಿಸುವುದಾದರೆ, 'ಉಮಾವರ' ಎಂಬ ಶ್ಲೇಷಾರ್ಥಕಪದದಲ್ಲಿ ನೃಪತುಂಗನ ರಾಣಿಯಾಗಿದ್ದಿರಬಹುದಾದ 'ಉಮಾದೇವಿ'ಯನ್ನೇ ಹೆಸರಿಸಿರಬಹುದು ಎಂದು ಮುಳಿಯ ತಿಮ್ಮಪ್ಪಯ್ಯನವರ ಊಹೆ.

ಕೊಳವನ್ನು ಪ್ರವೇಶಿಸಿತು ಎಂದು ವಸ್ತುಸ್ಥಿತಿಯನ್ನು 'ಮರಸಿ' ಬೇರೊಂದು (ಕಲ್ಪಿತ) ರೀತಿಯಲ್ಲಿ ಕವಿ ಹೇಳಿದ್ದಾನೆ.

ಪದ್ಯ ೧೧೬ : "ವಿಲಾಸಿನೀ, ಈ ಕರ್ಣೋತ್ಪಲವು (= ಕಿವಿಯೊಡವೆಯಾದ ನೈದಿಲೆ) ಕಿವಿಯಲ್ಲಿ ನೆಲೆಸಿ, 'ನನ್ನ ವಿಶಾಲವಾದ ನೋಟದಲ್ಲಿ ಒಳ್ಳೆಯದಾಗಿ ಹೊಳೆಯುತ್ತಿದೆ' (ಎಂದರೆ, ನನ್ನ ಕಡೆಗಣ್ಣ ನೋಟದಲ್ಲಿ ತಾನು ಬೆಳಗಿ ಅದರ ಮುಂಬರಿವಿಗೆ ತಡೆಯುಂಟುಮಾಡುತ್ತಿದೆ) ಎಂದು ಭಾವಿಸಿ ನಿನ್ನ ಕಣ್ಣೆರಡು ಕರ್ಣೋತ್ಪಲದ ಮೇಲೆ ಆಕ್ರಮಣ ಮಾಡುತ್ತಿವೆ." ವಿಲಾಸಿನಿಯ ಕಡೆಗಣ್ಣ ನೋಟವು ಕಿವಿಯಲ್ಲಿನ ಉತ್ಪಲವನ್ನು ಸೋಕುವ ಹಾಗೆ ಹಾಯ್ದು ಹೋಗುತ್ತಿರುವುದು ವಸ್ತುಸ್ಥಿತಿ ; ಅದು ತನಗೆ ಅಡ್ಡಿಯಾಗಿದೆ ಎಂದು ಅದನ್ನು ಕಣ್ಣು ಆಕ್ರಮಿಸಹೊರಟಿದೆ ಎನ್ನುವುದು ಕವಿಕಲ್ಪನೆ.[೫೯]

## ೧೩. ಸೂಕ್ಷ್ಮಾಲಂಕಾರ

ಪದ್ಯ ೧೧೭ : "ಅಂತರಂಗದೊಳ್ ಮಱಸಿದುದಂ (ರಹಸ್ಯವಾಗಿಟ್ಟುಕೊಂಡಿರುವ ಆಲೋಚನೆ ಮುಂತಾದುವನ್ನು) ಬಗೆದು ಇಂಗಿತ, ಚೇಷ್ಟೆ, ಆಕಾರಗತಗಳಾದ ಸೂಕ್ಷ್ಮಸಂಜ್ಞೆಗಳ ಮೂಲಕ ಸೂಚಿಸುವುದು" ಸೂಕ್ಷ್ಮಾಲಂಕಾರ.

ಪದ್ಯ ೧೧೮ : "ತಿಳಿಪಲ್ (= ಸಮಾಧಾನಪಡಿಸಲು) ಅಡಿಗೆ ಎಱಗಿದ (= ನಮಸ್ಕರಿಸಿದ) ಓಪನ (= ಪ್ರಿಯನ) ತಳಂಗಳಾ (= ಕಾಲು ಮುಟ್ಟಿದ) ಅಂಗೈಗಳ) ತೀಟದಿಂ (= ತೀಡುವಿಕೆಯಿಂದ, ಉಜ್ಜಾಟದಿಂದ)

---

೫೯. ಮೇಲಿನ ಎರಡು ಲಕ್ಷ್ಯಗಳೂ ದಂಡಿಯ ಮೂಲ ಶ್ಲೋಕದ ಅನುವಾದಗಳು. ಅವನ ಲಕ್ಷ್ಯ ಲಕ್ಷಣ ಸಮನ್ವಯ ವಿಧಾನವನ್ನು (ನಾವು ಮೇಲೆ ಕೊಟ್ಟ ವಿವರಣೆಯನ್ನು) ಮಾರ್ಗಕಾರನು ಬಿಟ್ಟಿದ್ದಾನೆ. ಅಲ್ಲದೆ, ಉತ್ಪ್ರೇಕ್ಷಾಲಂಕಾರದಲ್ಲಿ 'ಇವಾ' ಎಂಬ ಮಾತಿನ ಪ್ರಯೋಗದಿಂದ ಕೆಲವರು ಆ ಅಲಂಕಾರವನ್ನು ಉಪಮೆಯೆಂದು ತಪ್ಪಾಗಿ ತಿಳಿಯಬಹುದು, ಹಾಗೆ ತಿಳಿಯಕೂಡದು, ಎಂದು ಎಚ್ಚರಿಕೆ ನೀಡಿದ್ದಾನೆ ; ಮತ್ತು ಸಂಸ್ಕೃತದಲ್ಲಿ 'ಇವಾ' ಎಬ ಪದದಂತೆ 'ಮನ್ಯೆ' 'ಶಂಕೆ' 'ಧ್ರುವಂ' 'ಪ್ರಾಯಃ' 'ನೂನಂ' ಇತ್ಯಾದಿ ಪದಗಳೂ ಪ್ರಯೋಗವಾಗುತ್ತವೆ ಎಂದು ತಿಳಿಸಿದ್ದಾನೆ. ಮಾರ್ಗಕಾರನು ಈ ಹೆಚ್ಚಿನ ವಿವರಗಳನ್ನು ಬಿಟ್ಟಿದ್ದಾನೆ. ಕನ್ನಡದಲ್ಲಿಯೂ 'ಪೊಲ್', 'ಅಂತೆ' 'ಅಂತಿರೆ' ಮುಂತಾದ ಉಪಮಾ ವಾಚಕಗಳು ಉತ್ಪ್ರೇಕ್ಷೆಯಲ್ಲಿ ಪ್ರಯೋಗವಾಗುತ್ತವೆ ; ಜೊತೆಗೆ, 'ಎನೆ', 'ಎನಲ್', 'ಎಂಬಿನೆಗಂ', 'ಅಂಥಂ', 'ಮಾಟ್ಕೆ'(ಯಿಂ) ಎಂಬ ಪದಗಳೂ ಪ್ರಯೋಗವಾಗುತ್ತದೆ. ದಂಡಿಯ ಹೆಚ್ಚಿನ ವಿವರಣೆ ಕನ್ನಡಕ್ಕೂ ಅನ್ವಯವಾಗುತ್ತದೆ.

ಪದಂಗಳೊಳ್ ಒಗೆದ (= ಪಾದಗಳಲ್ಲಿ ಕಾಣಿಸಿಕೊಂಡ) ಪುಳಕಚಯಂಗಳ್ (= ರೋಮಾಂಚದ ಸಮುದಾಯವು), ನಲ್ಲಳ್ಗೆ, ಬೆಳ್ಮೊಗಂಗೆಯ್ದಿರೆಯುಂ (= ಮುಖವನ್ನು ವಿವರ್ಣವಾಗಿ ಮಾಡಿದ್ದರೂ, ಎಂದರೆ, ಅವಳ ಮುಖವು ಕಳೆಗುಂದಿದ್ದರೂ), ಮುಳಿಸಂ (= ಕೋಪವನ್ನು), ಕಳೆದುವು."

ಪದ್ಯ ೧೧೯ : "ಪರುಷಾಳಾಪಮುಂ (= ಕಠಿನವಾದ ಮಾತೂ) ಅತಿನಿಷ್ಠುರವೀಕ್ಷಣ ಮುಖವಿಕಾರಮುಂ (= ಬಹು ನಿಷ್ಠುರವಾದ ನೋಟವೂ ಮುಖಭಂಗಿಯೂ), ಮಱಸಿರೆಯುಂ (=ಅವಳ ಅಂತರಂಗದ ಪ್ರೇಮಭಾವವನ್ನು ಮರೆಮಾಚಿದ್ದರೂ) ತರಳಾಪಾಂಗನಮುಂ (= ನಸುನಗೆಯೂ) ಎರ್ದೆಯೊಳ್ ಎಱಕಮಂ ಪೇೞ್ಗುಂ (= ಹೃದಯದಲ್ಲಿನ ಪ್ರೇಮವನ್ನು ತಿಳಿಸುವುವು)."

ಮೇಲಿನ ಎರಡು ಪದ್ಯಗಳೂ ಸೂಕ್ಷ್ಮಾಲಂಕಾರಕ್ಕೆ ದೃಷ್ಟಾಂತಗಳು. ಇವುಗಳಲ್ಲಿನ ವಿಷಯನಿರೂಪಣೆಯಲ್ಲಿ 'ಸ್ವಭಾವೋಕ್ತಿ'ಯೇ ಪ್ರಧಾನ. ಆದರೂ, ಪ್ರಿಯನ ಕರಸ್ಪರ್ಶದಿಂದ ಹುಟ್ಟಿದ ರೋಮಾಂಚದ (ಆಕಾರಗತ ಸಂಜ್ಞೆ) ಮೂಲಕ ನಲ್ಲೆಯ ಕೋಪವು ತಿಳಿದು ಪ್ರೇಮೋದಯವಾದ ಅಂತರಂಗದ ಭಾವವೂ (ಪ. ೧೧೮), ಕಠಿನ ಮುಖಭಾವವು ಪ್ರೇಮವನ್ನು ಮರಸಿದ್ದರೂ ಕಡೆಗಣ್ಣ ನೋಡ, ನಸುನಗೆ – ಈ ಅಂಗ ಚೇಷ್ಟಿತಗಳಿಂದ ಹೃದಯದ ಪ್ರೇಮವೂ ಸೂಕ್ಷ್ಮರೀತಿಯಲ್ಲಿ ವ್ಯಕ್ತಪಟ್ಟು, ನಿರೂಪಣೆ 'ವಕ್ರೋಕ್ತಿ'ಯ ಛಾಯೆಯನ್ನು ತಳೆದಿರುವುದರಿಂದ ಸ್ವಭಾವಾಖ್ಯಾನದಿಂದ ಭಿನ್ನ ಎಂದು ಎಣಿಸಬೇಕು.

**೧೫. ವಿಶೇಷೋಕ್ತಿ ಅಥವಾ ವಿಶೇಷಾಲಂಕಾರ**

ಪದ್ಯ ೧೨೦ : "(ಒಂದು ವಸ್ತುವಿನ) ಗುಣ, ಜಾತಿ, ಕ್ರಿಯೆ ಮುಂತಾದವುಗಳಲ್ಲಿ ಕಂಡುಬರುವ 'ವಿಕಳತೆಯಂ ಅನುಗುಣಮಾಗಿರೆ ಪೇೞದೆ ಸಯ್ತೆಣಿಸಿ ವಿಶೇಷ ಮನಱಿಪುವುದು' (ಎಂದರೆ, 'ವೈಕಲ್ಯ' ಅಥವಾ ಕುಂದುಕೊರತೆಯನ್ನು ಅವಕ್ಕೆ ಅನುಗುಣವಾಗಿ ಹೇಳದೆ, ಅವುಗಳಲ್ಲಿ ಕಂಡು ಬರುವ ವಿಶೇಷವನ್ನೆ 'ಸಯ್ತೆಣಿಸಿ' ಹೇಳುವುದು) ವಿಶೇಷಾಲಂಕಾರ. (ಇದು ದಂಡಿಯ ಲಕ್ಷಣ ನಿರೂಪಣೆಯನ್ನೆ ಅನುವಾದಿಸಿದೆ.)

ಪದ್ಯ ೧೨೧ : "ಕಂತು (= ಮನ್ಮಥನು) ಎಂತುಂ, ಅಲರಂಬು (= ಹೂಬಾಣ), ಕರ್ಬುವಿಲ್ (=ಕಬ್ಬಿನ ಬಿಲ್ಲು), ಕೋಮಲ ಸರಸಿಜನಾಳ ತಂತುತಿರು

(=ಕೋಮಲವಾದ ತಾವರೆದಂಟಿನ ನೂಲಿನ ಹೆದೆ), ಮತ್ತಿವಱಾ ಬಲದಿಂ (= ಇವುಗಳ ಬಲದಿಂದ) ಅಗಲ್ದರಂ ಎಚ್ಚು (= ವಿರಹಿಗಳನ್ನು ಬಾಣದಿಂದ ಹೊಡೆದು), ತ್ರಿಲೋಕವುಂ, ಬಸಕೆ ಬರಿಸುವಂ (= ವಶಪಡಿಸಿಕೊಳ್ಳುವನು)" – ಮಾರ್ಗಕಾರನು ದಂಡಿಯ ಲಕ್ಷ್ಯವನ್ನು ಸ್ವಲ್ಪ ಮಾರ್ಪಡಿಸಿದ್ದಾನೆ. ಮೂಲಶ್ಲೋಕದಲ್ಲಿ 'ಪುಷ್ಪಧನುವಿನ ಬಾಣವು ಕಠೋರವೂ ತೀಕ್ಷ್ಣವೂ ಅಲ್ಲದಿದ್ದರೂ ಭುವನತ್ರಯವನ್ನು ಗೆದ್ದಿದೆ' ಎಂದಿದೆ. ಇಲ್ಲಿ, ಮನ್ಮಥಬಾಣದ ಗುಣ 'ವಿಕಲತೆ'ಯನ್ನು ಸೂಚಿಸದೆಯೆ, ಮೂರು ಲೋಕಗಳನ್ನೂ ಗೆಲ್ಲಬಲ್ಲ ಅದರ ಸಾಮರ್ಥ್ಯದ 'ವಿಶೇಷ'ವನ್ನು ಮನಗಾಣಿಸಿದೆ. (ಇದು 'ಗುಣ' ನಿಷ್ಠವಾದ 'ವಿಶೇಷ'.)

ಪದ್ಯ ೧೨೨ : "ದಶನವಸನಾಂತರಂ ಸ್ಫುರಿಯಿಸದೆ (= ತುಟಿ ಸ್ವಲ್ಪವೂ ಅಲುಗದೆ), ಕಣ್ಗಳ್ ಎನಸುಂ ಆರಕ್ತಂಗಳ್ ಆಗದೆ (= ಕಣ್ಣುಗಳು ಸ್ವಲ್ಪವೂ ಕೆಂಪಾಗದೆ), ಮುಖಂಭರಿತ ಭ್ರೂಕುಟಿ ಕಲಮಾಗಿರದೆ (ಮುಖವು ಸ್ವಲ್ಪವೂ ಹುಬ್ಬುಗಂಟಿನಿಂದ ಕೂಡಿದರೆ), ಅರಿನೃಪಬಲಮಂ ಗೆಲ್ದಂ ಇಂತು (= ಶತ್ರುಸೈನ್ಯವನ್ನು ಹೀಗೆ ಗೆದ್ದನು). ಇಲ್ಲಿ ನಿರ್ದಿಷ್ಟವೈರಿಆದ ರಾಜನು ಹಗೆಗಳನ್ನು ಗೆಲ್ಲುವಾಗ ಕೋಪಗೊಳ್ಳಬೇಕಾದ್ದು ಸಹಜ. ಪದ್ಯದಲ್ಲಿ ವರ್ಣಿತವಾಗಿರುವವೆಲ್ಲ ಕೋಪಸೂಚಕ ಕ್ರಿಯೆಗಳು. ಇವು ಇಲ್ಲದೆಯೇ ಹಗೆಗಳನ್ನು ಗೆದ್ದಿರುವುದು 'ವಿಶೇಷ'. (ಇದೂ ದಂಡಿಯ ಶ್ಲೋಕದ ಅನುವಾದ. ಇಲ್ಲಿ ಕ್ರಿಯಾನುಗತ 'ವಿಶೇಷ'ವನ್ನು ಕಾಣಬಹುದು.)

### ೧೫. ಸಮಾಹಿತಾಲಂಕಾರ

ಪದ್ಯ ೧೨೩ : ಮಾರ್ಗಕಾರನ ಲಕ್ಷಣ ನಿರೂಪಣೆ ದಂಡಿಯದನ್ನು ಯಥಾವತ್ತಾಗಿ ಅನುಸರಿಸದೆ, ತುಸ ಕ್ಲಿಷ್ಟಾನ್ವಯವುಳ್ಳದ್ದಾದ್ದರಿಂದ, ದಂಡಿಯ ಶ್ಲೋಕವನ್ನೇ ಮೊದಲು ಗಮನಿಸುವುದು ಉತ್ತಮ :

ಕಿಂಚಿದಾರಭಮಾಣಸ್ಯ ಕಾರ್ಯಂ ದೈವವಶಾತ್ ಪುನಃ ।
ತತ್ಸಾಧನಸಮಾಪತ್ತಿರ್ಯಾ ತದಾಹುಃ ಸಮಾಹಿತಂ ॥ –II, ೨೯೮

(ಒಂದು ಕಾರ್ಯವನ್ನು ಆರಂಭ ಮಾಡಿರುವಾತನಿಗೆ ಈ ಕಾರ್ಯಸಾಧನಕ್ಕೆ ಅನುಕೂಲವಾದ ನೆರವು ದೈವವಶಾತ್ ಒದಗುವುದನ್ನು 'ಸಮಾಹಿತ'ವೆಂದು ಕರೆಯುತ್ತಾರೆ.)

ಈಗ ಮಾರ್ಗಕಾರನ ಲಕ್ಷ್ಯದ ಅರ್ಥವನ್ನು ಹೀಗೆ ಗ್ರಹಿಸಬಹುದು :

"ಪರವಸದ ಬಗೆಯೊಳ್ (ದೈವವಶದಿಂದ ಒದಗಿದ ರೀತಿಯಲ್ಲಿ), ಅತರ್ಕಿತೋಪಸ್ಥಾನಂ (ಅತರ್ಕಿತವಾದ ಕಾರ್ಯಸಾಧನ), (ಒಂದಂದೊರೆಕೊಳಿಸುವುದು, ಒಂದನ್ನು ದೊರಕಿಸಿಕೊಡುವುದು) (ನಿರುತಂ ಸಮಾಹಿತಾಳಂಕರಣಾತರಮಕ್ಕುಂ, ಅಱೆಗೆ (ನಿಸ್ಸಂದೇಹವಾಗಿ ಸಮಾಹಿತಾಲಂಕಾರ ಭೇದವಾಗುವುದು, ಎಂದು ತಿಳಿಯುವುದು)."[೬೦]

ಪದ್ಯ ೧೨೪ : ಮುಳಿದಿರ್ದ ನಲ್ಲಳಲ್ಲಿಗೆ (=ಕೋಪಿಸಿಕೊಂಡಿದ್ದ ಪ್ರಿಯೆಯ ಬಳಿಗೆ), ತಿಳಿಪಲ್ ಪೋಪ ಎನ್ನ ಬಗೆಗೆ (= ಅವಳನ್ನು ಸಮಾಧಾನ ಪಡಿಸಲು ಹೋಗುವ ನನ್ನ ವಿಚಾರದಲ್ಲಿ), ದೊರೆಕೊಳೆ (= ಸಹಾಯವಾಗಿ ಒದಗುವಂತೆ), ವಸಂತಸಮಯೋತ್ತಂಸಂ, ಎಳೆವೆಱೆ (= ವಸಂತಕ್ಕೆ ಶಿರೋಬೂಷಣವಾದ ಬಾಲಚಂದ್ರನು), ಗಗನಾಂತರ ದೊಳ್ ಎತ್ತಂ ಮತ್ತಿಂತು ಪೊಳೆದತ್ತು."

ಈ ಲಕ್ಷ್ಯಪದ್ಯ ಮಾರ್ಗಕಾರನ ಸ್ವಂತರಚನೆ. ಪ್ರಿಯನೊಬ್ಬನು ತನ್ನ ಪ್ರಿಯೆಯ ಮುನಿಸನ್ನು ತಿಳಿಸುವುದಕ್ಕೆ ಹೊರಟ ಸಂದರ್ಭದಲ್ಲಿ ದೈವವಶಾತ್ ಅವನಿಗೆ ಸಹಾಯಕವಾಗಿ ಎಳೆವೆರೆ ಮೂಡುತ್ತದೆ. ಇದರಿಂದ, ಕತ್ತಲೆಯಲ್ಲಿ ಅವನಿಗೆ ದಾರಿ ಕಾಣುತ್ತದೆ. ಅಲ್ಲದೆ, ಮನಸ್ಸಿನ ಮೇಲೆ ಪರಿಣಾಮ ಬೀರತಕ್ಕವನು (ಮನಃಕಾರಕ) ಎಂದು ಪ್ರಸಿದ್ಧನಾದ ಚಂದ್ರನು ಪ್ರಿಯೆಯ ಮನಸ್ಸು ಪ್ರಸನ್ನಗೊಳ್ಳುವುದರಲ್ಲಿಯೂ ಸಹಾಯಕನಾಗಬಹುದು.

ಪದ್ಯ ೧೨೫ : ಇದೂ 'ಸಮಾಹಿತ'ಕ್ಕೆ ದೃಷ್ಟಾಂತ ; ಇದು ದಂಡಿಯಶ್ಲೋಕದ ಅನುವಾದವಲ್ಲದಿದ್ದರೂ, ಅದನ್ನು ಅನಿಸರಿಸಿದೆ. ಅಲ್ಲಿ ಉಕ್ತವಾದ 'ಘನಗರ್ಜಿತ'ದ ಎಡೆಯಲ್ಲಿ 'ಪೊಳೆವ ಮಿಂಚು' ಬಂದಿದೆ.

"ತಡೆತಡೆದು (ಮಳೆಗಾಲದ ರಾತ್ರಿಯಾದ್ದರಿಂದ ಹಿಂಜರಿದು) ಕಾಂತನ ಬಳಿಗೆ ನಡೆದುಹೋಗಲು ಯೋತಿಸಿದ ನನಗೆ ಮಳೆಗಾಲದ ಕಗ್ಗತ್ತಲೆಯಲ್ಲಿ, ಮೋಡಗಳ ನಡುನಡುವೆ ನಿರಂತರವಾಗಿ ಹೊಳೆಯುವ ಮಿಂಚು

---

೬೦. ಮಾರ್ಗಕಾರನು 'ಸಮಾಹಿತಗುಣ', 'ಸಮಾಹಿತಾಲಂಕಾರ' – ಇವೆರಡನ್ನೂ ಒಂದೇ ಹೆಸರಿನಿಂದ ನಿರ್ದೇಶಿಸಿದ್ದಾನೆ. ಈಸಂಬಂಧವಾದ ವಿವರಣೆಯನ್ನು II–೭೩ ರಿಂದ ೭೭ ರವರೆಗೆ ಪದ್ಯಗಳ ಟಿಪ್ಪಣಿಯಲ್ಲಿ ಕಾಣಬಹುದು. 'ಪರವಸ' : ಎಲ್ಲ ಪ್ರತಿಗಳಲ್ಲಿಯೂ ಇರುವ ಪಾಠ 'ಪರಪಸ', 'ಪರವಸ' ಎಂಬ ಪಾಠಕರ ತಿದ್ದುಪಾಟನ್ನು ಇಲ್ಲಿ ಅಂಗೀಕರಿಸಿದೆ.

ಅಡತಡೆಗಳನ್ನು ಚೆನ್ನಾಗಿ ಹೋಗಲಾಡಿಸಿತು ('ಸಯ್ತು ಅಡವಡಿಕೆಗಳಂ ತೊಡೆದತ್ತು').

## ೧೬. ಸಮಾಸೋಕ್ತಿ

ಪದ್ಯ ೧೨೬ : "ತಱಿಸಂದು ಮನದೊಳೊಂದಂ (= ಒಂದು ವಸ್ತುವನ್ನು ಮನಸ್ಸಿನಲ್ಲಿ ನಿಶ್ಚಯಿಸಿಕೊಂಡು), ಮತ್ತದನೆ ಪೋಲ್ವುದಂ ಪೆಱತಂ = ಅದನ್ನೆ ಹೋಲುವ ಬೇರೊಂದು ವಸ್ತುವನ್ನು), ಕುಱಿಪುಗಳಂ ಕುಱಿ ಮಾಡಿ ಮಾಡಿ ಪೇೞ್ವುದು (= ಕುರುಹುಗಳ ಮೂಲಕ ಲಕ್ಷಿಸಿ ಹೇಳುವುದು)" ಸಮಾಸೋಕ್ತಿ.

ಇಲ್ಲಿ, ವಾಸ್ತವವಾಗಿ ಮನಸ್ಸಿನಲ್ಲಿ ಅಭಿಪ್ರೇತವಾಗಿರುವುದು ಪ್ರಸ್ತುತ ; ಅಪ್ರಸ್ತುತ ವರ್ಣನೆಯಲ್ಲಿ ಪ್ರಸ್ತುತ ಸೂಚಕವಾದ ಕುರುಹುಗಳ ಉಲ್ಲೇಖವಿರುತ್ತದೆ, ಅಷ್ಟೆ. ಇದರಿಂದಾಗಿ ಒಟ್ಟಿನ ಉಕ್ತಿಯಲ್ಲಿ ಸಂಕ್ಷಿಪ್ತತೆ ಅಳವಡುತ್ತದೆ. ಈ ಸಂಕ್ಷಿಪ್ತತೆಯಿಂದಾಗಿಯೆ ಅಲಂಕಾರದ ಹೆಸರು ಸಮಾಸೋಕ್ತಿ' ಎಂದು.) "ಸಂಕ್ಷಿಪ್ತ ರೂಪತ್ವಾತ್ ಸಮಾಸೋಕ್ತಿಃ" – ದಂಡಿ). (ಇದು ಈಚೆಗೆ 'ಅನ್ಯೋಕ್ತಿ' ಎಂದು ಪ್ರಸಿದ್ಧವಾಗಿದೆ).

ಪದ್ಯ ೧೨೭ : ಮೇಲಿನದಕ್ಕೆ ದಂಡಿಯ ಲಕ್ಷ್ಯದ ಅನುವಾದ ರೂಪವಿದು : "ಅಳಿ (=ದುಂಬಿ), ತಾಮರೆಯರಲೊಳ್ (=ತಾವರೆ ಹೂವಿನಲ್ಲಿ), ಸರಸ ನಿಜಾಮೋದದೊಳೊಂದಿ ನಲಿದು (= ಅದರ ರಸಯುಕ್ತವಾದ ಪರಿಮಳದಲ್ಲಿ ಕೂಡಿಕೊಂಡು ಸಂತೋಷಪಟ್ಟು), ಈ ಮುಗುಳೊಳ್ (= ಈ ಮೊಗ್ಗಿನಲ್ಲಿ), ಮಕರಂದ ರಜೋವ್ಯಾಮುಗ್ಧದೊಳ್ (= ಅದರಮಕರಂದ ಹಾಗೂ ಧೂಳಿನಿಂದ – ಬಂಡಿನಿಂದ – ಮೋಹಗೊಂಡು), ಆ ಮಾಟ್ಕೆಯನಱಸಿ (= ತಾವರೆ ಹೂವಿನಲ್ಲಿ ನಲಿದ ಬಗೆಯನ್ನೇ ಇಲ್ಲಿಯೂ ಹುಡುಕಿ), ಕೆಲ ಕೆಲದೊಳ್ ಸುೞಿವುದು (= ಆ ಮೊಗ್ಗಿನ ಪಕ್ಕ ಪಕ್ಕದಲ್ಲಿಯೇ ಸುಳಿದಾಡುವುದು)."

ತುಂಬಿಯ ಚೆಲ್ಲಾಟದ ವರ್ಣನೆಯ ನೆವದಲ್ಲಿ ಕಾಮುಕನೊಬ್ಬನ ನಡವಳಿಕೆಯನ್ನು ಹೇಳಬೇಕೆಂಬುದೇ ಕವಿಯ ಉದ್ದೇಶ. ಇದರ ವಿವರಣೆಯೇ ಮುಂದಿನ ಪದ್ಯ. (ಇದು ಕೂಡ ದಂಡಿಯ ಶ್ಲೋಕದ ಅನುವಾದ).

ಪದ್ಯ ೧೨೮ : "ನೆರೆದು ಅತಿ ವಿದಗ್ಧಗಣಿಕಾ ಸುರತಾಸವಸೇವನಾ ಕೃತೋದನನಾಗಿರ್ದು (=ಬಹು ಪ್ರೌಢೆಯಾದ ವೇಶ್ಯೆಯೊಂದಿಗೆ

ಸಂಭೋಗಿಸಿ, ಕೃತಾರ್ಥನಾಗಿ ; ಕೃತೋದನ = ಕೃತಾರ್ಥ?) ('ಕೃತೌದನ' ಎಂದು ಮದ್ರಾಸು ಮುದ್ರಣ ಪ್ರತಿಯ ಪಾಠ), ಇರದೆ (= ಸುಮ್ಮನಿರದೆ, ಎಂದರೆ, ಅಷ್ಟರಿಂದ ತೃಪ್ತನಾಗದೆ), ತರುಣೀರತಾಂತರ ಸರಾಗಮಂ ಪೇೞ್ವುದು ಅಲ್ಲಿ ತುಂಬಿಯ ನೆವದಿಂ (= ಮುಗ್ಧ ಬಾಲಿಕೆಯೊಂದಿಗೆ ಸಂಭೋಗಿಸಬೇಕೆಂಬ ಅಪೇಕ್ಷೆಯನ್ನು ತುಂಬಿಯ ನೆವದಲ್ಲಿ ಅಲ್ಲಿ ಹೇಳುವುದಾಗಿದೆ)." (ತುಂಬಿ = ವಿಟಪುರುಷ, ತಾವರೆಹೂವು = ಪ್ರೌಢಾಂಗನೆ, ತಾವರೆಯ ಮೊಗ್ಗು = ತರುಣಿ, ಮಕರಂದಪಾನ = ಸಂಭೋಗ – ಹೀಗೆ ಇಲ್ಲಿ ಉಪಮಾನೋಪಮೇಯಭಾವ ಅಂತರ್ಗತವಾಗಿರುವುದನ್ನು ಗಮನಿಸಬಹುದು).

ಪದ್ಯ ೧೨೯ : ಈ ಲಕ್ಷ್ಯಪದ್ಯವು ಮಾರ್ಗಕಾರನ ಸ್ವಂತ ರಚನೆ. ಆದರೆ, ದಂಡಿಯ ಮೂಲಶ್ಲೋಕದಲ್ಲಿ ವರ್ಣಿಸಿರುವ ಪುರೋಷನೊಬ್ಬನ 'ವ್ಯಾಪತ್ತಿ ಸೂಚನೆ'ಯನ್ನು ಅನುಸರಿಸಿ, ಇಲ್ಲಿಯೂ 'ಅಪಾಯಪಂಕ'ದಲ್ಲಿ ಸಿಲುಕಿದ 'ಗುಣಗಣೋದಯ ಭಾಗಿ'ಯಾದ ಪುರುಷನ ವರ್ಣನೆಯನ್ನು ಬೇರೆಯ ರೀತಿಯಲ್ಲಿ ಮಾಡಿದೆ. ಆನೆಯೊಂದು ಅಪಾಯಪಂಕದಲ್ಲಿ ಸಿಲುಕಿದುದನ್ನು ಶ್ಲೇಷೆಯ ಮೂಲಕ ವರ್ಣಿಸಿ, ಪುರುಷನ ಅಪಾಯ ಸ್ಥಿತಿಯನ್ನು ಸೂಚಿಸಿದೆ. (ಲಕ್ಷ್ಯಲಕ್ಷಣ ಸಮನ್ವಯ ಮಾಡುವಾಗ, ಪ್ರಕೃತ ಲಕ್ಷ್ಯಕ್ಕೆ ಅನ್ವಯಿಸುವಂತೆ 'ಇತ್ಯಪೂರ್ವ ಸಮಾಸೋಕ್ತಿಃ ಪೂರ್ವಧರ್ಮ ನಿವರ್ತನಾತ್' ಎಂದು ತಿಳಿಸಿ 'ಅಪೂರ್ವಸಮಾಸೋಕ್ತಿ' ಎಬ ಪ್ರಭೇದವನ್ನು ದಂಡಿ ಉಪಲಕ್ಷಿಸಿದ್ದಾನೆ).

"ದಾನಪರನಂ (೧. ಮದೋದಕವನ್ನು ಸುರಿಸುತ್ತಿರುವ ಗಂಡಾನೆ ; ೨. ದಾನಪರನಾದ ವ್ಯಕ್ತಿ), ನಿಜೋನ್ನತಮಾನನಂ (ಉನ್ನತಮಾನ : ೧. ಹೆಚ್ಚಾಗಿ ಮದವೇರಿದ ; ೧. ವಿಶೇಷ ಸ್ವಾಭಿಮಾನಿಯಾದ), ಆರೂಢ ವಿಪುಳ ವಂಶನಂ (೧. ವಿಸ್ತಾರವಾದ ಬಿದಿರುಮೆಳೆಯಲ್ಲಿ ನೆಲಸಿರುವ ; ೨. ಪುರಾತನ ವಂಶದಲ್ಲಿ ಜನಿಸಿದವನಾದ), ಅಪಾಯಪಂಕದೊಳ್ (೧. ಬಹುಶಃ ಬೇಟೆಗಾರರು ಕಲ್ಪಿಸಿದ, ಅಪಾಯಕರವಾದ ಕೆಸರಿನ ಹಳ್ಳ ; ೨. ಅಪಾಯ ಪರಿಸ್ಥಿತಿಯೆಂಬ ಕೆಸರು), ಏನುಂ ತಳ್ವು ಇಲ್ಲದಿರ್ದುದಂ (ತಳ್ವು = ತಳ್ಳುವುದು, ತಡಮಾಡುವುದು, ತಡಮಾಡಲು ಕಾಲಾವಕಾಶ), ಕಾಣಿಸಿದಂ".

ಪದ್ಯ ೧೩೦ : ಲಕ್ಷ್ಯಲಕ್ಷಣ ಸಮನ್ವಯದ ಪದ್ಯ ; ಲಕ್ಷ್ಯಪದ್ಯದ ಅಂತರಾರ್ಥವನ್ನು

ಇಲ್ಲಿ ವಿವರಿಸಿದೆ : ತ್ಯಾಗಾದಿ ಗುಣಗಣೋದಯ ಭಾಗಿಯಂ, ಏನಾನುಂ ಒಂದು ಉಪಾಯಾಂತರದಿಂ, ನೀಗಲ್‌ನೆಱೆಯದೆ (ಪಾರುಮಾಡಲು ಸಮರ್ಥನಾಗದೆ) ಅನುಪಮಂ, ಈ ಗಣಿದದಿಂ (= ಎಣಿಕೆಯಿಂದ), ಬಗೆಯಂ ಆನೆಮಾಡಿ ನುಡಿದಂ (=ಅಪಾಯಪಂಕಕ್ಕೆ ಸಿಕ್ಕಿದವನ ಅವಸ್ಥೆಯನ್ನು ಆನೆಯ ಅವಸ್ಥೆಗೆ ಹೋಲಿಸಿ ಹೇಳಿದನು)".[೬೧]

## ೧೭. ಪರ್ಯಾಯೋಕ್ತಿ

ಪದ್ಯ ೧೩೧ : "ಬಗೆದರ್ಥಮನಱಿಪದೆ (ಉದ್ದಿಷ್ಟವಾದ ಅರ್ಥವನ್ನು 'ಸಾಕ್ಷಾತ್ತಾಗಿ' ತಿಳಿಸದೆ), ಮೆಲ್ಲಗೆ ತಿರ್ದುವ ಬಗೆಯಂ ಪೆಱತಂ ಅದಱ ನೆವದಿಂ ನಿಗದಿಸುವುದು ಪರ್ಯಾಯೋಕ್ತಂ (ತಿಳಿಸದಿದ್ದರೂ ಅದು ಉಪಾಯವಾಗಿ ನೆರವೇರುವ ರೀತಿಯನ್ನು ಸೂಚಿಸುವುದಕ್ಕಾಗಿ ಇನ್ನೊಂದನ್ನು ಹೇಳುವುದು, ಎಂದರೆ ಪರ್ಯಾಯವಾಗಿ ಅಥವಾ ಪ್ರಕಾರಾಂತರವಾಗಿ ಅದನ್ನೇ ಹೇಳುವುದು, 'ಪರ್ಯಾಯೋಕ್ತ'.)"

ಪದ್ಯ ೧೩೨ : "ನೀಂ ಇರ್ವರುಂ ಅನ್ನೆಗಂ ಇಂತು, ಈ ಮಾಟ್ಕೆಯೊಳ್ (=ಈ ರೀತಿಯಲ್ಲಿ) ಇನಿಸು ಪೊಟ್ತು (= ಸ್ವಲ್ಪಹೊತ್ತು), ನುಡಿವುತ್ತಿರಿಂ ; ಆಂ, ಆಮೋದಕುಸುಮಸಮಿತಿಯಂ (= ಸುಗಂಧಯುಕ್ತವಾದ ಹೂಗಳ ಸಂಗ್ರಹವನ್ನು), ಆ ಮರಗಳೊಳ್ ಆಯ್ದುಕೊಯ್ದು ಇಲ್ಲಿಗೆ ಬರ್ಪೆಂ."

ಪದ್ಯ ೧೩೩ : ಈ ಪದ್ಯದಲ್ಲಿ ಮೇಲಿನ ದೃಷ್ಟಾಂತದ ಆಶಯವನ್ನು ವಿವರಿಸಿದೆ.: ಅನ್ವಯ : "(ಅವರ) ಅಭಿಮತಮುಮಂ ಬರ್ಬುಳಿಗೂಡೆ (= ಒಂದುಗೂಡಿಸಲು), ಮೊಕ್ಕಳಂ (= ಹೆಚ್ಚಾಗಿ) ಸುರತಸೇವನಮಂ ಅವರ್ಗೆ ಮಾಡಲೆಂದು ವಿದಗ್ಧೆ ಆಗಳೆ ಪೋಗಲ ಬಗೆದು ಕೆಳದಿಯನ್[೬೨]

೬೧. ದಿವಂಗತ ಮುಳಿಯ ತಿಮ್ಮಪ್ಪಯ್ಯನವರು, "ಭಾರತ ಚಕ್ರವರ್ತಿಯಾಗಿದ್ದ ತಂದೆಯನ್ನು ಕಳಕೊಂಡ ಪುತ್ರನಿಗೆ ಪಟ್ಟವೇರಿದೊಡನೆ ಅಥವಾ ಸ್ವಲ್ಪವೆ ಕಾಲದಲ್ಲಿ ರಾಜ್ಯಭ್ರಷ್ಟನಾಗಬೇಕಾದ ದುರವಸ್ಥೆ ಒದಗಿತು" ಎಂಬ ಸಂಗತಿಯನ್ನು ತಿಳಿಸಿ, "ಇಲ್ಲಿ ವಿಸ್ತರಿಸಿದಂತೆ, 'ಈ ಗಣಿದದಿಂ ಆನೆಮಾಡಿ' ನುಡಿದುದೆಂದರೆ, ಇಂಥ ಅವಸ್ಥೆಯಲ್ಲಿ ಹಗೆಗಳ ಬಲೆಗೆ ಸಿಲುಕಿಹೋದ ನೃಪತುಂಗರಾಜನ ಅವಸ್ಥೆಯನ್ನೇ ಸೂಚಿಸಿದುದಾಗಿ ತೋರುತ್ತಿದೆ" ಎಂದು ಊಹಿಸಿದ್ದಾರೆ. (ಕ.ರಾ.ವಿವೇಕ–೧; ಪು.೩೯–೪೦). ಇದು ವಿಚಾರಣೀಯವಾದ ಅಂಶ.

೬೨. ಎರಡು ಮುದ್ರಿತ ಪ್ರತಿಗಳಲ್ಲಿಯೂ 'ಕೆಳದಿಯಮಭಿಮತಮುಮಂ' ಎಂಬ ಪಾಠವಿದೆ. 'ಕೆಳದಿಯ(ನ) ಭಿಮತಮುಮಂ' ಎಂಬ ತಿದ್ದುಪಾಟನ್ನು ಬಿ.ಎಂ.ಶ್ರೀ.ಯವರು ಸೂಚಿಸಿದ್ದಾರೆ. (Q.J.M.O.S., XXIII–೩ : ಪು. ೪೪೦).

ನುಡಿದಳಿಂತೀ ಮಾತಂ". ನಲ್ಲನಲ್ಲೆಯರ ಮನಸ್ಸು ಒಂದುಗೂಡಿ, ಏಕಾಂತತೆಯಲ್ಲಿ ಅವರ ಸಮಾಗಮವಾಗಬೇಕೆಂಬುದು ವಿದಗ್ಧೆಯ ಇಷ್ಟಾರ್ಥ." ಅದನ್ನು ನೇರವಾಗಿ ತಿಳಿಸದೆ ತಾನು ಹೂಗೊಯ್ಯುವ ಕಾರಣವನ್ನು ತಿಳಿಸಿ ಹೊರಟು ಹೋಗುತ್ತಾಳೆ.

## ೧೮. ವಿರೋಧಾಲಂಕಾರ

ಪದ್ಯ ೧೩೪ : "ಒಂದೊಂದಱೊಳ್ ಒಂದೊಂದುವಂ ತಂದು ಒರ್ಬುಳಿ ಮಾಡಿ (= ವಿರುದ್ಧಗಳಾದ ಪದಾರ್ಥಗಳನ್ನು 'ಬರ್ಬುಳಿ ಮಾಡಿ' ಎಂದರೆ ಸಂಸರ್ಗವಾಗುವಂತೆ ಮಾಡಿ, ಒಡಗೂಡಿಸಿ), ತದ್ವಿಶೇಷಾಂತರಮಂ ಸಂದೇಹಮಿಲ್ಲದೆ ಅಱಿಪುವುದು' (= ಅವುಗಳೊಳಗಿನ ವಿಶೇಷವಾದ ಅಂತರವನ್ನು, ಎಂದರೆ ಅವುಗಳ ವಿಶಿಷ್ಟ ಭಿನ್ನ ಗುಣಗಳನ್ನು ಸ್ಪಷ್ಟವಾಗಿ ತಿಳಿಸುವುದು), ಒಂದೆ (= ಹೊಂದಿಕೊಂಡು ಬಂದಾಗ), ವಿರೋಧಾಭಿಧಾನಂ (= 'ವಿರೋಧ'ವೆಂಬ ಹೆಸರುಳ್ಳ ಅಲಂಕಾರವಾಗುವುದು) ; ಅದು ಇಂತಕ್ಕುಂ".

ಪದ್ಯ ೧೩೫ : 'ವಿರೋಧ'ಕ್ಕೆ ಲಕ್ಷ್ಯ (ದಂಡಿಯ ಶ್ಲೋಕದ ಅನುವಾದ) : "ಶರದಾಗಮದೊಳ್ ಕಳಹಂಸರವಂ ಕಿವಿಗೆ ಪೀನಂ ಸೊಗಯಿಸಿ ಪೆರ್ಚಿತ್ತು (= ಶರದೃತುವಿನ ಪ್ರಾರಂಭದಲ್ಲಿ ಹಂಸಪಕ್ಷಿಗಳ ಇಂಪಾದ ಸ್ವರವು ಕಿವಿಗೆ ವಿಶೇಷವಾದ ಆನಂದವನ್ನು ಉಂಟು ಮಾಡಿ ಹೆಚ್ಚಿತು) ; ಉರು ಮುದ ವಿರಾಮ ವಿರಸ ವಿರಾಗಂ (= ವರ್ಷಾಕಾಲದಲ್ಲಿದ್ದ ಅಧಿಕವಾದ ಸಂತೋಷಕ್ಕೆ ನಿಲುಗಡೆಯುಂಟಾದದ್ದರಿಂದ ನೀರಸವೂ ಪ್ರೇಮರಹಿತವೂ ಆದ), ಬರ್ಹಿಣ ವಿರಾವಂ (= ನವಿಲುಗಳ ಗಟ್ಟಿಯಾದ ಕೇಕಾರವವು), ವಿರಳತರಮಾಯ್ತು (= ಬಲುಮಟ್ಟಿಗೆ ಕೇಳದಾಯಿತು)." – ಮಳೆಗಾಲವು ನವಿಲುಗಳಿಗೆ ಸಂತೋದಾಯಕವೂ ಹಂಸಗಳಿಗೆ ದುಃಖಕರವೂ ಆಗಿರುವಂತೆ ಶರತ್ಕಾಲವು ನವಿಲುಗಳಿಗೆ ದುಃಖಕರವೂ, ಹಂಸಗಳಿಗೆ ಸಂತೋಷದಾಯಕವೂ ಆಗಿರುವುದೆಂಬುದಿದು ಕವಿಸಮಯ. ಇಲ್ಲಿ, ಶರತ್ಕಾಲದಲ್ಲಿ ಪರಸ್ಪರ ವಿರುದ್ಧಗಳಾದ ಹಂಸಮಯೂರಗಳ ಸ್ವಭಾವವನ್ನು ಒಟ್ಟಿಗೆ ನಿರೂಪಿಸುವುದರ ಮೂಲಕ ಅವುಗಳ ವಿಶಿಷ್ಟ ಗುಣಗಳನ್ನು ಎತ್ತಿತೋರಿದೆ.

ಪದ್ಯ ೧೩೬ : 'ಮಲಯಾನಿಳನ ಎಸಕದಿಂ ಉದಿರ್ವ ಅಲರ್ಗಳ

ಮಕರಂದಮಾಲೆಗಳ್ (= ವಸಂತಕಾಲದ ಮಲಯಮಾರುತನ ಕಾರ್ಯದಿಂದ, ಎಂದರೆ ಬೀಸುವಿಕೆಯಿಂದ ಉದಿರುವ ಹೂಗಳ ಮಕರಂದದ ಹನಿಗಳ ಮಾಲೆಗಳು), ಪರೆದು ಎತ್ತಂ ನೆಲದೊಳ್ ಬಿಟ್ಟುಂ (= ಎಲ್ಲೆಲ್ಲಿಯೂ ಹರಡಿ ನೆಲದಲ್ಲಿಯೆ ಬಿದ್ದರೂ ಕೂಡ), ವಿರಹಿಗಳಾ ವಿಲೋಚನಾಂಬುಗಳಂ ಅಗ್ಗಳಂ ಪಡೆದುವು (= ಅಗಲಿದ ಪ್ರಣಯಿಗಳ ಕಣ್ಣೀರನ್ನು ವಿಶೇಷವಾಗಿ ಪಡೆದುವು)." – (ಇದು ದಂಡಿಯ ಲಕ್ಷ್ಯದ ಸ್ಥೂಲವಾದ ಅನುವಾದ : ಅಲ್ಲಿನ 'ಉದ್ಯಾನ ಮಾರುತ', 'ಚಂಪಕರೇಣು' ಮತ್ತು 'ಪಾಂಥರು' ಇಲ್ಲಿ ('ಮಲಯಮಾರುತ' 'ಮಕರಂದಮಾಲೆ' ಹಾಗೂ 'ವಿರಹಿಗಳು' ಆಗಿವೆ). ಮೇಲಿನ ಲಕ್ಷ್ಯವು ಶರದದ ವರ್ಣನೆಯಾದರೆ, ಇದು ವಸಂತದ ವರ್ಣನೆ. ವಸಂತ ಮಾಸದಲ್ಲಿ ಹೂವಿನ ಮಕರಂದ ನೆಲಕ್ಕೆ ತೊಟ್ಟಿಕ್ಕುವುದು ನಿಜವಾಗಿ ಹರ್ಷದಾಯಕವಾದ ನೋಟ ; ಅವು ನೆಲಕ್ಕೆ ಬೀಳದೆ, ವಿರಹಿಗಳ ಕಣ್ಣಿಗೆ ಬಿದ್ದಿದ್ದರೆ, ಆ ಕಾರಣದಿಂದ ನೀರು ಸುರಿಯುತ್ತಿದೆ ಎಂದು ಭಾವಿಸಬಹುದಾಗಿತ್ತು ; ಆದರೆ, ಅದು ನೆಲಕ್ಕೆ ಬಿದ್ದರೂ ಕೂಡ, ಅವರು ಕಣ್ಣೀರು ಸುರಿಸುತ್ತಿರುವುದು, ತಾವು ಅಗಲಿದ ಪ್ರಿಯರನ್ನು ನೆನೆದು. (ವಸಂತವಾದ್ದರಿಂದ). ಮಕರಂದ ತೊಟ್ಟಿಕ್ಕುವ ಗೆಲವಿನ ಸಂಗತಿ, ವಿರಹಿಗಳ ಅಗಲಿಕೆಯ ಕೊರಗು – ಇವು ಒಂದಕ್ಕೊಂದು ವಿರುದ್ಧ. ಇವೆರಡೂ ಏಕತ್ರ ಇರುವಂತೆ ವರ್ಣಿತವಾಗಿರುವುದರಿಂದ, 'ವಿರೋಧಾಲಂಕಾರ.'

ಪದ್ಯ ೧೩೭ : "ವಿರೋಧಿಗತ ಮಾರ್ಗಭೇದ'ವನ್ನು (ಎಂದರೆ, ವಿರುದ್ಧ ವಸ್ತುಗತವಾದ ಅಲಂಕಾರ ಭೇದವನ್ನು) ಈ ಮೊದಲು ತೋರಿಸಿರುವೆನು" ಎಂದು ಹೇಳಿ, "ಉಪಮಾದಿ ಅಲಂಕಾರಗಳಲ್ಲಿಯೂ ಕಂಡುಬರುವ ವಿರೋಧ ಲಕ್ಷಣವನ್ನು ಲಕ್ಷ್ಯಗಳ ಮೂಲಕ ಅರಿಯಿರಿ" – ಎಂದು ಹೇಳಿ, 'ಉಪಮಾದಿ ಅಲಂಕಾರಗಳಲ್ಲಿಯೂ ಕಂಡುಬರುವ ವಿರೋಧ ಲಕ್ಷಣವನ್ನು ಲಕ್ಷ್ಯಗಳ ಮೂಲಕ ಅರಿಯಿರಿ" – ಎಂದು ಒಂದು ವಿಶೇಷಾಂಕವನ್ನು ಮಾರ್ಗಕಾರನು ಇಲ್ಲಿ ತಿಳಿಸಿದ್ದಾನೆ. (ದಂಡಿ ಇದನ್ನು ಹೇಳಿಲ್ಲ). ('ವಿರುದ್ಧರೂಪಕ' (III–೧೯), 'ವಿರುದ್ಧಾತ್ಮಕ ಅರ್ಥಾಂತರನ್ಯಾಸ' (III–೩೫), 'ವಿರೋಧೋಪಮೆ' (III–೭೫), – ಇವನ್ನು 'ವಿರೋಧ'ದೊಂದಿಗೆ ಹೋಲಿಸಬಹುದು. ಈ ಅಲಂಕಾರಗಳಲ್ಲಿ ಪ್ರಕೃತ ಅಪ್ರಕೃತ (ವರ್ಣ್ಯ ಅವರ್ಣ್ಯ)ಗಳ ನಿರೂಪಣೆಯಿದ್ದು, ಅವುಗಳ

ನಡುವಣ ಸಾದೃಶ್ಯವು ವಾಚ್ಯವಾಗಿಯೋ ಸೂಚ್ಯವಾಗಿಯೋ ಬಂದಿರುತ್ತದೆ. 'ವಿರೋಧ'ದಲ್ಲಿಯಾದರೆ ವರ್ಣ್ಯಾವರ್ಣ್ಯಗಳ ನಡುವಣ ಸಮಾನಧರ್ಮದ ಪ್ರಸಕ್ತಿಯಿಲ್ಲ. ಅಲ್ಲದೆ, ನವೀನಾಲಂಕಾರಿಕರು ಹೇಳುವ 'ವಿರೋಧಾಭಾಸವೂ' ಇದಲ್ಲ).

## ೧೯. ಅಪ್ರಸ್ತುತ ಪ್ರಶಂಸೆ

ಪದ್ಯ ೧೩೮ : "ಪ್ರಸ್ತುತಮಲ್ಲದುದನೆ ಮಿಗೆ (ಹೆಚ್ಚಾಗಿ), ವಿಸ್ತಾರಿಸಿ, ನೆಗಟ್ಟೆ ಪೇಟ್ಟೊಡೆ (ಸುವ್ಯಕ್ತವಗುವಂತೆ ಹೇಳಿದರೆ), ಅದು 'ಅಪ್ರಸ್ತುತ' ಎಂಬ ಅಲಂಕಾರ". ಇದನ್ನೆ ದಂಡಿ 'ಕಾವ್ಯಾದರ್ಶ'ದಲ್ಲಿ 'ಅಪ್ರಸ್ತುತ ಪ್ರಶಂಸಾ ಸ್ಯಾದಪ್ರಾಕ್ರಾಂತೇಷು ಯಾ ಸ್ತುತಿಃ' ಎಂದು ನಿರೂಪಿಸಿದ್ದಾನೆ. 'ಪ್ರಶಂಸೆ' 'ಸ್ತುತಿ' ಎಂಬ ಮಾತುಗಳ ಭಾವವನ್ನೇ 'ಮಿಗೆ ವಿಸ್ತಾರಿಸಿ ನೆಗಟ್ಟೆ ಪೇಟ್ಟೊಡೆ'[೬೩] ಎಂಬ ಮಾತುಗಳಲ್ಲಿ ಮಾರ್ಗಕಾರನು ವಿಸ್ತರಿಸಿದ್ದಾನೆ ಎಂದು ತಿಳಿಯಬೇಕು. ಈ ಅಲಂಕಾರದಲ್ಲಿ, ಉಪಮಾನ ವಾಕ್ಯದ ಎಂದರೆ ಅಪ್ರಸ್ತುತ. ಹೊಗಳಿಕೆಯಿಂದ ಉಪಮೇಯದ ಎಂದರೆ ಅಪ್ರಸ್ತುತದ ಸ್ಥಿತಿ ತಿಳಿಯುತ್ತದೆ. (ಈ ಅಲಂಕಾರದೊಂದಿಗೆ, ಈ ಹಿಂದೆ ಹೇಳಿದ 'ಸಮಾಸೋಕ್ತಿ'ಯನ್ನು ಹೋಲಿಸಿ ನೋಡಬೇಕು. (ಪ. ೧೨೬–೧೩೦). ಅಲ್ಲಿಯೂ ಅಪ್ರಸ್ತುತ ವರ್ಣನೆಯ ಮೂಲಕ ಪ್ರಸ್ತುತವು ಸೂಚಿತವಾಗಿರುತ್ತದೆ. ಅದರ ಲಕ್ಷಣ ನಿರೂಪಣೆಯಲ್ಲಿ, 'ಅದನೆ ಪೋಲ್ವುದಂ ಕುಱಿಪುಗಳಂ ಕುಱಿಮಾಡಿ ಪೇಱ್ವುದು' ಎಂದುದರಿಂದ ಪ್ರಸ್ತುತಾಪ್ರಸ್ತುತಗಳ ನಡುವಣ ಹೋಲಿಕೆಗೆ ಪ್ರಾಧಾನ್ಯ ; ಅಲ್ಲದೆ, ಅಲ್ಲಿ 'ಸ್ತುತಿ'ಯ (ಪ್ರಶಂಸೆಯ) ಪ್ರಸಕ್ತಿಯಿಲ್ಲ. 'ಅಪ್ರಸ್ತುತ'ದಲ್ಲಿ ಪ್ರಶಂಸೆ ಇದ್ದೇ ಇರುತ್ತದೆ. ಈ ಎರಡು ಅಲಂಕಾರಗಳ ನಡುವಣ ಸೂಕ್ಷ್ಮ ಭೇಧವಿದು)

ಪದ್ಯ ೧೩೯–೧೪೦ : (ಲಕ್ಷ್ಯಲಕ್ಷಣ ಸಮನ್ವಯವುಳ್ಳ ಈ ಎರಡು ಪದ್ಯಗಳು ದಂಡಿಯ ಶ್ಲೋಕಗಳನ್ನೆ ಬಹುಮಟ್ಟಿಗೆ ಅನುಸರಿಸಿವೆ) : "ಮೃಗಗಣಮೆ (= ಜಿಂಕೆಗಳ ಬಳಗವೆ), ಸೊಗಯಿಸುವ ಬಹುತೃಣದೊಳ್

---

೬೩. ಮೈಸೂರು ಓರಿಯಂಟಲ್ ಲೈಬ್ರರಿಯ ಒಂದು ಪ್ರತಿಯಲ್ಲಿ 'ವಿಸ್ತಾರಿ... ಮತ್ತಂಪ್ರ' ಎಂದಿಷ್ಟೇ ಇದೆ. ಇದು ಅಷ್ಟು ಶುದ್ಧವಾದ ಪ್ರತಿಯಲ್ಲ. ಆದರೂ ತ್ರುಟಿತವಾದ ಸ್ಥಳದಲ್ಲಿ 'ನೆಗಟ್ಟೆ' ಎಂಬೆಡೆಯುಲ್ಲಿ 'ಪೊಗಟ್ಟೆ' ಎಂದು ಇದ್ದಿರಬಹುದೆ ಎಂಬ ಸಂದೇಹವುಂಟಾಗುತ್ತದೆ. 'ದಂಡಿ'ಯ 'ಸ್ತುತಿಃ' ಎಂಬ ಮಾತಿಗೂ ಇದು ಸರಿಹೋಗುತ್ತದೆ.

ವನಾಂತರಾಳದೊಳ್ (= ಹುಲುಸಾಗಿ ಬೆಳೆದ ಹಸುರು ಹುಲ್ಲಿನಿಂದ ತುಂಬಿರುವ ಕಾಡಿನ ನಡುವೆ), ವಸುಮದ ವಿರಾಮ ಕಲುಷಾಯತರಾ ಮೊಗಮಂ ಬಗೆದು ಅಳಿಪಿ ಸುೞಿದು ನೋಡದೆ (ಐಶ್ವರ್ಯಮದದ ಸುಖಜೀವನದಿಂದ ಕಲುಷಿತರಾದವರ ಬಳಿ ಸುಳಿದು ಆಸೆಪಟ್ಟು ಅವರ ಮುಖವನ್ನು ಕೂಡ ನೋಡದೆ), ಸುಖಂ ಬಾೞ್ಗುಂ." (ಪ. ೧೪೦)

"ಪರಸೇವಾಚಿಂತಾವಿಷಾದಿತಾಂತಸ್ಸ್ವಾಂತಂ ತನ್ನಂ ತಾನೇ ಸಂತೈಸಲೆಂದು (= ಹೆರರನ್ನು ಸೇವಿಸುವ ಚಿಂತೆಯಿಂದ ಕೊರಗುವ ಮನಸ್ಸುಳ್ಳವನು ತನ್ನನ್ನು ತಾನೇ ಸಮಾಧಾನ ಪಡಿಸಿಕೊಳ್ಳುವ ಉದ್ದೇಶದಿಂದ), ಅಪ್ರಸ್ತುತಮಂ ಮೃಗಗಣವೃತ್ತಿಯಂ ಸಂತಂ ಇಂತು ಅಱಿಪಿದಂ (= ಅಪ್ರಸ್ತುತವಾದ, ಎಂದರೆ ತನ್ನ ವಿಚಾರಕ್ಕೆ ಸಂಬಂಧಪಡದ, ಜಿಂಕೆಗಳ ಗುಂಪಿನ ಜೀವನವನ್ನು ಮೆಲ್ಲನೆ ಈ ರೀತಿ ತಿಳಿಸಿದನು)."

ಹೊಟ್ಟೆಯ ಪಾಡಿಗಾಗಿ ಪರರ ಸೇವೆ ಮಾಡುತ್ತ ಅಸ್ವತಂತ್ರನಾಗಿ ಬದುಕುವುದಕ್ಕಿಂತ ಕಾಡಿನಲ್ಲಿ ಜಿಂಕೆಗಳ ಹಾಗೆ ಸ್ವತಂತ್ರವಾದ ಸರಳ ಜೀವನವನ್ನು ನಡಸುವುದು ಮೇಲು – ಎಂಬುದೇ ಲಕ್ಷ್ಯದ ವಿವಕ್ಷಿತಾರ್ಥ. ಸೇವಾವೃತ್ತಿಯಲ್ಲಿರುವವನು ತನ್ನ ಶೋಚನೀಯ ಸ್ಥಿತಿಯನ್ನು ಕುರಿತು ಮರುಗುವುದೇ ಪ್ರಸ್ತುತವಿಷಯವು ಸೂಚಿತವಾಗಿದೆ. 'ನೋಡದೆ ಮೊದಮಂ ವಸುಮದ ವಿರಾಮ ಕಲುಷಾಯತರಾ' ಎಂಬ ನಿಂದೆನುಡಿ ಪ್ರಸ್ತುತಸೂಚಕವಾಗಿದೆ.

## ೨೦.ನಿದರ್ಶನಾಲಂಕಾರ

ಪದ್ಯ ೧೪೧ : "ಗುಣದೋಷಾದಿಗಳಿಂದ ಅನುಗುಣಮಾಗಿರೆ ಪೇೞ್ದು (= ಒಬ್ಬ ವ್ಯಕ್ತಿಯು ಇಲ್ಲವೆ ವಸ್ತುವಿನ ಗುಣದೋಷಾದಿಗಳಿಗೆ ಅನುಗುಣವಾಗಿ ಆ ವ್ಯಕ್ತಿಯ ಇಲ್ಲವೆ ವಸ್ತುವಿನ ವಿಷಯವನ್ನು ವಿವರಿಸಿ), ತದನುಸದೃಶದಿಂ ಒಂದಂ ಪ್ರಣಿಹಿತ ನಿದರ್ಶನಕ್ರಮದೆ ಎಣಿಸುವುದು (ಅದನ್ನು ಹೋಲುವ ಮತ್ತೊಂದನ್ನು ನಿದರ್ಶನ ಕ್ರಮದಲ್ಲಿ ಅದರ ಮುಂದಿಟ್ಟು ಅದನ್ನು ಪರಿಗಣಿಸುವುದು)" ನಿದರ್ಶನಾಲಂಕಾರ.

ಮಾರ್ಗಕಾರನ ಲಕ್ಷಣ ನಿರೂಪಣೆ ದಂಡಿಯದಕ್ಕಿಂತ ತುಸ ಭಿನ್ನವಾಗಿದೆ. ದಂಡಿಯ ಶ್ಲೋಕ :

ಅರ್ಥಾಂತರಪ್ರವೃತ್ತೇನ ಕಿಂಚಿತ್ ತತ್ಸದೃಶಂ ಫಲಂ ।
ಸದಸದ್ವಾ ನಿದರ್ಶ್ಯೇತ ಯದಿ ತತ್ ಸ್ಯಾನಿದರ್ಶನಂ ॥ –II, ೩೪೮

(ಒಂದು ಅರ್ಥಾಂತರವನ್ನು ಹೇಳಹೊರಟಿರುವಲ್ಲಿ, ಸ್ವಲ್ಪ ಮಟ್ಟಿಗೆ ಅದಕ್ಕೆ ಸದೃಶವಾದ ಫಲವನ್ನು – ಎಂದರೆ ಅದರಿಂದ ಫಲಿಸುವ ಅರ್ಥವನ್ನು – ಅದು ಇರಲಿ ಇಲ್ಲದಿರಲಿ – ಅದರಿಂದ ಹೊರಪಡಿಸಿ ತೋರಿಸುವುದೇ 'ನಿದರ್ಶನ').

ದಂಡಿ 'ಅರ್ಥ' ಎಂದು ವ್ಯಾಪಕವಾಗಿ ಹೇಳಿರುವುದನ್ನು, ಮಾರ್ಗಕಾರನು 'ಗುಣದೋಷನಿಷ್ಠವಾದ ಅರ್ಥ' ಎಂದು ವಿಶೇಷೀಕರಿಸಿರುವಂತೆ ಕಂಡುಬರುತ್ತದೆ. ಆದ್ದರಿಂದಲೇ ದಂಡಿಯ ಲಕ್ಷ್ಯಗಳನ್ನು ಸ್ವೀಕರಿಸದೆ, ತನ್ನವೇ ಆದ ಲಕ್ಷ್ಯಗಳನ್ನು ರಚಿಸಿದ್ದಾನೆ.

ಮಾರ್ಗಕಾರನು ಕೊಡುವ ಲಕ್ಷ್ಯಗಳೂ ಬೇರೆಯೇ ಆದ್ದರಿಂದ, ದಂಡಿಯ ಒಂದು ಲಕ್ಷ್ಯವನ್ನೂ ಇಲ್ಲಿ ಗಮನಿಸುವುದು ಅಪ್ರಸಕ್ತವಾಗದು :

ಉದಯನ್ನೇವ ಸವಿತಾ ಪದ್ಮೇಷ್ವರ್ಪಯತಿ ಶ್ರೀಯಂ ।
ವಿಭಾವಯಿತುಮೃದ್ಧೀನಾಂ ಫಲ ಸುಹೃದಯನುಗ್ರಹಂ ॥ –II, ೩೪೯

(ಸೂರ್ಯನು ಉದಯಿಸಿದ ಕೂಡಲೆ ಪದ್ಮಪುಷ್ಪಗಳಿಗೆ ಸೌಂದರ್ಯ ಶ್ರೀಯನ್ನು ನೀಡುತ್ತಾನೆ – ಒಬ್ಬರು ಅಭಿವೃದ್ಧಿ ಹೊಂದಿದ ಫಲವೆಂದರೆ, ಸ್ನೇಹಿತರಿಗೆ ಅನುಗ್ರಹ ತೋರುವುದು ಎಂಬುದನ್ನು ಮನಗಾಣಿಸುವುದಕ್ಕಾಗಿ).

ಇನ್ನು, ಮಾರ್ಗಕಾರನ ಲಕ್ಷ್ಯಗಳನ್ನು ಪರಿಶೀಲಿಸಬಹುದು :

ಪದ್ಯ ೧೪೨ : "ಅಮಳಿನ ಗುಣವೃತ್ತಿಗಳಿಂ (ಮಲಿನವಲ್ಲದ ಎಂದರೆ ನಿರ್ಮಲವಾದ ಗುಣಗಳಿಂದಲೂ ನಡೆವಳಿಯಿಂದಲೂ), ಸಮುಪಸ್ಥಿತ ಸಕಲಜನಗತೋಚಿತ ಗುಣಮಂ (= ಜನರಲ್ಲಿ ಚೆನ್ನಾಗಿ ನೆಲೆಗೊಂಡ, ಅಂತರ್ಗತವಾದ ಅವರ ಯೋಗ್ಯ ಗುಣವನ್ನು) ಸಮನಾಗಿಸುವರ್ (= ಎಲ್ಲರಲ್ಲಿಯೂ ಒಂದೇ ಸಮನಾಗಿರುವಂತೆ ಮಾಡುವರು) – ಕನ್ನಡಿ, ಕಮನೀಯಾಕಾರ ಬಿಂಬಮಂ ತಾಳಲ್ದುವವೋಲ್ (= ಚೆಲುವಾದ ರೂಪಿನ ಪ್ರತಿಬಿಂಬವನ್ನು ತಳೆಯುವ ಹಾಗೆ)." – ಆದರ್ಶಪ್ರಾಯರಾದ ರಾಜರು ಜನರ ಸದ್ಗುಣಗಳನ್ನು ಹೇಗೆ ಒಂದೇ ಸಮನಾಗಿ ಕಾಣುವರು ಎಂಬುದು ಬಹುಶಃ ಈ ಪದ್ಯದ ತಾತ್ಪರ್ಯಾರ್ಥವಾಗಿ ತೋರುತ್ತದೆ. ಮುಂದಿನ ಲಕ್ಷ್ಯದಲ್ಲಿ ಮಂತ್ರಿಗುಣವನ್ನು ಬಣ್ಣಿಸಿರುವುದರಿಂದ, ಇಲ್ಲಿನದು ರಾಜ ವಿಷಯಕವಾದುದೆಂದು ಊಹಿಸಿದರೆ ತಪ್ಪಾಗದು. ಅಲ್ಲದೆ, ಇನ್ನುಳಿದ 'ನಿದರ್ಶನಾಲಂಕಾರ'ದ ಲಕ್ಷ್ಯಪದ್ಯಗಳೂ ರಾಜನೀತಿಗೇ ಸಂಬಂಧಪಟ್ಟಿರುವುದು ಸ್ಪಷ್ಟವಾಗಿದೆ).

ಪದ್ಯ ೧೪೩ : "ಜನಂ ಅಱಿಯದನ್ನೆಗಂ ಮುನ್ನಂ ನಯಂ ಅಱಿದು ಅಱಿಪಲ್

ಆರ್ಪೊಡೆ ದು ಮಂತ್ರಿಗುಣಂ ; ಜನವಾದಂ ನೆಗಟ್ತೆ, ನಗಧ್ವನಿವೋಲ್, ಅನುಕರಣವಾರ್ತೆ ಮಂತ್ರಿಯ ಗುಣಮೇ?' ('ರಾಜ್ಯಕ್ಕೆ ಸಂಬಂಧಪಟ್ಟ ಯಾವ ಸಂಗತಿಯೇ ಆಗಲಿ, ಜನರು ತಿಳಿವಳಿಕೆ ಪಡೆಯುವ ಮೊದಲೇ ಅನುಸರಿಸಬೇಕಾದ ನೀತಿಯೇನೆಂಬುದನ್ನು ತಿಳಿದು ಅದನ್ನು ರಾಜನಿಗೆ ಅರುಹಲು ಮಂತ್ರಿ ಸಮರ್ಥನಾದರೆ, ಅದು ಮಂತ್ರಿಗುಣ ; ಅದಿಲ್ಲದೆ, ಜನರು ಮಾತಾಡಿಕೊಳ್ಳಲು ಪ್ರಾರಂಭಿಸಿದ ಮೇಲೆ, ಬೆಟ್ಟ ಪ್ರತಿಧ್ವನಿ ಕೊಡುವ ಹಾಗೆ, ಜನ ಹೇಳಿದ್ದನ್ನೇ ತಾನೂ ಹೇಳುವುದು ಮಂತ್ರಿಯ ಗುಣವಲ್ಲ.') ಜನವಾದ = ಜನರ ಆಡಿಕೆ ಮಾತು. ನೆಗಟ್ = ಪ್ರಕಟವಾಗು, ತಲೆದೋರು. ನಗಧ್ವನಿ = ಬೆಟ್ಟದ – ಹೊಳಲು, ಪ್ರತಿಧ್ವನಿ.

(ಮೇಲೆ, ದಂಡಿಯು ಹಾಗೂ ಮಾರ್ಗಕಾರನ ಲಕ್ಷ್ಯಗಳನ್ನು ಪರಿಶೀಲಿಸಿದಲ್ಲಿ, ಇಬ್ಬರೂ ಕೊಡುವ ಲಕ್ಷಣ ಲಕ್ಷ್ಯಗಳ ನಡುವೆ ಇರುವ ಕೊಂಚಮಟ್ಟಿನ ಭೇದವನ್ನು ಗುರುತಿಸಬಹುದು. ದಂಡಿಯ ಲಕ್ಷಣ ಲಕ್ಷ್ಯಗಳಲ್ಲಿ 'ಮೂಲಾರ್ಥ–ಫಲಿತಾರ್ಥ ನಿದರ್ಶನ' ಇದ್ದರೆ, ಮಾರ್ಗಕಾರನ ಲಕ್ಷಣ ಲಕ್ಷ್ಯಗಳಲ್ಲಿ 'ಬಿಂಬ–ಪ್ರತಿಬಿಂಬ' ಭಾವವು ಕಂಡುಬರುವುದು. (ಇಲ್ಲಿನ ಈ ಮತ್ತು ಮುಂದಿನ ಹಲಕೆಲವು ಲಕ್ಷ್ಯಗಳಲ್ಲಿ, 'ತಾಳ್ದುವವೊಲ್', 'ಧ್ವನಿವೋಲ್' ಎಂಬಲ್ಲಿಯ 'ವೋಲ್' ಎಂಬ ಉಪಮಾವಾಚಕವಿದ್ದ ಮಾತ್ರಕ್ಕೆ ಇದನ್ನು 'ಉಪಮಾಲಂಕಾರ'ವೆಂದು ಶಂಕಿಸಬಾರದು).[೬೪]

---

೬೪. ಆದರೆ, ಭಾಮಹನು ನಿದರ್ಶನಾಲಂಕಾರದಲ್ಲಿ ಅಂತೆ', 'ಹಾಗೆ' ಮುಂತಾದ ಉಪಮಾವಾಚಕಗಳ ಪ್ರಯೋಗವನ್ನು ಸ್ಪಷ್ಟವಾಗಿ ನಿಷೇಧಿಸಿದ್ದಾನೆ.

ಕ್ರಿಯಯೈವ ವಿಶಿಷ್ಟಸ್ಯ ತದರ್ಥಸ್ಯೋಪದರ್ಶನಾತ್ ।

ಜ್ಞೇಯಾ ನಿದರ್ಶನಾ ನಾಮ ಯಥೇವವತಿಭಿರ್ವಿನಾ ॥ – ಕಾವ್ಯಾಲಂಕಾರ : III,೩೩

('ಅಂತೆ', 'ಹಾಗೆ', ಮುಂತಾದವುಗಳೊಂದೂ ಇಲ್ಲದ ವಾಕ್ಯದ ಮೂಲಕ ಒಂದರ ಕ್ರಿಯೆಯಿಂದಲೇ ವಿಶಿಷ್ಟವಾದ ಅದರ ಅಭಿಪ್ರಾಯವು ಬೋಧಿತವಾಗುವುದೆಂದು ವರ್ಣಿಸಿದರೆ ನಿದರ್ಶನಾಲಂಕಾರ)

"ಒಂದರ ಸ್ವಾಭಾವಿಕ ಕ್ರಿಯೆಯಲ್ಲಿ ತಾತ್ಪರ್ಯ ವಿಶೇಷವನ್ನು ನಿದರ್ಶಿಸುವುದೇ ನಿದರ್ಶನವೆಂಬಲಂಕಾರ. ಎರಡು ಭಿನ್ನ ವಾಕ್ಯಗಳಲ್ಲಿ ಬಿಂಬ–ಪ್ರತಿಬಿಂಬ ಭಾವ ಬಂದರೆ ದೃಷ್ಟಾಂತವೆಂದೂ, ಒಂದೇ ವಾಕ್ಯದಲ್ಲಿ ದೃಷ್ಟಾಂತವು ಮೊದಲು ಕಾಣುವಂತಿದ್ದರೆ ನಿದರ್ಶನವೆಂದೂ ನವೀನರು ಇವುಗಳ ವ್ಯತ್ಯಾಸವನ್ನು ಹೇಳುತ್ತಾರೆ." – ಡಾ॥ ಕೆ. ಕೃಷ್ಣಮೂರ್ತಿ : ಕ.ಕಾವ್ಯಾಲಂಕಾರ (ಅಡಿ ಟಿಪ್ಪಣಿ) ; ಪು. ೬೪.

ಪದ್ಯ ೧೪೪ : "ಮೊದಲು ಕಾರ್ಯಕ್ಕೆ ತಲೆಕೊಟ್ಟು (ಕಾರ್ಯಭಾರವನ್ನು ತಲೆಯಮೇಲೆ ಹೊತ್ತುಕೊಂಡು) ಆ ಬಳಿಕ ಆ ಕಾರ್ಯದ ಫಲವನ್ನು ಕೇಳಿ ಪ್ರಯೋಜನವೇನು ? ಹಾಗೆ ಕೇಳಿದರೆ, ಕ್ಷೌರ ಮಾಡಿಸಿಕೊಂಡ ಮೇಲೆ ('ತಲೆಯಂ ಕಿರಿಯಿಸಿ')[೬೫] ದಿನಶುದ್ಧಯನ್ನು (ತಿಥಿಯನ್ನು) ಬೇಸರವಿಲ್ಲದೆ ಕೇಳುವ ಹೆಡ್ಡನಂತಾಗುವುದು". ತಲೆ ಸೂಡು = ತಲೆಯ ಮೇಲೆ ಹೊತ್ತುಕೋ, ಧರಿಸು ಕಜ್ಜ = ಕಾರ್ಯ ಕಿರಿಯಿಸು = ಕ್ಷೌರ ಮಾಡಿಸಿಕೋ (ಕಿರಿ = ವಪನೇ, ತಂತು ಗ್ರಂಥೌಚ ಶ.ಮ.ಧ., ಧಾತುಪಾಠ) ಗಾವಿಲ = ಹೆಡ್ಡ, ಎಗ್ಗ, ಗಾಂಪ.

ಪದ್ಯ ೧೪೫ : "ವಿಧಿ ಪ್ರತಿಕೂಲನಾಗಿ ನಿಂತಿರುವಾಗ, ಆಪ್ತರ ಹಿತವಾದವೂ ನೀತಿಯೂ ('ಮತನಯಂ') ಅನುಕೂಲವಾಗಿದ್ದರೂ ಕೂಡ (ತದನುಗುಣವಾಗಿ ಎಷ್ಟೇ ಉದ್ಯೋಗ ಮಾಡಿದರೂ) ಕಾರ್ಯಸಾಧನೆ ಸಾಧ್ಯವಾಗುವುದಿಲ್ಲ. ಶವಕ್ಕೆ ಮಾಡಿದ ಉಪಚಾರದ ಹಾಗೆ, ಅದೆಲ್ಲವೂ ವ್ಯರ್ಥವಾದ ಆಯಾಸ."

---

ಮಾರ್ಗಕಾರನು ನಿದರ್ಶನಾಲಂಕಾರ ನಿರೂಪಣೆಯ ಉಪಸಂಹಾರ ಭಾಗದಲ್ಲಿ (ಪ. ೧೫೩) 'ಇಂತುದಿತಭೇದಮಂ ದೃಷಟ್ಟಂತಾಳಂಕಾರಮಾರ್ಗಮಂ ಕನ್ನಡದೊಳ್ I ಸಂತತಗುಣಮಂ ಕೈಕೊಳ್ವಂತಾಗಿದೆ ಬಗೆದು ಪೇಟ್ಗೆ ಪರಮ ಕವೀಶರ್' – ಎಂದು, ನಿದರ್ಶನಾಲಂಕಾರದಿಂದಲೇ ಹುಟ್ಟಿದ ಅಲಂಕಾರಭೇದ ದೃಷ್ಟಾಂತ, ಎದು ಸ್ಪಷ್ಟವಾಗಿ ಹೇಳಿದ್ದಾನೆ. ದಂಡಿ ಭಾಮಹರು 'ದೃಷ್ಟಾಂತ'ದ ಉಲ್ಲೇಖವನ್ನು ಮಾಡದಿದ್ದರೂ, ಕವಿಪ್ರಯೋಗದಲ್ಲಿ 'ಬಿಂಬ – ಪ್ರತಿಬಿಂಬಭಾವ' ಲಕ್ಷಿತವಾದ, ನಿದರ್ಶನೋದಿತವೆನ್ನಬಹುದಾದ ಅಲಂಕಾರಭೇದವನ್ನು ಬಹುಶಃ ಮೊದಲು ಗುರುತಿಸಿದ ಗೌರವವು ಮಾರ್ಗಕಾರನಿಗೇ ಸಲ್ಲಬೇಕೆಂದು ಕಾಣುತ್ತದೆ. 'ಕನ್ನಡದೊಳ್ ಸತತಗುಣಮಂ ಕೈಕೊಳ್ವಂತಾಗಿರೆ ಬಗೆದು ಪೇಳ್ಗೆ ಕವೀಶ್ವರ್' ಎದಿರುವುದರಿಂದ, ತತ್ಪೂರ್ವದಲ್ಲಿ 'ದೃಷ್ಟಾಂತ' ಕನ್ನಡ ಕಾವ್ಯ ಪ್ರೋಯಗದಲ್ಲಿ ಇರಲಿಲ್ಲವೆಂದೂ ಮಾರ್ಗಕಾರನು ಪ್ರಥಮತಃ ಕನ್ನಡ ಕವಿಗಳಿಗೆ ಮಾರ್ಗದರ್ಶನ ಮಾಡುತ್ತಿರುವನೆಂದೂ ಊಹಿಸಬಹುದಾಗಿದೆ. ('ದೃಷ್ಟಾಂತ'ವು ಕನ್ನಡ ದೇಸೀಕಾವ್ಯದಲ್ಲಿ ಪ್ರಚುರವಾಗಿದ್ದಿರಬಹುದೆದು ಮುಳಿಯ ತಿಮ್ಮಪ್ಪಯ್ಯನವರ ಊಹೆ). ನಾಗವರ್ಮನು ರುದ್ರಟನ್ನನುಸರಿಸಿ 'ದೃಷ್ಟಾಂತ'ವೊಂದನ್ನೇ ನಿರೂಪಿಸಿದ್ದಾನೆ. ಅಂತೂ 'ದೃಷ್ಟಾಂತ'ವು ಕನ್ನಡ ಕವಿಜನಪ್ರಿಯವಾಗಿ, 'ಮಾರ್ಗಕಾರನ ಆಶಯವು ನೆರವೇರಿದೆ.

೬೫. ಎರಡು ಮುದ್ರಿತ ಪ್ರತಿಗಳಲ್ಲಿಯೂ 'ಕಿರಿಯಿಸಿ' ಎಂದೇ ಸರಿಯಾದ ಪಾಠವಿದೆ. ನಮ್ಮ ಮುದ್ರಿತ ಪಾಠದಲ್ಲಿ 'ಕಿಡಿಯಿಸಿ' ಎಂದು ತಿದ್ದಿರುವುದು ತಪ್ಪು. 'ಕಿರಿ' ಎಂಬರ್ಥದಲ್ಲಿ 'ಕೆರೆ' ಎಂದು ಈಗಲೂ ಬಳಕೆ ಮಾತಿನಲ್ಲಿ ರೂಢಿಯಲ್ಲಿದೆ.

ಪದ್ಯ ೧೪೬ : "ಕಾಲದೊಳ್ ಅಲ್ಲದೆ ಪದೆದು ಉದಯಿಸಲ್ ಎಂದುಂ ಉದಾರ ತೇಜಂ ಅರ್ಕನುಂ ಅಲ್ಲಂ ; ಅದಱಿಂ ಸದುದಿತಗುಣಂ ನಟಯವಿದನಪ್ಪಂ ನೃಪಂ ಕಾಲಮಂ ನೆರಂ ತೋರ್ಕೆ."

'ಅಪಾರ ತೇಜಸ್ಸುಳ್ಳ ಸೂರ್ಯನೇ ಆದರೂ ಕೂಡ ಉದಯಿಸಬೇಕಾದ ಕಾಲದಲ್ಲಿ ಉದಯಿಸದೆ ಯಾವಾಗಲೋ ಸಂತೋಷದಿಂದ ಉದಯಿಸಿದರೂ ಕೂಡ ಅವನು ಸೂರ್ಯನೇ ಅಲ್ಲ ; ಆದ್ದರಿಂದ, ಗುಣೋದಯನೂ ನೀತಿಜ್ಞನೂ ಆದ ರಾಜನೂ ಕಾಲವನ್ನು ಚೆನ್ನಾಗಿ ತೋರಿಸಲಿ, ಎಂದರೆ ಸಕಾಲದಲ್ಲಿ ಕಾರ್ಯೋನ್ಮುಖನಾಗಲಿ.'

ಪದ್ಯ ೧೪೭ : 'ಪಡೆ ಅಱಿಯಲಾದೊಡೆ ಅರಿಯಂ ಅಂತಃಕಳಂಕ ನೃಪಮಂಡಲಮಂ ಕಿಡಿಸುಗುಂ ; ತಮಸ್ಸ್ವಭಾವಂ ರಾವು ಅಱಿದು ಶಶಿಮಂಡಲಮಂ ತಡೆಯದೆ ಕಿಡಿಸುವವೋಲ್."

'ಒಳಗೆ ದೋಷವುಳ್ಳ (ದೌರ್ಬಲ್ಯವುಳ್ಳ) ಶತ್ರುರಾಜರ ಸಮೂಹವನ್ನು ಸೈನ್ಯವು ಅರಿತುಕೊಳ್ಳುವುದಾದರೆ (ಎಂದರೆ, ಶತ್ರುವಿನ ಒಳಗಿನ ದೌರ್ಬಲ್ಯವು ಸೈನ್ಯಕ್ಕೆ ಗೊತ್ತಾದರೆ), ತಾಮಸಿಕ ಸ್ವಭಾವದ (ರಾಕ್ಷಸೀ ಸ್ವಭಾವದ) ರಾಹು (ಅಂತಃಕಳಂಕವುಳ್ಳ ಚಂದ್ರಮಂಡಲವನ್ನು ತಡಮಾಡದೆ ಕೆಡಿಸುವ ಹಾಗೆ, ಆ ಸೈನ್ಯವು ಶತ್ರುವನ್ನು ನಾಶಮಾಡುವುದು.'

ಪದ್ಯ ೧೪೮ : 'ಶತ್ರುವನ್ನು ಅಲ್ಪ ಸಾಮರ್ಥ್ಯವುಳ್ಳವನೆಂದು ತಿರಸ್ಕಾರ ಮಾಡಿ (ಉದಾಸೀನ ಮಾಡಿ), ಛಿದ್ರಛಿದ್ರವಾಗುವಂತೆ ಅವನನ್ನು ನಾಶಪಡಿಸಿದೆ ಹೋದರೆ, ಮೋಡಗಳ ಸಮೂಹವು ಸೂರ್ಯನನ್ನು ಮರೆಮಾಡುವಹಾಗೆ, ಆ 'ಕಿರಿಯಹಗೆ' ಕಾಲಾವಕಾಶವು ದೊರಕಿಸಿಕೊಡುವ ಬಲವನ್ನು ಹೊಂದಿ ('ಪೆತ್ತು ಕಾಲದ ಬಲಮಂ') ಅನುಕೂಲ ಸಂದರ್ಭವನ್ನು ಕೂಡಿಕೊಂಡು, ಸಮರ್ಥನಾಗಿ ಇರಿಯುತ್ತಾನೆ, ಎಂದರೆ ಆಕ್ರಮಣ ಮಾಡುತ್ತಾನೆ ('ನೆರೆದು ಅನುವಂ ನೆಱೆದು ಇಱೆಗುಂ).'

ಪಱಿಪಡು = ಕತ್ತರಿಸಿಹೋಗು, ಛಿದ್ರವಾಗು. ಪೆಱು = ಹೊಂದು, ಪಡೆ (ಉಪಲಬ್ಧೌ, ಪ್ರಸೂತೇಚ – ಶ.ಮ.ದ ; ಪೇತು = ಹೊಂದಿ). ನೆಱೆ = ಸಮರ್ಥನಾಗು. ನೆರೆ = ಕೂಡಿಕೊಳ್ಳು. ಅಂಬುದ = ಮೋಡ.

ಪದ್ಯ ೧೪೯ : "ಒಳಗಿರ್ದ ವೈರಿಗಳ್ ಅಧಿಕ ವಿಭವರ್ಕಳುಮಮಂ ಮೊಕ್ಕಳಂ ಪೆರ್ಚಲ್ ಈಯರ್ ; ಬಡಬಾನಳಂ ತಳರದೆ ಒಡನಿರ್ದು ಅಂಬುಧಿಯಂ ಪೆರ್ಚಲ್ ಈಯದಂತೆ."

"ಬಡಬಾಗ್ನಿ ಸಮುದ್ರದೊಳಗೆ ಒಡನಿದ್ದುಕೊಂಡು ಅಲ್ಲಿಂದ ಹೊರಡದೆ ಅದು ಹೆಚ್ಚಲು ಅವಕಾಶ ಕೊಡುವುದಿಲ್ಲ ; ಅದೇ ರೀತಿ, ರಾಜರು ಎಷ್ಟೇ ವೈಭವೋಪೇತರಾದರೂ ಒಳಶತ್ರುಗಳು (ಎಂದರೆ, ನಮ್ಮವರೇ ಆದರೂ ಶತ್ರುಪಕ್ಷದವರಾಗಿ ದ್ರೋಹ ಬಗೆಯುವ ಸ್ವಾರ್ಥಿಗಳು) ಆ ರಾಜರು ಅಭಿವೃದ್ಧಿ ಹೊಂದಲು ವಿಶೇಷವಾಗಿ ಅವಕಾಶ ಕೊಡುವುದಿಲ್ಲ.'

ಮೊಕ್ಕಳಂ = ಹೆಚ್ಚಾಗಿ, ಹಿರಿದಾಗಿ. ತಳರ್ = ಚಲಿಸು, ಹೊರಡು. ಅಂಬುಧಿ = ಸಮುದ್ರ.

ಪದ್ಯ ೧೫೦ : "ಪರಪಕ್ಷಮುಳ್ಳಿನಂ ತನಗೆ ಇರವು ಉಬ್ಬಸಂ, ಅದರಂ ಅದಱಿಂ ಏಗೆಯ್ದುಂ ಅಟಿವುದು; ಪರೆದ ಪುಡಿಯೆಲ್ಲಮಂ ನೀರ್ ನೆರೆದು ಕೆಸರ್ ಮಾಡದ ಅನ್ನೆಗಂ, ನೆಸುಗುಮೇ?"

'ಶತ್ರುಪಕ್ಷವು ಇರುವವರೆಗೂ ತಾನು ಇರುವುದು ಕ್ಲೇಶಕರ ; ಆದ್ದರಿಂದ, ಅದನ್ನು (ಶತ್ರುಪಕ್ಷವನ್ನು) ಏನಾದರೂ ಮಾಡಿ ನಾಶಪಡಿಸತಕ್ಕದ್ದು. ಹರಡಿಕೊಂಡಿರುವ ಹುಡಿಮಣ್ಣೆಲ್ಲವನ್ನೂ ನೀರು ಅದರೊಂದಿಗೆ ಕೂಡಿಕೊಂಡು ಅದನ್ನು ಕೆಸರನ್ನಾಗಿ ಮಾಡುವವರೆಗೂ ಅದು ಒಂದು ಕಡೆ ನೆಲಸಿರುವುದೇ?'

ಉಬ್ಬಸ = ಕ್ಲೇಶ, ಕಷ್ಟ, ಪ್ರಯಾಸ ಅಟಿ = ನಾಶಪಡಿಸು, ನಾಶವಾಗು; ಸಾಯಿ (ಸು) ಪರೆ = ಚೆದರು, ವ್ಯಾಪಿಸು, ಹರಡಿಕೊಳ್ಳು

ಪದ್ಯ ೧೫೧ : "ನೆಗಟ್ದಿನ ಇಚ್ಚೆಯಂ ಕುಱಿಗೊಂಡು ಅಱಿಯದೆ ತನ್ನ ಇಚ್ಚೆಯಿಂದೆ ಕಜ್ಜಂಬೇಟ್ವಂ ತಱಿಸಲಿಸಲ್ ಆಱಂ; ಆರ್ತನ ತೆಱನಱಿಯದೆ ಮರ್ದುವೇಟ್ವಿ ಬೆಜ್ಜನ ತೆಱದಿಂ".

'ಕಾರ್ಯಮಾಡುವವನ (ರಾಜನ) ಇಚ್ಛೆಯನ್ನು ಇಂಗಿತದಿಂದ ಅರಿತುಕೊಳ್ಳದೆ, (ಸಲಹೆಕೊಡುವವನು, ಮಂತ್ರಿ) ತನ್ನ ಇಷ್ಟಾನುಸಾರವಾಗಿ ಕಾರ್ಯವನ್ನು ಹೇಳುವವನು (ಕಾರ್ಯನಿರ್ವಾಹದಲ್ಲಿ ಸಲಹೆ ಹೇಳುವವನು). ಆತನಿಂದ ನಿರ್ಣಯಮಾಡಿಸಲಾರನು; (ರೋಗದಿಂದ) ನರಳುತ್ತಿರುವವನ ಸ್ಥಿತಿಯನ್ನು ಅರಿತುಕೊಳ್ಳದೆ ಔಷಧವನ್ನು ತಿಳಿಸುವ ವೈದ್ಯನ ಹಾಗೆ'.

ಕುಱಿಗೊಂಡು = (ಧಾ., ಕುಱಿಗೊಳ್) ಇಂಗಿತವರಿತು, ಉದ್ದೇಶವನ್ನು (ಗುರಿಯನ್ನು) ಗ್ರಹಿಸಿ ; ಉದ್ದೇಶಿಸಿ, ನೆಗಟ್ದಿನ = (ಧಾ., ನೆಗಟ್ = ಉದ್ಯೋಗೇ ಖ್ಯಾತೌ ನಕ್ರೇಚ – ಶ.ಮ.ದ.) ('ನೆಗಟ್ವಿನ' ಇರಬಹುದೆ?) ಉದ್ಯೋಗಿಯ, ಕಾರ್ಯಮಾಡುವವನ, ಆರ್ತ = ಸಂಕಷ್ಟದಲ್ಲಿರುವವನು,

ನರಳುತ್ತಿರುವವನು = (ಈ ಸಂದರ್ಭದಲ್ಲಿ ರೋಗಪೀಡಿತ).

ಪದ್ಯ ೧೫೨ : "ಪರಿಣಾಮಪಥ್ಯಮಂ ಸುಖಪರಿಕರಮಂ ನಿರತಿಶಯ ರಸಸಮೇತಮಂ ಈ ಮಾತಂ ಮೆಚ್ಚದನ್ನರಾರ್? ಆರೋಚಕಂ ಸೊಗಯಿಸುವ ಉಣಿಸಂ ಮೆಚ್ಚದಂತೆ."

"ನಾಲಕೆಯ ರುಚಿಯನ್ನು ಕಳೆದುಕೊಂಡಿರುವವನು (ಅರೋಚಕ" ಅಜೀರ್ಣ ರೋಗಿ) (ಷಡ್ರಸೋಪೇತವಾಗಿ) ಸೊಗಸಾಗಿರುವ ಊಟವನ್ನು ಮೆಚ್ಚಿಕೊಳ್ಳದ ರೀತಿಯಲ್ಲಿ – ಪರಿಣಾಮದಲ್ಲಿ ಹಿತಕರವಾದ ಸುಖಕರವಾದ ವಿಷಯದಿಂದ ಕೂಡಿದ ರಸವತ್ತಾದ ಈ ಮಾತನ್ನು (ಎಂದರೆ, ಈವರೆಗೆ ಹೇಳಿದ ಹಿತವಚನವನ್ನು) ಮೆಚ್ಚದೆ ಇರುವವರು ಯಾರು ? (ಮೆಚ್ಚದವರು ಯಾರೂ ಇಲ್ಲ ಎಂದು ಉತ್ತರ. ಮೆಚ್ಚದವರು ಇದ್ದರೆ, ಅವರು ಅರೋಚಿಕಿಗೆ ಸಮಾನ ಎಂದು ತಾತ್ಪರ್ಯ).[೬೬]

ಪದ್ಯ ೧೫೩ : ೧೪೩ನೆಯ ಪದ್ಯಕ್ಕೆ ಸಂಬಂಧಪಟ್ಟ ಟಿಪ್ಪಣಿಯನ್ನು ನೋಡಿ.

## ೨೧. ಸಹೋಕ್ತಿ

ಪದ್ಯ ೧೫೪ : "ಗುಣ ಜಾತಿ ಮೊದಲಾದವುಗಳಲ್ಲಿ ಸಂಬಂಧವಿದ್ದು, ಅವು ಒಂದನ್ನೊಂದು ಹೋಲುತ್ತ ಒಡನರುವುವು (ಅಥವಾ ಕ್ರಿಯೆಯಾದಲ್ಲಿ, ಒಡನೆ ನಡೆಯುವುವು) ಎಂದು ವರ್ಣಿಸಿದರೆ ಅದು ಸಹೋಕ್ತಿ" ('ಗುಣಜಾತ್ಯಾದಿ' ಎಂದಿರುವುದರಿಂದ 'ಜಾತ್ಯಲಂಕಾರ'ದಲ್ಲಿ ನಿರ್ದಿಷ್ಟವಾದ ಕ್ರಿಯಾ, ದ್ರವ್ಯಗಳೂ 'ಆದಿ' ಎಂಬ ಪದದಿಂದ ಸೂಚಿತವಾಗಿವೆ. 'ಸಹೋಕ್ತಿಃ

---

೬೬. 'ಜನಮಱಿಯದನ್ನೆಗಂ ಮನ್ನು ನಯಮಱಿದಱಿಪಲಾರ್ಪೊಡದು ಮಂತ್ರಿಗುಣ ಎಂದು ಮೊದಲು ಮಂತ್ರಿಗುಣವೇನೆಂಬುದನ್ನು ತಿಳಿಸಿ, ಅದಕ್ಕೆ ಅನುಸಾರವಾಗಿ ಮೇಲ್ಕಂಡ (೧೪೪–೧೫೨ ಪದ್ಯಗಳಲ್ಲಿ ನಿರೂಪಿಸಿರುವ) 'ಪರಿಣಾಮಪಥ್ಯ'ವಾದ ರಾಜನೀತಿಯ ಮಾತನ್ನು ನೃಪತುಂಗನಿಗೆ ಆತನ ಮಂತ್ರಿಯೋ ಹಿತಚಿಂತಕನೋ ಹೇಳಿದ್ದಿರಬಹುದಾದುದನ್ನೇ ಮರ್ಗಾಕಾರನು ಇಲ್ಲಿ ಕಾವ್ಯೋಚಿತ ರೀತಿಯಲ್ಲಿ ಪುನರುಲ್ಲೇಖಿಸಿರಬಹುದು. ನೃಪತುಂಗನ ವಿಚಾರವಾಗಿ ಕವಿಯೊಬ್ಬನು ಬರೆದಿರಬಹುದಾದ ಕಾವ್ಯವೊಂದರಿಂದ ಈ ಪದ್ಯಗಳನ್ನೂ 'ಕವಿರಾಜಮಾರ್ಗ'ದಲ್ಲಿ ಅಲ್ಲಲ್ಲಿ ಕಂಡುಬರುವ ಇಂಥ 'ರಾಜಕೀಯಧ್ವನಿ'ಯುಳ್ಳಇತರ ಪದ್ಯಗಳನ್ನೂ ಉದ್ಧರಿಸಿರಬಹುದೆಂದು ಮುಳಿಯ ತಿಮ್ಮಪ್ಪಯ್ಯನವರು ಊಹಿಸುತ್ತಾರೆ. (ಕ.ರಾ.ವಿವೇಕ – ಭಾಗ. ೧; ಪು. ೪೪). ಒಂದು ವೇಳೆ ಅಂಥದೊಂದು ನೃಪತುಂಗ ವಿಷಯಕ ಕಾವ್ಯವಿದ್ದು, ಅದರಿಂದಲೇ ಈ ಪದ್ಯಗಳನ್ನು ಉದ್ಧರಿಸಿದ್ದುದಾದರೆ, ಆ ಕಾವ್ಯ

ಸಹಭಾವಸ್ಯ ಕಥನಂ ಗುಣಕರ್ಮಣಾಂ' ಎಂಬ ದಂಡಿಯ ಲಕ್ಷಣದಲ್ಲಿ 'ಜಾತಿ'ಯ ಎಡೆಯಲ್ಲಿ 'ಕರ್ಮ' ಅಥವಾ 'ಕ್ರಿಯೆ' ಉಕ್ತವಾಗಿದೆ) 'ಸಹಭಾವ' ಎಂದರೆ 'ಒಡಗೂಡಿ ಇರುವಿಕೆ', ಅಥವಾ 'ಒಡನೆ ಸಂಭವಿಸುವುದು.'[೬೭]

ಪದ್ಯ ೧೫೫ : "ಪರಮೋದಯನ ಗುಣಸಂತತಿಯೊಡನೆ ಆಶಾಧೀನವಾದ (ಎಂದರೆ, ದಿಗಂತವ್ಯಾಪ್ತವಾದ) ಯಶೋವಿತಾನವು (ಕೀರ್ತಿಯ ಮೇಲ್ಕಟ್ಟು) ಅತಿಧವಳಮಾಯ್ತು ; ಹಾಗೂ, ಆತನ ಘನತೆಯೊಂದಿಗೆ ಮಹಾ ವೈಭವವೂ ಎಲ್ಲ ಕಾಲಕ್ಕೂ ಹೆಚ್ಚಿತು." ಇಲ್ಲಿ ಗುಣವೂ, ಕೀರ್ತಿಯೂ ಒಡಗೂಡಿ ಧವಳವಾದುವು ; 'ಧಾವಳ್ಯ'ದಲ್ಲಿ ಎರಡೂ 'ದೊರೆ'ಯಾಗಿವೆ ; ಮೊದಲೇ ಧವಳವಾಗಿದ್ದ ಅವು ಕೂಡಿಯೇ 'ಅತಿಧವಳ'ವಾದುವು. ಘನತೆ ವೈಭವಗಳೆರಡೂ ಏಕಕಾಲದಲ್ಲಿ ಹೆಚ್ಚಿದುವು. 'ಅತಿಶಯ'ವಾಗುವುದರಲ್ಲಿ 'ಹೆಚ್ಚುವುದರಲ್ಲಿ, ಎರಡೂ ಒಂದಕ್ಕೊಂದು 'ದೊರೆ' ; ಹಾಗೂ, ಎರಡರಲ್ಲಿ 'ಸಹ' ಭಾವವಿದೆ. 'ಸಹ' (= ಒಡನೆ) ಎಂಬ ಮಾತೂ ಇದೆ.

('ಅತಿಧವಳ' ಎಂಬಲ್ಲಿ ನೃಪತುಂಗನ 'ಅತಿಶಯ ಧವಳ' ಎಂಬ ಬಿರುದೇ ಸೂಚಿತವಾಗಿರುವಂತಿದೆ ; 'ಪರಮೋದಯ' ಎಂಬುದೂ ಅವನ ಬಿರುದೇ ಹೀಗೆ. ಈ ಪದ್ಯದಲ್ಲಿ ನೃಪತುಂಗನ ಗುಣವರ್ಣನೆಯೇ ಭಾಸವಾಗುತ್ತದೆ. ದಂಡಿಯ ಲಕ್ಷ್ಯಗಳನ್ನು ನುವಾದಿಸದೆ, ಸ್ವಂತ ಲಕ್ಷ್ಯಪದ್ಯವನ್ನು ಕೊಟ್ಟಿರುವುದು ಈ ಊಹೆಗೆ ಬೆಂಬಲವಾಗಿದೆ.)

---

ಕವಿರಾಜಮಾರ್ಗಕಾರನದೇ ಆಗಿರಬಾರದೇಕೆ ? ಏನೆಂದರೂ, ಆಧಾರ ದೊರಕುವವರೆಗೆ, ಇವೆಲ್ಲಾ ಉಹಾಪ್ರಪಂಚಕ್ಕೇ ಸೇರಿದುವಾಗುತ್ತವೆ.

೬೭. ಭಾಮಹನ ಲಕ್ಷಣ ವಿವರಣೆ ಹೆಚ್ಚು ಖಚಿತವಾಗಿದೆ. 'ತುಲ್ಯ ಕಾಲೇ ಕ್ರಿಯೇ ಯತ್ರ ವಸ್ತುದ್ವಯ ಸಮಾಶ್ರಯೇ । ಪದೇನೈಕೇನ ಕಥ್ಯೇತೇ ಸಹೋಕ್ತಿಃ ಸಾ ಮತಾ ಯಥಾ' (ಕಾವ್ಯಾಲಂಕಾರ : III–೩೯). "ಎರಡು ವಸ್ತುಗಳಲ್ಲಿ ಏಕಕಾಲದಲ್ಲಿ ನಡೆಯುವ ಕ್ರಿಯೆಯನ್ನು ಒಂದೇ ಪದದಿಂದ ತಿಳಿಸುವುದು 'ಸಹೋಕ್ತಿ'," 'ಸಹ' (= ಒಂದಿಗೆ, ಒಡನೆ ಒಟ್ಟಿಗೆ) ಎಂಬುದೇ ಆ ಒಂದು ಮಾತು. ದಂಡಿ ಭಾಮಹರಿಬ್ಬರ ಲಕ್ಷ್ಯಗಳಲ್ಲಿಯೂ 'ಸಹ' ಎಂಬ ಮಾತು ತಪ್ಪದೆ ಬಂದಿದೆ. ಮಾರ್ಗಕಾರನು ಇದನ್ನು ಹೇಳದಿದ್ದರೂ, ಲಕ್ಷ್ಯದಲ್ಲಿ 'ಒಡನೆ' ಎಂಬ ಮಾತು ಪ್ರಯೋಗವಾಗಿದೆ. ಮಾರ್ಗಕಾನ 'ದೊರೆಯೆಣಿಸುವುದು' ಎಂಬ ಮಾತು ಗಮನಾರ್ಹ. ಎಂದರೆ, 'ಹೋಲಿಕೆ' (ಔಪಮ್ಯ) ಇರಬೇಕು. (ಈ ಹೋಲಿಕೆ ಗುಣಕ್ರಿಯಾದಿಗಳಲ್ಲಿಯೆ ಗಮ್ಯವಾಗಿರುತ್ತದೆ)

## ೨೨. ಸಂಕೀರ್ಣಾಲಂಕಾರ

ಪದ್ಯ ೧೫೬ : "ಉಕ್ತಾಳಂಕಾರ ಸಮೂಹ ಸಂಕರಕ್ರಮಂ ಸಂಕೀರ್ಣಂ ಅಕ್ಕುಂ"

ಸಂಕರ ಎಂದರೆ ಬೆರಕೆ, ಮಿಶ್ರಣ. (ಈ ಗ್ರಂಥದಲ್ಲಿ) ಉಕ್ತವಾದ ಅಲಂಕಾರಗಳನ್ನು ಬೆರಸಿ ಹೇಳುವ ಕ್ರಮವೇ ಸಂಕೀರ್ಣಾಲಂಕಾರ. ದಂಡಿ ಇದನ್ನು 'ಸಂಸೃಷ್ಟಿ' ಎಂದು ಕರೆದಿದ್ದಾನೆ.

ನಾನಲಂಕಾರಸಂಸೃಷ್ಟಿಃ ಸಂಸ್ಕೃಷ್ಟಿಸ್ತ ನಿಗದ್ಯತೇ ॥
ಅಂಗಾಂಗಿ ಭಾವಾವಸ್ಥಾನಂ ಸರ್ವೇಷಾಂ ಸಮಕಕ್ಷತಾ ।
ಇತ್ಯಲಂಕಾರ ಸಂಸೃಷ್ಟೇರ್ಲಕ್ಷಣೀಯಾ ದ್ವಯೀ ಗತಿಃ ॥ –II, ೩೫೯–೩೬೦

('ನಾನಾಲಂಕಾರಗಳನ್ನು ಸಂಸೃಷ್ಟಿ ಮಾಡುವುದೇ (ಎಂದರೆ ಬೆರಕೆ ಮಾಡುವುದೇ) 'ಸಂಸೃಷ್ಟಿ'. ಹೀಗೆ ಸಂಸೃಷ್ಟಿಯಾಗುವ ಅಲಂಕಾರಗಳಲ್ಲಿ ಅಂಗಾಂಗಿಭಾವವುಳ್ಳವು ಮತ್ತು ಸಮಪ್ರಾಧಾನ್ಯವುಳ್ಳವು ಎಂದು ಎರಡು ಬಗೆಗಳಿರುವುದನ್ನು ಲಕ್ಷಿಸಬೇಕು.' (ಮಾರ್ಗಕಾರನು ಈ ಎರಡು ಬಗೆಗಳನ್ನು ಹೇಳದಿದ್ದರೂ ಅವನು ಕೊಟ್ಟಿರುವ ಲಕ್ಷ್ಯಪದ್ಯದಲ್ಲಿ ಈ ಲಕ್ಷಣ ಗಮ್ಯವಾಗಿದೆ.) ಸಂಸೃಷ್ಟಿಯಾದ ಅಲಂಕಾರಗಳಲ್ಲಿ ಒಂದು ಪ್ರಧಾನವಾದ ಅಲಂಕಾರವು ಇನ್ನೊಂದನ್ನು ಒಳಗೊಂಡಿದ್ದರೆ, ಪ್ರಧಾನವಾದದ್ದು 'ಅಂಗಿ' (ಅಂಗವನ್ನುಳ್ಳದ್ದು) ; ಅಂತರ್ಗತವಾಗಿರುವುದು 'ಅಂಗ'. 'ಸಮಕಕ್ಷ್ಯ'ದಲ್ಲಿ ಎರಡೂ ಪ್ರಧಾನವಾಗಿರುತ್ತದೆ.)[೬೮]

---

೬೮. ಅನೇಕ ಅಲಂಕಾರಗಳನ್ನು ಸಂಮಿಶ್ರ ಮಾಡಿದರೆ ಅದು 'ಒಂದು' ಅಲಂಕಾರ ಹೇಗಾದೀತು ಎಂಬ ಸಂದೇಹ ಉಂಟಾಗುವುದು ಸಹಜ. ಭಾಮಹನ ಲಕ್ಷ ನಿರೂಪಣೆ ಮನೋಜ್ಞವಾಗಿದ್ದು, ಸಂದೇಹದ ಪ್ರಶ್ನೆಗೆ ಸಮರ್ಪಕ ಉತ್ತರವನ್ನು ಕೊಡುವಂತಿದೆ:

ವರಾ ವಿಭೂಷಣಾ ಸಂಸೃಷ್ಟಿರ್ಬಹ್ವಲಂಕಾರಯೋಗತಃ ।
ರಚಿತಾ ರತ್ನಮಾಲೇವ ಸಾ ಚೈವಮುದಿತಾ ಯಥಾ ॥ – ಕಾವ್ಯಾಲಂಕಾರ, III–೪೯

(ಬಹು ಅಲಂಕಾರಗಳ ಸಂಯೋಗದಿಂದ ಉಂಟಾಗುವ 'ಸಂಸೃಷ್ಟಿ' ರತ್ನಮಾಲೆಯಂತೆ ಶ್ರೇಷ್ಠವಾದ ಅಲಂಕಾರ).

ಒಂದೊಂದು ಅಲಂಕಾರವೂ ಬಿಡಿಬಿಡಿಯಾಗಿ ರತ್ನದಂತೆ ಶೋಭಿಸಿದರೆ, ಅವುಗಳನ್ನು ಒಂದು ಪದ್ಯದಲ್ಲಿ ಸೇರಿಸಿದರೆ, ರತ್ನಮಾಲೆಯ ಹಾಗೆ ಶೋಭಿಸುತ್ತದೆ. ಅಥವಾ, ಬೇರೆ ಬೇರೆ ಬಣ್ಣಗಳ ಬೇರೆ ಬೇರೆ ಜಾತಿಯ ಹೂಳಗ ಗೊಂಚಲು ಎನ್ನಬಹುದು. ಇಂಥ ಒಂದು 'ಅಲಂಕಾರಮಾಲೆ'ಯನು ಅಥವಾ 'ಗುಚ್ಛ'ವನ್ನು ರಚಿಸುವುದಕ್ಕೂ ಜಾಣ್ಮೆ ಬೇಕು. ಆದ್ದರಿಂದ, ಇದು ಅಲಂಕಾರವಲ್ಲ ಎಂಬ ಸಂದೇಹ ಬೇಕಿಲ್ಲ. ಇದನ್ನರಿತೇ 'ಶಂಕಾವಿರಹಿ ಚಿತ್ತರ್ ಕವಿವೃಷಭರ್ಕಳ್ ಅದಂ ಕಾವ್ಯದೊಳ್ ಇಂತು ಪೇಟ್ಗೆ' ಎಂದು ಮಾರ್ಗಕಾರನು ಹೆಚ್ಚಿನ ವಿವರಣೆಯನ್ನು ಕೊಟ್ಟಿರುವ ಹಾಗೆ ಕಾಣುತ್ತದೆ.

ಪದ್ಯ ೧೫೭: ಇದು ಸ್ವಂತ ಲಕ್ಷ್ಯಪದ್ಯ. ಆದ್ದರಿಂದ ಈ ಪದ್ಯದಲ್ಲಿಯೂ ಮಾರ್ಗಕಾರನು ನೃಪತುಂಗನನ್ನೇ ಕೀರ್ತಿಸಿರುವಂತೆ ಕಾಣುತ್ತದೆ.

ಈ ಪದ್ಯದಲ್ಲಿ ವರ್ಣಿತನಾದ 'ನೃಪವೃಷಭ' ನು – (i) 'ಅಪರಾಗಂ ಮುನಿಪತಿವೋಲ್'; ಮುನಿಪತಿಯ ಹಾಗೆ 'ಅಪರಾಗನು'. ಇದು ಉಪಮಾಲಂಕಾರ; 'ಅಪರಾಗನು' ಎಂಬ ಶ್ಲೇಷೆಯುನ್ನು ಒಳಗೊಂಡದ್ದರಿಂದ, ಇದು 'ಅಂಗಿ'; ಶ್ಲೇಷೆ ಉಪಮೆಯ 'ಅಂಗ'ವಾಗಿ ಬಂದಿದೆ. (ಅಪರಾಗ = ೧. (ಮುನಿಪತಿಯ ಹಾಗೆ) ವೀತರಾಗ, ರಾಗದ್ವೇಷಾದಿಗಳಿಲ್ಲದವನು ; ೨. (ಅ + ಪರಾಗಂ) ಸೂರ್ಯಚಂದ್ರರಂತೆ) ಗ್ರಹಣ ಹಿಡಿಯುದವನು). (ii) 'ಅಪಗತಗುಣನಾಗಿಯುಂ ನಿಜಾಯತದೋಷಂ': ಗುಣಯುತನಾಗಿಯೂ ತನ್ನಲ್ಲಿ ಹೆಚ್ಚಾದ ದೋಷವುಳ್ಳವನು. (ದಂಡಿಯಾಗಲಿ ಮಾರ್ಗಕಾರನಾಗಲಿ 'ವಿರೋಧಾಭ್ಯಾಸ'ವನ್ನು ಉಲ್ಲೇಖಿಸದಿದ್ದರೂ ಆಧುನಿಕರು ಹೇಳುವ ಆ ಅಲಂಕಾರವನ್ನಿಲ್ಲಿ ಗುರುತಿಸಬಹುದು. 'ನಿಜಾಯತದೋಷ' ಎಂಬ ಪದದಲ್ಲಿನ ಶ್ಲೇಷಾರ್ಥದ ಮೂಲಕ ವಿರೋಧದ ತೋರಿಕೆಯನ್ನು ಪರಿಹರಿಸಬೇಕು. 'ನಿಜಾಯತ ದೋಷ' = ೧. ತನ್ನಲ್ಲಿನ ವಿಸ್ತಾರವಾದ ದೋಷ; ೨. ತನ್ನ 'ಆಯತ'ದ ಎಂದರೆ ದೇಹದ ಔನ್ನತ್ಯವನ್ನೆ ದೋಷವಾಗಿ ಉಳ್ಳವನು(?)]. (iii) 'ವಿಪುಳ ಯಶೋಧನ ಲೋಭಂ': ಹೆಚ್ಚಾದ ಕೀರ್ತಿಯೆಂಬ ಧನದ ವಿಚಾರದಲ್ಲಿ ಸಂಗ್ರಹಬುದ್ಧಿಯುಳ್ಳವನು. (ಇದು ರೂಪಕಾಲಂಕಾರ). (iv) 'ಅರಾತಿ ನಿಕರ ತರು ದವ ದಹನಂ': 'ಶತ್ರುಸಮೂಹವೆಂಬ ಮರಗಳ ಕಾಡನ್ನು ಸುಡುವವನು'.

ಈ ಲಕ್ಷ್ಯಪದ್ಯದಲ್ಲಿ ಉಪಮೆ, ಶ್ಲೇಷೆ, ರೂಪಕ – ಇವು ಸಂಕರವಾಗಿರುವುದನ್ನು ಕಾಣಬಹುದು.

## ೨೩. ಪರಿವೃತ್ತಿ

ಪದ್ಯ ೧೫೮ : "ನಿರುಪಮಂ ಅರ್ಥಸ್ವರೂಪ ವಿನಿಮಯ ವಚನಂ ಪರಿವೃತ್ತಿಯೆಂಬುದಕ್ಕುಂ". (ಅರ್ಥಾನಾಂ ಯೋ ವಿನಿಮಯಃ ಪರಿವೃತ್ತಿಸ್ತು ಸಾ ಯಥಾ' – ದಂಡಿ).

"ಅರ್ಥಗಳು ವಿನಿಮಯವಾಗುವಂತೆ (ಎಂದರೆ ಒಂದನ್ನು ಕೊಟ್ಟು ಮತ್ತೊಂದನ್ನು ಪ್ರತಿಯಾಗಿ ಪಡೆದಂತೆ) ವರ್ಣಿಸುವುದು ಪರಿವೃತ್ತಿ".

ಪದ್ಯ ೧೫೯ : "ಪರಿವೃತ್ತಿ'ಗೆ ಉದಾಹರಣೆ. ಪದ್ಯ ಅನ್ವಯ : "ದುರಾಹವ

ರಂಗಾಂತರದೊಳ್ ಅ್ಭೀತಂ (= ಹೋರಾಡಲು ಕಷ್ಟಸಾಧ್ಯವಾದ ಯುದ್ಧರಂಗದ ನಡುವೆ ಭೀತಿಯಿಲ್ಲದವನಾಗಿ), ನಿಜಾರಿ ಸಮಿತಿಗಳಿಂದಂ (= ತನ್ನ ಶತ್ರುಸಮೂಹದಿಂದ) ನೆರೆದ ಜಂಯಂಗೊಂಡು (= ಕೂಡಿಬಂದ ಗೆಲವನ್ನು ಪಡೆದು), ಆಗಡೆ (= ಆಕೂಡಲೆ), ಸುರಾಂಗನಾ ಸುರತ ವಿಷಯ ಸುಖಮಂ (= ದೇವತಾ ಸ್ತ್ರೀಯರೊಂದಿಗೆ ಸಂಭೋಗವನ್ನು), ಅರಿಗೆ ಕೊಟ್ಟಂ". 'ಪರಾಕ್ರಮಿಯಾದ ರಾಜನೊಬ್ಬನು ಶತ್ರುಸಂಹಾರ ಮಾಡಿ ಜಯಗಳಿಸಿದನು' ಎಂಬುದಿಷ್ಟೆ ತಾತ್ಪರ್ಯ. ಅವರಿಂದ ಪಡೆದ ಜಯಕ್ಕೆ ಪ್ರತಿಯಾಗಿ ಅವರಿಗೆ ಸ್ವರ್ಗಸುಖವನ್ನು ಕೊಟ್ಟನು ಎಂದು 'ಅರ್ಥವಿನಿಮಯ' ಮಾಡಿರುವುದರಿಂದ ಈ 'ವಚನ' ಅಲಂಕಾರಿಕವಾಗಿ ಪರಿಣಮಿಸಿದೆ.

('ಉದಾರ'ಗುಣಕ್ಕೆ ಕೊಟ್ಟಿರುವ ಲಕ್ಷ್ಯವನ್ನು (ಪ.II, ೮೦) ಇದರೊಂದಿಗೆ ಹೋಲಿಸಿ.)

### ೨೪. ವ್ಯಾಜಸ್ತುತಿ

ಪದ್ಯ ೧೬೦ : "ಗುಣಸಮೂಹವನ್ನು ದೋಷವೆಂದು ತೋರುವ ಹಾಗೆ ಅತಿಶಯವಾಗಿ ಹೇಳುವುದು ವ್ಯಾಜಸ್ತುತಿ ; ಇದು ಶಬ್ದಾರ್ಥಗಳಿಂದ ನಿಶ್ಚಿತಗೊಂಡಿದೆ."

("'ನಿಶ್ಚಿತ ಶಬ್ದಾರ್ಥಂ' : ಶಬ್ದ ಮತ್ತು ಅರ್ಥ – ಈ ಎರಡನ್ನೂ ಅವಲಂಬಿಸಿರತಕ್ಕದ್ದು ಈ ಅಲಂಕಾರ. ಕೇವಲ ಶಾಬ್ದಿಕವಾಗಿ ಗಮನಿಸಿದರೆ ದೋಷವರ್ಣನೆಯಾಗಿಯೂ, ಆ ಶಬ್ದದ ಶ್ಲೇಷಾರ್ಥವನ್ನು ಗಮನಿಸಿದರೆ ಗುಣವರ್ಣನೆಯಾಗಿಯೂ ಕಾಣುವುದು – ಎಂದು ಇದರ ವಿವರಣೆ. ಇದು, – 'ಇತಿ ಶ್ಲೇಷಾನುವಿದ್ಧಾನಾಮನ್ಯೇಷಾಂ ಚೋಪಲಕ್ಷ್ಯತಾಂ । ವ್ಯಾಜಸ್ತುತಿಪ್ರಕಾರಾಣಾಮಪರ್ಯಂತಃ ಪ್ರವಿಸ್ತರಃ ॥' – ಎಂಬ 'ಕಾವ್ಯಾದರ್ಶ'ದ ಶ್ಲೋಕದಿಂದ (II, ೩೪೭) ಸ್ಪಷ್ಟವಾಗುತ್ತದೆ.)

ಪದ್ಯ ೧೬೧ : ಇದು, 'ಉದಾರ ಚರಿತ'ನಾದ ನಾಯಕನು (ರಾಜನು) ತನ್ನ ವಕ್ಷಸ್ಥಲದಲ್ಲಿ ಲಕ್ಷ್ಮಿಯನ್ನು ಧರಿಸಿರುವ ಸಾಕ್ಷಾತ್ ನಾರಾಯಣ – ಎಂದು ಸ್ತುತಿಸುವ ವರ್ಣನೆ, 'ಕವಿರಾಜಮಾರ್ಗ'ದ ಪ್ರಾರಂಭದ ಎರಡು ಪದ್ಯಗಳಲ್ಲಿ ನೃಪತುಂಗನಿಗೂ ವಿಷ್ಣುವಿಗೂ ಅಭೇದವನ್ನು ಕಲ್ಪಿಸಿ ಮಾಡಿರುವ ವರ್ಣನೆಯನ್ನೆ ಈ ಪದ್ಯವು ನೆನಪಿಗೆ ತರುತ್ತದೆ. ಅಲ್ಲದೆ, ಇದಜು ದಂಡಿಯ ಲಕ್ಷ್ಯದಿಂದ ಬಹುಮಟ್ಟಿಗೆ ಭಿನ್ನವಾಗಿದೆ. ಆದ್ದರಿಂದ,

ಈ ಪದ್ಯದಲ್ಲಿ 'ನೃಪತುಂಗ' ನನ್ನೇ ಪ್ರಶಂಸೆಮಾಡಿದೆಯೆಂಬುದು ಸ್ಪಷ್ಟ. ಪದ್ಯದ ಅರ್ಥ :

''ಜಲರಾಶಿಯಲ್ಲಿ ಹುಟ್ಟಿದವಳಾದ, ಪೂರ್ಣವಾಗಿ 'ಕೃಷ್ಣಗುಣ'ದಲ್ಲಿಯೇ ಅನುರಾಗವುಳ್ಳವಳಾದ (ಕೃಷ್ಣಗುಣ : ೧. ಕಪ್ಪಾದ ಗುಣ ಎಂದರೆ ಕಳಂಕಪ್ರಾಯವಾದದ್ದು, ದೋಷ ; ೨. ಕೃಷ್ಣನ ಗುಣ, ಎಂದರೆ ವಿಷ್ಣುವಿನ ಗುಣ), ಲಕ್ಷ್ಮೀಲಲನೆಯನ್ನು (ನೀನು) 'ಮಿಗೆ' (ವಿಶೇಷವಾಗಿ) ವಕ್ಷಸ್ಥಲದಲ್ಲಿ 'ಆಂತುಂ' (ಧರಿಸಿದಮೇಲೆಯೂ), ಅದು ಹೇಗೆ ಉದಾರವಾದ ಚರಿತವುಳ್ಳವನಾಗುತ್ತೀಯೆ ?'

ಇಲ್ಲಿ 'ಲಕ್ಷ್ಮಿಯನ್ನು ವಕ್ಷಸ್ಥಲದಲ್ಲಿ ಧರಿಸಿರುವೆ' ಎಂದುದರಿಂದ 'ನಾರಾಯಣ'ನಿಗೆ ಸಮ ಎಂದು ಸ್ತೋತ್ರ ಮಾಡಿದ ಹಾಗಾಯಿತು. (ನೃಪತುಂಗನಿಗೆ 'ವೀರನಾರಾಯಣಿ' ಎಂಬ ಬಿರುದಿದ್ದಿತಷ್ಟೆ. 'ಹೇಗೆ ಉದಾರಚರಿನಾಗುವೆ ?' ಎಂಬ ಆಕ್ಷೇಪದಲ್ಲಿಯೂ ನೃಪತುಂಗನ 'ಉದಾರ' ಎಂಬ ಬಿರುದಿನ ಉಲ್ಲೇಖವಿದೆ). ಲಕ್ಷ್ಮಿಯನ್ನು ದೋಷವುಳ್ಳವಳೆಂದು ಹೇಳಬೇಕು. ಲಕ್ಷ್ಮಿ ಸಮುದ್ರದಲ್ಲಿ ಹುಟ್ಟಿದವಳೆಂದುದರಿಂದ ಅವಳ ಕುಲ ಉತ್ತಮವಲ್ಲವೆಂದೂ, ಅವಳು 'ಕೃಷ್ಣಗುಣಾನುರಕ್ತೆ' ಎಂದುದರಿಂದ ದುರ್ಗುಣದಲ್ಲಿಯೇ ಆಸಕ್ತಳೆಂದೂ ಹೇಳಿ ಅವಳನ್ನು ದೋಷಪೂರ್ಣಳೆಂದು ಶ್ಲೇಷೆಯ ಮೂಲಕ ತಿಳಿಸಿದೆ. ಹೀಗೆ, ಶ್ಲೇಷೆಯ ಬಲದಿಂದ ದೋಷವನ್ನು ಹೇಳುವ 'ವ್ಯಾಜ' (ನೆವ)ದಲ್ಲಿ, ಎಂದರೆ ದೋಷದ ಮರೆಯಲ್ಲಿ, ಸ್ತುತಿಯನ್ನೇ ಮಾಡಿರುವುದರಿಂದ ಇದು 'ವ್ಯಾಜ' (ನೆವ)ದಲ್ಲಿ, ಎಂದರೆ ದೋಷದ ಮರೆಯಲ್ಲಿ, ಸ್ತುತಿಯನ್ನೇ ಮಾಡಿರುವುದರಿಂದ ಇದು 'ವ್ಯಾಜಸ್ತುತಿ'. (ಲಕ್ಷ್ಮಿ ಕ್ಷೀರಸಾಗರದಲ್ಲಿ ಹುಟ್ಟಿದವಳು. ಇಲ್ಲಿ 'ಜಲರಾಶಿ'ಯಲ್ಲಿ ಹುಟ್ಟಿದವಳೆಂದು ಕವಿ ಕಲ್ಪನೆ).

ಪದ್ಯ ೧೬೨ : ಈ ಪದ್ಯದಲ್ಲಿಯೂ ಶ್ಲೇಷೆಯ ಬೆಂಬಲದಿಂದಲೇ ದೋಷವರ್ಣನೆಯ ವ್ಯಾಜದಲ್ಲಿ ಸ್ತುತಿಸಿರುವುದನ್ನು ಗಮನಿಸಬೇಕು : "ನಿನ್ನ ಕಳತ್ರಂ (= ಹೆಂಡತಿ) ಈ ಧರಾವಧು (= ಭೂದೇವಿ) ಸತತಂ ಭುಜಂಗ ಭೋಗಾಶ್ರಿತೆ (= ೧. ವಿಟಪುರುಷನಲ್ಲಿ ಭೋಗಿಸುವವಳು ; ೨. ಆದಿಶೇಷನ ಹೆಡೆಯ ಆಶ್ರಯವನ್ನು ಪಡೆದಿರುವವಳು ) ; ಮತ್ತೆಂತು ಅತಿಶಯದೆ ಉದಾರ ಚರಿತಕ್ರಮದಿಂ (= ಉದಾರಚರಿತನಾದ ನೀನು ಸ್ವಾಧೀನಪಡಿಸಿಕೊಂಡ ಮಾತ್ರದಿಂದ) ಮಹಾಪುರುಷ ವ್ರತಮಂ ತಾಳ್ದುವಳ್

(= ಮಹಾಪುರುಷನನ್ನು ಸೇವಿಸುವ ಪವಿತ್ರ ಕರ್ತವ್ಯವನ್ನು ಧರಿಸುವಳು)?"

[ಈ ಲಕ್ಷ್ಯಪದ್ಯ ಬಹುಮಟ್ಟಿಗೆ ದಂಡಿಯ ಲಕ್ಷ್ಯದ ಅನುವಾದ. 'ಭುಜಂಗ ಭೋಗ ಸಂಸಕ್ತಾ ಕಲತ್ರಂ' ಎಂಬ ಪದಪುಂಜವನ್ನು ಇದ್ದಹಾಗೆಯೇ ಸ್ವೀಕರಿಸಿದ್ದಾನೆ. ಆದರೂ, 'ಉದಾರಚರಿತಕ್ರಮ' ಎಂಬ ಉದ್ದೇಶಪೂರ್ವಕವಾದ ಪದಪ್ರಯೋಗದಿಂದ, ಭೂದೇವಿಯ ಸ್ತೋತ್ರದ ಮರೆಯಲ್ಲಿ ನೃಪತುಂಗನನ್ನು ಕವಿ ನಿರ್ದೇಶಿಸಿರುವುದು ಸ್ಪಷ್ಟ. ಮೇಲಿನ ಪದ್ಯದಲ್ಲಿ ಶ್ರೀದೇವಿಯ ವರ್ಣನೆಯೂ ಈ ಪದ್ಯದಲ್ಲಿ ಭೂದೇವಿಯ ವರ್ಣನೆಯೂ ಬಂದು, ಅವರಿಬ್ಬರ ಪತಿಯಾದ ವಿಷ್ಣುವಿನ ಸ್ತೋತ್ರವೂ ತನ್ಮೂಲಕ ನೃಪತುಂಗನ ಪ್ರಶಂಸೆಯೂ ಈ ಎರಡು ಲಕ್ಷ್ಯಪದ್ಯಗಳಲ್ಲಿ ಗಮ್ಯವಾಗಿದೆ.]

## ೨೫. ಹೇತೂಕ್ತಿ

ಪದ್ಯ ೧೬೩ : "ಕಾರಣವಾಗಿರುವ ಅಲಂಕಾರವು ಹೇತೂಕ್ತಿ". [ಯಾವುದಾದರೂ ಒಂದು ಕಾರ್ಯಕ್ಕೆ, ಪರಿಣಾಮಕ್ಕೆ ಅಥವಾ ಫಲಕ್ಕೆ ಕಾವ್ಯೋಚಿತವಾಗಿ ಕಾರಣವನ್ನು ಕಲ್ಪಿಸಿ ಹೇಳುವುದು. ದಂಡಿ 'ಕಾವ್ಯಾದರ್ಶ'ದಲ್ಲಿ ಹೇತು, ಸೂಕ್ಷ್ಮ, ಲೇಶ ಎಂಬೀ ಅಲಂಕಾರಗಳು 'ವಾಚಾಮುತ್ತಮಭೂಷಣಂ' ಎಂದು ಹೇಳಿ, ಹೇತ್ವಲಂಕಾರದಲ್ಲಿ 'ಕಾರಕ' ಮತ್ತು 'ಜ್ಞಾಪಕ'ಗಳೆಂದು ಎರಡು ವಿಧಗಳೆಂದೂ ಅವೆರಡರಲ್ಲಿ ಮತ್ತೆ ಅನೇಕ ವಿಧಗಳುಟೆಂದೂ ಹೇಳಿ, ಕೆಲವು ಪ್ರಕಾರಗಳಿಗೆ ಲಕ್ಷ್ಯಗಳನ್ನು ಕೊಟ್ಟಿರುತ್ತಾನೆ. (II, ೨೩೫–೨೫೯). ಮಾರ್ಗಕಾರನಾದರೋ, 'ಅದು ತಾಂ ನಾನಾಕಾರಂ' ಎಂದಿಷ್ಟೇ ಹೇಳಿ, 'ಜ್ಞಾಪಕ ಸದಳಂಕಾರ'ವೊಂದನ್ನು ಮಾತ್ರ ಹೆಸರಿಸಿ 'ಅದಱಾ ಸುಮಾರ್ಗ ಪ್ರಯೋಗಂ ಈ ತೆಱಂ' ಎಂದು ಆ 'ಜ್ಞಾಪಕಹೇತು'ವಿಗೆ ಲಕ್ಷ್ಯಗಳನ್ನು ಕೊಟ್ಟಿದ್ದಾನೆ].

ಪದ್ಯ ೧೬೪ : "ಚಂದ್ರಕಿರಣಗಳಿಂದಾಗಲಿ, ಚಂದನ ರಸದಿಂದಗಾಲಿ, ಮಾಗಿಯ (ಚಳಿಗಾಲದ) ನೀರಿನಿಂದಾಗಲಿ ನನ್ನ ಪರಿತಾಪಾನಳವು (= ಬೇಗೆಯ ಬೆಂಕಿ) ನಂದದು (= ಆರುವುದಿಲ್ಲ) ; ಅದರಿಂದಾಗಿ, ನಿನ್ನ ಮೆಯ್ಯ ಕಾಮಜ್ವರವನ್ನು ಇಂದು ಅರಿತೆನು''. (ಯಾವ ಬಗೆಯ ಶೈತ್ಯೋಪಚಾರದಿಂದಲೂ ಮೆಯ್ಯ ತಾಪವು ಆರದಿದ್ದುದರಿಂದ, ಆ ತಾಪಕ್ಕೆ 'ಹೇತು' (ಕಾರಣ) 'ಕಾಮಜ್ವರ' ಎಂದು 'ಜ್ಞಾಪಕ'ವಾಗುತ್ತದೆ, ಎಂದರೆ 'ಬೋಧೆ' (ಅರಿವು, ತಿಳಿವಳಿಕೆ)ಯಾಗುತ್ತದೆ) (ಇದು ದಂಡಿಯ

ಲಕ್ಷ್ಯದ ಅನುವಾದ).

ಪದ್ಯ ೧೬೫ : "ಅಱಿವುಳ್ಳವರೊಳ್ ಬೆರಸದುದರಿಂದಂ (= ಜ್ಞಾನಿಗಳೊಂದಿಗೆ ಬೆರೆಯದಿರುವುದರಿಂದಲೂ), ಅಱಿಯದರೊಳಪ್ಪ ಪರಿಚಯದಿಂದಂ (= ಅಜ್ಞಾನಿಗಳೊಂದಿಗೆ ಆಗುವ ಪರಿಚಯದಿಂದಲೂ), ನೆಱೆ ಇಂದ್ರಿಯಮಂ ಗೆಲ್ಲದುದಱಿಂದಂ (= ಇಂದ್ರಿಯಗಳನ್ನು ಚೆನ್ನಾಗಿ ಗೆಲ್ಲದಿರುವುದರಿಂದಲೂ), ಜನಕ್ಕೆ ಪೀನಂ ಬೆಸನಂ ಅಕ್ಕುಂ (= ಜನರಿಗೆ ಹೆಚ್ಚಾಗಿ ದುಃಖಪರಂಪರೆ ಒದಗುತ್ತದೆ). (ದಂಡಿಯ ಲಕ್ಷ್ಯದ ಅನುವಾದ. ಏನೇನು 'ಇಲ್ಲ'ದಿದ್ದರೆ ದುಃಖಕ್ಕೆ ಕಾರಣ ಎಂಬುದನ್ನು ಹೇಳಿರುವುದರಿಂದ ಇದು ದಂಡಿ ಹೇಳುವ 'ಅಭಾವಹೇತು'ವಿಗೆ ದೃಷ್ಟಾಂತ).,

ಪದ್ಯ ೧೬೬ : "ಬೆಳೆದು ಒಱಗಿದ (= ಬಾಗಿದ) ಕಱಮೆಗಳುಂ (= ಬತ್ತದ ಪಯಿರೂ), ತಿಳಿಗೊಳದೊಳಗೆ ಅಲರ್ದ (= ತಾವರೆಗಳ ಗುಂಪೂ), ಕಳಹಂಸೆಗಳ್ಗೆ ಕೋಮಲ ವಿಳಾಸವತಿಗಳ್ಗೆ (= ಇಂಪಾದ ಸ್ವರವುಳ್ಳ ಹೆಣ್ಣು ಹಂಸಗಳಿಗೂ ಕೋಮಲೆಯಾದ ವಿಲಾಸವತಿಯರಿಗೂ)" (ಇಲ್ಲಿ ವಿಲಾಸವತಿಯರ ಸಂತೋಷಕ್ಕೆ ಕಾರಣಗಳಾದ ವಸ್ತುಗಳನ್ನು ಹೇಳಿದೆ. ಇದು 'ಕಾರಕ ಹೇತು'.)

ಪದ್ಯ ೧೬೭ : "ತಿಳಿಗೊಳಗಳುಂ, ಅಮಳಾಶಾವಳಯಮುಂ (= ನಿರ್ಮಲವಾದ ದಿಙ್ಮಂಡಲವೂ), ಅತಿಧವಳ ಜಳದ ಜಲಧರ ಪಥಮುಂ (= ಬಹಳ ಬೆಳ್ಳಗಿರುವ ಮೋಡ ಹಾಗೂ ಆಕಾಶವೂ), ತೊಳಪ ಎಳವೆಱೆಯುಂ (= ತೊಳಗುವ ಬಾಲಚಂದ್ರನೂ), ಕಾಮಿಗಳ ಚಿತ್ತದೊಳ್ ನೆಲಸಿದುದಂ ಮುಳಿಸಂ ಕಳೆದವು (= ಕಾಮಿಗಳ ಮನಸ್ಸಿನಲ್ಲಿ ನೆಲಸಿದ್ದ ಕೋಪವನ್ನು ಕಳೆದುವು). (ಇದೂ 'ಕಾರಕ ಹೇತು'.)

## ೨೬. ವಿಭಾವನಾಲಂಕಾರ

ಪದ್ಯ ೧೬೮ : "ಕಾರಕಮನುಟಿಪಿ[೬೯] ನಿಜಸಂಸ್ಕಾರಗುಣಾತಿಶಯದೊಳ್

---

೬೯. ನಮ್ಮ ಮುದ್ರಿತ ಪಾಠದಲ್ಲಿ ಮದ್ರಾಸು ಮುದ್ರಣದ ಪಾಠವನ್ನು (= ಅಟಿಪೆ) ಇಟ್ಟುಕೊಂಡಿದೆ. ಪಾಠಕರ ಮುದ್ರಣದಲ್ಲಿ 'ಉಟಿಪೆ' ('ಕಾರಣಮನುಟಿಪೆ') ಎಂದಿದೆ. 'ಉಟಿಪಿ' ಎಂದು ತಿದ್ದಿಕೊಂಡರೆ ಕಾವ್ಯಾದರ್ಶದ 'ವ್ಯಾವೃತ್ತ್ಯಾ ಎಂಬ ಪದದ ಅರ್ಥಕ್ಕೆ ಹೆಚ್ಚು ಸಮೀಪವಾಗುತ್ತದೆ. ಆದ್ದರಿಂದ ಇಲ್ಲಿ 'ಉಟಿಪಿ' ಎಂದು ತಿದ್ದುಪಾಟು ಮಾಡಿಕೊಂಡಿದೆ. ಕೈಬರಹದ ಪ್ರತಿಗಳಲ್ಲಿ ಇತ್ವ ಎತ್ವ ಚಿಹ್ನೆಗಳಿಗೆ ಕೆಲವು ವೇಳೆ ವ್ಯತ್ಯಾಸವು ಗೊತ್ತಾಗುವುದಿಲ್ಲವಾದ್ದರಿಂದ, ಅಕ್ಷರ ಸ್ಖಾಲಿತ್ಯವಾಗಿ 'ಉಟಿಪಿ' ಎನ್ನುವುದು 'ಉಟಿಪೆ' ಆಗಿರಬಹುದು.

ತಗುಳ್ಚುವುದಕ್ಕುಂ ವಿಭಾವನಾಳಂಕಾರಂ". – 'ಕಾರಣವನ್ನು ಬಿಟ್ಟು ನಿಜಸಂಸ್ಕಾರ ಗುಣವಿಶೇಷದಿಂದ, ಎಂದರೆ ಅದರ ಸಹಜ ಗುಣವಿಶೇಷದಿಂದಲೇ, (ಕಾರ್ಯವನ್ನು ಅಥವಾ ಫಲವನ್ನು) ಸಂಗಡಿಸುವುದು ಅಥವಾ ಆದಂತೆ ಭಾವಿಸುವುದು (ವಿಭಾವಿಸುವುದು) ವಿಭಾವನೆ.' (ಪ್ರಸಿದ್ಧವಾದ ಕಾರಣವಿಲ್ಲದೆ ಕಾರ್ಯವಾಗುವುದಿಲ್ಲ ; ಅಂತಹ ಕಾರಣವಿಲ್ಲದೆ ಬೇರೊಂದು ಹೊಸ ಕಲ್ಪಿತ ಕಾರಣದಿಂದ ಅಥವಾ ತನ್ನ ಸ್ವಾಭಾವಿಕತೆಯಿಂದಲೇ ಅದು ಆದಂತೆ ವರ್ಣಿಸುವುದು).

ದಂಡಿಯ ಶ್ಲೋಕ :

ಪ್ರಸಿದ್ಧಹೇತು ವ್ಯಾವೃತ್ತ್ಯಾ ಯತ್ಕಿಂಚಿತ್ ಕಾರಣಾಂತರಂ I
ಯತ್ರ ಸ್ವಾಭಾವಿಕತ್ವಂ ವಾ ವಿಭಾವ್ಯಂ ಸಾ ವಿಭಾವನಾ ॥ – II,೧೯೯

[ಪ್ರಸಿದ್ಧ ಕಾರಣದ ವ್ಯಾವೃತ್ತಿಯ ಮೂಲಕ ಎಂದರೆ ಅದನ್ನು ಬಿಟ್ಟು ಬಿಟ್ಟು ಬೇರೊಂದು ಕಾರಣದಿಂದ ಇಲ್ಲವೆ ಸ್ವಾಭಾವಿಕವಾಗಿಯೆ ಕಾರ್ಯವಾದಂತೆ ಇಟ್ಟುಕೊಳ್ಳುವುದು ವಿಭಾವನೆ]

ಪದ್ಯ ೧೬೯ : "ಅವಳಾ ಸಮಱುಗೆಯಿಲ್ಲದ ಮುಱುಕಮುಂ (= ಚೆನ್ನಾಗಿ ಕಾಣಬೇಕೆಂಬ ಪ್ರಯತ್ನವಿಲ್ಲದೆಯೆ ಸಹಜವಾಗಿರುವ ಮುಖಭಂಗಿಯೂ), ಕೆಂಸ್ಗೆಯ್ಯದೊಪ್ಪುವ ಅಂದವುಂ (= ಒಡವೆಗಳಿಂದ ಸಿಂಗರಿಸಿಕೊಳ್ಳದಿದ್ದರೂ ಒಪ್ಪುವ ಚೆಲುವೂ), ನೆವಮಿಲ್ಲದ ದರಹಸಮುಂ (= ಕಾರಮವಿಲ್ಲದ ನಸುನಗೆಯೂ), ಸಮದಾಲಸ ಲಲಿತ ಗಮನಮುಂ (ಸೊಕ್ಕಿನಿಂದ ನಿಧಾನವಾದ, ಮನೋಹರವಾದ, ನಡಿಗೆಯೂ), ಅಮರ್ದಿರೆ (ಒಂದುಗೂಡಿರಲು), ಸೊಗಯಿಸುಗುಂ".

ಇದು ದಂಡಿಯ ಲಕ್ಷ್ಯದಿಂದ ಪ್ರೇರಣೆಗೊಂಡಿದೆಯೆ ಹೊರತು, ಬಹುಮಟ್ಟಿಗೆ ಸ್ವತಂತ್ರವಾದ ಲಕ್ಷ್ಯಪದ್ಯ. ಇಲ್ಲಿ, 'ಮುರಕ', 'ಅಂದ', 'ದರಹಸ', 'ಅಲಸ ಲಲಿತ ಗಮನ' ಇವಕ್ಕೆ 'ಸಮಱುಗೆ', 'ಅಲಂಕರಣ', ಮುಂತಾದುವು ಕಾರಣಗಳು : ಇವಿಲ್ಲದೆಯೇ 'ಮುಱಿಕ' ಮುಂತಾದ ಕಾರ್ಯಗಳು ತಾವಾಗಿಯೇ ಆಗಿವೆಯೆಂದು ಇಲ್ಲಿ ವರ್ಣಿಸಿ, ಒಬ್ಬ ಹೆಣ್ಣಿನ ಸೌಂದರ್ಯ ವಿಲಾಸವನ್ನು ವರ್ಣಿಸಿದೆ.

ಸಮಱುಗೆ = ಚೆನ್ನಾಗುವಂತೆ ಮಾಡುವುದು (ಧಾ. ಸಮಱು = 'ಚಾರುಕರಣೇ' : ಶ.ಮ.ದ.) ಮುಱುಕ = (ಎರಡು ಮುದ್ರಿತ ಪ್ರತಿಗಳಲ್ಲಿಯೂ 'ಮುಱುಕ' ಎಂಬ ಪಾಠವಿದೆ. ಆದ್ದರಿಂದ

ಸಂದರ್ಭೋಚಿತವಾದ ಅರ್ಥವಾಗುವುದಿಲ್ಲವಾಗಿ, ಪ್ರತಿಕಾರನ ಹಸ್ತಪ್ರಮಾದದಿಂದ ಕೊಂಬಿನ (ಉತ್ವ) ಚಿಹ್ನೆಯು ಸ್ಥಾನಪಲ್ಲಟವಾಗಿರಬಹುದೆಂದು ಎಣಿಸಿ, ಈಗಿನ ತಿದ್ದುಪಾಟನ್ನು ಮಾಡಿದೆ) = ಮುಖಭಂಗಿ, ಒಯ್ಯಾರ (ಮೈ ಬಳುಕಿಸುವುದು) (ಧಾ. ಮುಱುಕು = ಮುಖವಿಕಾರೇ' : ಶ.ಮ.ದ. ಆದ್ದರಿಂದ 'ಮುಱುಕ' ಎಂಬ ರೂಪವೂ ಆಗಬಹುದು). ಕೆಯ್ಗೆಯ್ = ಒಡವೆಗಳಿಂದ ಸಿಂಗರಿಸಿಕೊ ('ಭೂಷಣೋದ್ವಹನೇ : ಶ.ಮ.ದ). ಅಮರ್ = ಹತ್ತಿದಂತೆ ಸೇರಿಕೊ, ಒಂದುಗೂಡು, ಒಟ್ಟುಗೂಡು ('ಗಾತ್ರಶ್ಲೇಷೇ' : ಶ.ಮ.ದ.)

## ೨೭. ಲೇಶ

ಪದ್ಯ ೧೭೦ : "ಗುಣದೊಳ್ ಇನಿಸು (ಲೇಶ, ತುಸ) ಅವಗುಣಮಂ ಅಱಿಪುವುದು, ದೋಷದೊಳಂ ಇನಿಸು ಗುಣಮಂ ತಂದಿರ್ದು ಎಣಿಸುವುದು (ತಂದು ಪರಿಗಣಿಸುವುದು) ಲೇಶಂ."

(ದಂಡಿ 'ಲೇಶೋ ಲೇಶೇನ ನಿರ್ಭಿನ್ನವಸ್ತುರೂಪ ನಿಗೂಢನಂ' ('ಹೊರಪಡಲಿರುವ ವಸ್ತುಸ್ವರೂಪವನ್ನು 'ಲೇಶ'ದಿಂದ ಎಂದರೆ ಚಿಕ್ಕ ನೆವದಿಂದ ಮರೆಮಾಡುವುದು') ಎಂದು ಹೇಳಿ, ಉದಾಹರಣೆಗಳ ಮೂಲಕವೇ ಈ ಅಲಂಕಾರದ ಸ್ವರೂಪವು ಸ್ಫುಟಗೊಳ್ಳತಕ್ಕದ್ದೆಂದು ಕೆಲವು ಉದಾಹರಣೆಗಳನ್ನು ಕೊಟ್ಟಿದ್ದಾನೆ. ಮುಂದುವರಿದು, 'ಲೇಶಮೇಕೇ ವಿದುರ್ನಿಂದಾಂ ಸ್ತುತಿಂ ವಾ ಲೇಶತಃ ಕೃತಂ' (ಯಾವುದೋ 'ಲೇಶ' ಮಾತ್ರದಿಂದ ಆದ ನಿಂದೆ ಇಲ್ಲವೆ ಸುತ್ತಿಯೆ ಲೇಶಾಲಂಕಾರವೆಂದು ಕೆಲವರು ತಿಳಿಯುತ್ತಾರೆ) ಎಂದು ಹೇಳಿ, ತದನುಗುಣವಾದ ಲಕ್ಷ್ಯಗಳನ್ನು ಕೊಟ್ಟಿದ್ದಾನೆ. (II, ೨೬೫–೨೭೨).

[ಮಾರ್ಗಕಾರನ ವಿವರಣೆಯಂತೆ ನಿಂದೆಗೋ ಸ್ತುತಿಗೋ ಕಾರಣವೆನಿಸುವ ಆ 'ಲೇಶವು' 'ಇನಿಸು ಅವಗುಣ' (ದೋಷ) ಇಲ್ಲವೆ 'ಇನಿಸು ಗುಣ' ಆಗಿರುತ್ತದೆ]

ಪದ್ಯ ೧೭೧ : "ಮಾನಿಯೂ ಉದಾರಚರಿತನೂ ಆನತ ರಿಪುನಿಕರನೂ (ಶತ್ರುಸಮೂಹದಿಂದ ನಮುಸ್ಕರಿಸಲ್ಪಟ್ಟವವನೂ) ಮನಸ್ವಿಯೂ (ಬುದ್ಧಿವಂತನೂ) (ಆದವನು) ಅಂತು ಆ ಮಾನಸರನಾರುಮಂ ಮನಕೆ ಏನುಂ ಮುಟ್ಟಲ್ಲದಂತು ಬಗೆವುದು", (ಸರ್ವಗುಣಸಂಪನ್ನನಾದ

ಅವನಲ್ಲಿರುವ) "ದೋಷಂ." ['ಮನಕೆ ಏನುಂ ಮುಟ್ಟಲ್ಲದಂತು ಬಗೆವುದು': ಇಲ್ಲಿ ಸ್ವಲ್ಪ ಅರ್ಥಕ್ಲೇಷವಿದೆ. ('ಮುಟ್ಟು' ಎಂದರೆ, 'ಸಾಧನ ಸಾಮಗ್ರಿ' : 'ಸಲಕರಣೆ', 'ಉಪಯುಕ್ತ ಪದಾರ್ಥ' ಎಂದು ಅರ್ಥಗಳಾಗುತ್ತವೆ). "ತನ್ನ ಮನಸ್ಸಿನಲ್ಲಿ ಯಾರೂ ಒಂದು 'ಮುಟ್ಟು' ಕೂಡ ಅಲ್ಲ" ಎಂದರೆ "ಇತರರೆಲ್ಲರೂ ಕೆಲಸಕ್ಕೆ ಬರದವರು" ಎಂದು ತಾತ್ಪರ್ಯವಾಗಬಹುದು. ತನ್ನ ಸಮಾನರು ಯಾರೂ ಇಲ್ಲ ಎಂಬ ಅಹಂಭಾವದಿಂದ ಇತರರನ್ನು ಕೀಳಾಗಿ ಕಾಣುವುದೂ ಒಂದು ದೋಷವಷ್ಟೆ? ಈ ದೋಷ ಲೇಶದಿಂದಾಗಿ ಉದಾತ್ತ ವ್ಯಕ್ತಿಯ ಗುಣಗಳೆಲ್ಲ ಮರೆಯಾಗಿ, ವರ್ಣನೆ ನಿಂದೆಯಾಗಿಯೇ ಪರಿಣಮಿಸುತ್ತದೆ. ('ಜಾಣ, ಆದರೆ ತುಸ ಕೋಣ', 'ಚಿತ್ರವನ್ನು ಮಸಿ ನುಂಗಿತು' ಎಂಬ ನಾಣ್ನುಡಿಗಳಂತೆ)].

ಪದ್ಯ ೧೭೨ : ಮೇಲಿನದು 'ಲೇಶದೋಷ'ವುಳ್ಳ ಉದಾತ್ತ ವ್ಯಕ್ತಿಯ ನಿಂದಾರೂಪದ 'ಲೇಶಾಲಂಕಾರ'ವಾದರೆ ಇದು 'ಲೇಶಗುಣ'ವುಳ್ಳ ಯಃಕಶ್ಚಿತನೊಬ್ಬನ ಸ್ತುತಿರೂಪದ 'ಲೇಶಾಲಂಕಾರ'.

"ಕುಲಜನುಂ ಅಲ್ಲಂ (=ಕುಲೀನನೂ ಅಲ್ಲ) ; ನಣ್ಪಿನ ಬಲಮುಂ ತನಗಿಲ್ಲ (=ಅವನಿಗೆ ಗಣ್ಯರ ನಂಟತನದ ಬೆಂಬಲವೂ ಇಲ್ಲ) ; ಕಣ್ಗಂ ಏಳಿದಂ (= ನೋಡುವುದಕ್ಕೆ ತಿರಸ್ಕಾರ ಹುಟ್ಟಿಸುವ ಹಾಗಿದ್ದಾನೆ) ; ಆರೊಳ್ ನೆಲಸಿರಂ ಎಲ್ಲಿಯುಂ (= ಯಾರೊಂದಿಗೂ ಎಲ್ಲಿಯೂ ನೆಲಸಿರುವುದಿಲ್ಲ) ; (ಆದರೆ ಅವನಲ್ಲಿ) ಅದೊಂದುಂಟು ಗುಣಂ : ಅವನಂ ಚಲವೆಂದುಂ ಪತ್ತುವಿಡದು (= ಚಲ ಅವನನ್ನು ಎಂದಿಗೂ ಬಿಟ್ಟು ಹೋಗುವುದಿಲ್ಲ)."

(ಲೇಶಾಲಂಕಾರದ ಮೇಲಿನ ಎರಡು ಲಕ್ಷ್ಯಗಳೂ ಕವಿಯ ಸ್ವಂತರಚನೆಗಳು).

## ೨೮. ಉದಾತ್ತಾಲಂಕಾರ

ಪದ್ಯ ೧೭೩ : "ಮಿಗೆ (= ವಿಶೇಷವಾಗಿ) (ನಿರ್ದಿಷ್ಟ ವ್ಯಕ್ತಿಯ) ಮನದ ಪೆಂಪುಮಂ (= ಹಿರಿಮೆಯನ್ನೂ), ಕೈಮಿಗೆ ವಿಭವದ ಪೆಂಪುಮಂ (= ಅದಕ್ಕೂ ಅತಿಶಯವಾಗಿ ವೈಭವದ ಹಿರಿಮೆಯನ್ನೂ) ವಿಶ್ಲೇಷಿಸಿ" ಹೇಳುವುದು ಉದಾತ್ತಾಲಂಕಾರ.

(೧೭೪ ರಿಂದ ೧೮೧ರವರೆಗಿನ ೮ ಲಕ್ಷ್ಯ ಪದ್ಯಗಳು, 'ನಿದರ್ಶನಾಲಂಕಾರ'ದ ಲಕ್ಷ್ಯಪದ್ಯಗಳಂತೆ, ದಂಡಿಯ ಲಕ್ಷ್ಯಗಳನ್ನು

ಅನುಸರಿಸದೆ ಮಾರ್ಗಕಾರನು ಸ್ವತಂತ್ರವಾಗಿ ರಚಿಸಿದವು. ಈ ಅಂಶ ಗಮನಾರ್ಹ. ಆದ್ದರಿಂದ ಮಾರ್ಗಕಾರನು ನಪತುಂಗನ 'ಉದಾತ್ತ' ಗುಣಗಳನ್ನೆ ಪದ್ಯಗಳಲ್ಲಿ ಪ್ರಶಂಸಿಸಿ ವರ್ಣಿಸಿರಬಹುದೆಂದು ಊಹಿಸಲು ಅವಕಾಶವಿದೆ].

ಪದ್ಯ ೧೭೪ : "ಚಲದೆಡೆಗೆ ಪಿರಿದು ರಜಮುಂ ನೆಲನುಂ' : ಶತ್ರುಗಳಿಂದ ನೆಲವನ್ನು (= ರಾಜ್ಯವನ್ನು) ಗೆದ್ದು ಪಡೆಯಬೇಕೆಂದು ಚಲ ಹಿಡಿದಾಗ (ಅವನ ದೃಷ್ಟಿಯಲ್ಲಿ) ನೆಲ ಎಷ್ಟು ದೊಡ್ಡವೋ ಧೂಳಿನ ಕಣ ಕೂಡ ಅಷ್ಟೇ ದೊಡ್ಡದು. (ಚಲ ಹಿಡಿದರೆ, ಒಂದು ಧೂಳಿನ ಕಣವನ್ನು ಕೂಡ ಶತ್ರುಗಳಿಂದ ಪಡೆಯದೆ ಬಿಡತಕ್ಕವನಲ್ಲ). 'ಪ್ರಿಯದೆಡೆಗೆ ಕಿಱಿದು ಕೊಳಲುಂ ಕುಡಲುಂ':[೨೦] ತನಗೆ ಪ್ರಿಯುವೆನಿಸಿದಾಗ, ಕಿರಿದೆಂದು ಭಾವಿಸಿ ಬಿಟ್ಟುಬಿಡುವನು ; ಅದೇ ರೀತಿಯಲ್ಲಿ ತನ್ನದನ್ನು ದಾನ ಮಾಡುವಾಗ ಅದು ಎಷ್ಟೇ ಹಿರಿದಾಗಿದ್ದರೂ ಅದನ್ನು ಕಿರಿದೆಂದು ಭಾವಿಸಿ ದಾನ ಮಾಡಿಬಿಡುವನು. 'ಚಲಮುಂ ಪ್ರಿಯಮುಂ ಬಱಿ ಸಮಬಲಮಾಗಿರೆ ನೆಗಟ್ವೆ ಬಗೆಗೆ ಕಿಱಿದೇಂ ಪಿರಿದೇಂ' : ಹೀಗೆ 'ಚಲ' 'ಪ್ರಿಯ.' ಎಂಬೀ ಎರಡು ಗುಣಗಳೂ ಅವನಲ್ಲಿ ಸಮಬಲವಾಗಿ ನೆಲಸಿರುವಾಗ , ಆಯಾ ಸಂದರ್ಭಕ್ಕೆ ಅನುಗುಣವಾಗಿ ಅವನು ನೆಲದ ವಿಷಯದಲ್ಲಿ, ಹಿರಿದು ಕಿರಿದು ಎಂಬ ಭೇದವೆಣಿಸನು. (ಈ ಪದ್ಯದಲ್ಲಿ ರಾಜನ 'ಛಲ' ನಿಷ್ಠವಾದ ಪರಾಕ್ರಮವನ್ನೂ, 'ಪ್ರಿಯು' ನಿಷ್ಠವಾದ ಔದಾರ್ಯ ಹಾಗೂ ತ್ಯಾಗಗುಣಗಳನ್ನೂ ವರ್ಣಿಸಿದೆ.)

ಪದ್ಯ ೧೭೫ : ಅನ್ವಯಾರ್ಥ : "ಅಱಿದು (= ನಾಶವಾಗಿ) ಅಱಿಪಿ (= ನಾಶಮಾಡಿ) ಬಱಿಯನುಱಿಯದೆ (ಸಾಮೀಪ್ಯವನ್ನು, ಹತ್ತಿರದೆಡೆಯನ್ನು ಬಿಡದೆ), ಪಱಿವರುಮಂ ತವಿಸಿ ಕಱಿಯದೆ ಉಱಿವಱಿಂ ಸಿರಿಯಂ

---

೨೦. ಪಾಠಕರ ಮುದ್ರಣದಲ್ಲಿ 'ಕೊಳಲುಂ ಕಡಲುಂ' ಎಂದಿದೆ. ಹಿರಿದು ಕಿರಿದು ಎಂಬ ತಾರತಮ್ಯ ವಿವಕ್ಷೆಯನ್ನು ಗಮನಿಸಿ, 'ಕೊಳಲುಂ' ಎಂಬುದನ್ನು 'ಕೊಳನುಂ' ಎದು ನಮ್ಮ ಮುದ್ರಣದಲ್ಲಿ ತಿದ್ದಲಾಯಿತು. ಮದ್ರಾಸು ಮುದ್ರಣದಲ್ಲಿ 'ಕಡಲುಂ' ಎಂಬುದನ್ನು 'ಕುಡಲುಂ' ಎಂದು ಮಾಡಿರುವ ತಿದ್ದುಪಾಟು ಅರ್ಥಸಾಮಂಜಸ್ಯದ ದೃಷ್ಟಿಯಿಂದ ಅಂಗೀಕಾರಾರ್ಹವಾಗಿ ಕಾಣುತ್ತದೆ. ಅಲ್ಲದೆ, 'ಕುಡಲುಂ' ಎಂಬ ಪದದ ಕಕಾರದ ಕೊಂಬು (ಉತ್ವ) ಲಿಪಿಕಾರನ ಹಸ್ತ ದೋಷದಿಂದ ಬಿಟ್ಟುಹೋಗಿರುವ ಸಂಭವವಿದೆ. 'ಕುಡಲುಂ' ಎಂಬ ಪಾಠಾಂತರವನ್ನು ಇಟ್ಟುಕೊಂಡ ಮೇಲೆ ವ್ಯಾಖ್ಯಾನಿಸಿದೆ.

(= ನಿಂದಿಸುವವರನ್ನು ಕ್ಷಯಗೊಳಿಸಿ ನೀಗಿಕಳೆಯದೆ ಇರುವ ಲಕ್ಷ್ಮಿಯನ್ನು), ಆದಂ (= ಚೆನ್ನಾಗಿ ವಿಶೇಷವಾಗಿ), ಪಟಿಕೆಯ್ದು (= ನಿಂದಿಸಿ) ತೊಟ್ಟಿನುಱಿದಂತೆ ಉಱಿದ ಮಹಾಪುರುಷರ್ (= ತೊತ್ತನ್ನು ಬಿಟ್ಟುಬಿಡುವಂತೆ ಬಿಟ್ಟ ಮಹಾಪುರುಷರು). ಅಱಿಯದುಱಿದರೆ (=ತಿಳಿವಳಿಕೆಯಿಲ್ಲದೆ ಬಿಟ್ಟುಬಿಟ್ಟರೆ)?"

("ದುರಾಶಾಪೀಡಿತರಾದ ಮಾನವರು ಐಶ್ವರ್ಯಕ್ಕಾಗಿ ತಮ್ಮ ಪ್ರಾಣವನ್ನಾದರೂ ತೆರುತ್ತಾರೆ ; ಇತರರನ್ನು ನಾಶಪಡಿಸುತ್ತಾರೆ ; ಲಕ್ಷ್ಮಿಯನ್ನು ಎಡೆಬಿಡದೆ ಓಲೈಸುತ್ತಾರೆ ; ತಮಗೆ ಅವಳು ಒಲಿಯದಿದ್ದರೆ ಅವಳನ್ನು ಹಳಿಯುತ್ತಾರೆ ; ಅಂಥವರನ್ನು ಕೂಡ ಬಿಟ್ಟು ಹೋಗದೆ ಇರುವವಳಾದ ಲಕ್ಷ್ಮಿಯನ್ನು ಹಳಿದು, ತೊತ್ತನ್ನು ಯಾವರೀತಿ ಬಿಟ್ಟುಬಿಡುತ್ತಾರೆಯೋ ಆ ರೀತಿ ಲಕ್ಷ್ಮಿಯನ್ನು ಹಿಂದೆಮುಂದೆ ನೋಡದೆ ತ್ಯಾಗಮಾಡುವ ಮಹಾಪುರುಷರು ತಿಳಿವಳಿಕೆಯಿಲ್ಲದೆ ಹಾಗೆ ಮಾಡುವರೆ? ಎಂದಿಗೂ ಇಲ್ಲ")

ಪದ್ಯ ೧೭೬ ; "ಪರರ ವಿಚಾರವನ್ನೂ ಧರ್ಮವನ್ನೂ ಚೆನ್ನಾಗಿ ಸಹಿಸುವ ಸಾಮರ್ಥ್ಯವನ್ನು ಹೊಂದಿರುವ ಪಕ್ಷದಲ್ಲಿ ಅಂಥ ಸಹನಾಗುಣವನ್ನು ಚಿನ್ನವೆಂದೆನ್ನಬೇಕು. (ಆದರೆ, ಇಂಥ ಸಹಿಷ್ಣುತೆ ಎಲ್ಲರಿಗೂ ಇರುವುದಿಲ್ಲ). ಎಲ್ಲರೂ (ತಮ್ಮ ಅಸಹನಾಗುಣದಿಂದ) ಮಿತಿಮೀರಿ ಸಂಕಟವನ್ನು ಉಂಟುಮಾಡುತ್ತಾರೆ. ಅವರಿಗೆ ಕಸವೇನು, ಕಸವರವೇನು? ಅವರ ದೃಷ್ಟಿಯಲ್ಲಿ ಎರಡೂ ಒಂದೆ."

ಕಸವರ = ಚಿನ್ನ, ಉಬ್ಬಸ = ಆಯಾಸ, ಕ್ಲೇಶ, ಸಂಕಟ.

ಪದ್ಯ ೧೭೭ : "ಗುಣದಲ್ಲಿ ಶ್ರೇಷ್ಠರೆನಿಸಿದವರು ('ಗುಣಗ್ರಾಮಣಿಗಳ್') ಸರಿಯಾದ ಕ್ರಮ (= 'ಪಾಟಿ') ನೆಲೆಗೊಳ್ಳುವಂತೆ ಕೀರ್ತಿವಂತರಾಗಿ ಬಾಳುವುದೆ ನಿಶ್ಚಯವಾಗಿ ಬಾಳು ಎನ್ನುವುದು ; (ತಾನೂ ಇತರರೂ) ಹಾಳಾಗುವಂತೆ ನಿಂದೆಗೆ ಗುರಿಯಾಗಿ ಬಾಳುವ ಮನುಷ್ಯರ ಬಾಳು ಚಂದ್ರ ನಕ್ಷತ್ರಗಳಿರುವವರೆಗೂ ಇರುವುದೇನು ?' (ಬದುಕು ಸ್ಥಿರವಲ್ಲ ; ಆದ್ದರಿಂದ ಕೆಟ್ಟಹೆಸರು ಹೊತ್ತು ಬದುಕುವುದಕ್ಕಿಂತ ಗುಣವಂತರೆನಿಸಿ ಕೀರ್ತಿಶಾಲಿಗಳಾಗಿ ಬದುಕುವುದೇ ಬದುಕು ; ಏಕೆಂದರೆ, ಕೀರ್ತಿ ನಿಲ್ಲತಕ್ಕದ್ದು – ಎಂದು ತಾತ್ಪರ್ಯ).

ಪದ್ಯ ೧೭೮ : "ಕೆಟ್ಟತನವೂ ಗುಣವೂ ತಮಗೆ (ಎಂದರೆ, ಜನಕ್ಕೆ) ಸೇರಿದ್ದಲ್ಲದೆ,

ತನಗೂ (ಎಂದರೆ, ಇಲ್ಲಿ ಯಾವ ವ್ಯಕ್ತಿಯನ್ನು ನಿರ್ದೇಶಿಸಿದೆಯೋ ಆತನಿಗೆ) ಇತರರಿಗೂ ಸೇರಿದ್ದಲ್ಲ ('ಪುದುವಲ್ಲ') ; ಹಾಗಿದ್ದರೂ ಕೂಡ ('ಉಂತಾಗಿಯುಂ') ಜನರೆಲ್ಲರೂ ಬಿಡದೆ ಕೋಪವಾದಾಗ ಹಳಿಯುತ್ತಾರೆ, ಸಂತೋಷವಾದಾಗ ಹೊಗಳುತ್ತಾರೆ ('ಮುನಿಸೊಸಗೆವೆರಸು ಪಱೆಗುಂ ಪೊಗೞ್ಗುಂ' = 'ಮುನಿಸುವೆರಸು ಪಱೆಗುಂ, ಒಸಗೆವೆರೆಸು ಪೊಗೞ್ಗುಂ') ತಮ್ಮ ಕೆಟ್ಟತನ ಒಳ್ಳೆಯತನಗಳಿಗೆ ಜನ ತಾವೇ ಹೊಣೆ. ಅದನ್ನು ರಾಜನಿಗಾಗಲಿ ಇತರರಿಗಾಗಲಿ ಆರೋಪಿಸುವ ಹಾಗಿಲ್ಲ. ಆದರೂ, ತಮಗೆ ಕೋಪ ಬಂದಾಗ ರಾಜನನ್ನು ದೂಷಿಸುವುದೂ, ಸಂತೋಷದಿಂದಿರುವಾಗ ಅವನನ್ನು ಹೊಗಳುವುದೂ ಸ್ವಾಭಾವಿಕ – ಎಂದು ತಾತ್ಪರ್ಯಾರ್ಥ. ಈ ಪದ್ಯವನ್ನೂ ಇದರ ಮುಂದಿನ ಪದ್ಯವನ್ನೂ ಒಟ್ಟಿಗೆ ಓದಿಕೊಂಡು ಅರ್ಥಾನ್ವಯ ಮಾಡಿದರೆ, ಅವು ಪರಸ್ಪರ ಪೂರಕಗಳೆಂದು ಮನಗಂಡು ಬೇರೆ ಬೇರೆಯಾಗಿ ಪ್ರತಿ ಪದ್ಯದ ಅರ್ಥ ವಿಶಯವಾಗುವುದು)."

ಪದ್ಯ ೧೭೯ : "(ಜನರು) ನನ್ನನ್ನು ಹೆಚ್ಚಾಗಿ ನಿಂದಿಸುವರು ಎನ್ನದೆ, ಅವರೆಲ್ಲ ಕೂಡಿ ನನ್ನನ್ನು ವಿಶೇಷವಾಗಿ ಹೊಗಳುವರು ಎನ್ನದೆ, ತನ್ನಲ್ಲಿಯೆ ವಿಚಾರಮಾಡಿ ('ತನ್ನೊಳ್ ಬಗೆದು'), (ಇಹ ಪರ ಎಂಬ) ಎರಡು ಲೋಕಗಳಲ್ಲಿಯೂ ಹಿತಕವೆನಿಸುವಂತೆ ಉದ್ಯೋಗಿಗಳಲಿಲಯೂ ಹಿತಕವೆನಸುವಂತೆ ಉದ್ಯೋಗಿಸಿದೆರೆ ('ಉಭಯಲೋಕಹಿತದೊಳ್ ನೆಗೞೆ') ಜನ ನಿಂದಿಸಲಿ ಇಲ್ಲವೆ ಹೊಗಳಲಿ, ಅದರಿಂದ ತನಗೇನು?" (ರಾಜನಾದವನು ಜನನಿಂದೆಗೂ ಜನಸ್ತುತಿಗೂ ಗಮನ ಕೊಡದೆ, ಅಹಪರ ಸೌಖ್ಯವನ್ನು ಗಮನದಲ್ಲಿರಿಸಿಕೊಂಡು ಧರ್ಮಮಾರ್ಗದಲ್ಲಿ ನಡೆಯತಕ್ಕದ್ದೆಂದು ತಾತ್ಪರ್ಯ).

ಪದ್ಯ ೧೮೦ : ಅನ್ವಯ : "ಪ್ರಣತಾರಿ [೭೧][ಘ]ಟಿತ"[೭೧] ಮುಕ್ತಾ [೭೨][ಮಣಿಗಣಮು] ತ್ತಂಸದಿಂ[೭೨] ಕಟಿಲ್ದುದುರೆ ಒಪ್ಪೆ ವೀರನಾರಾಯಣಂ ಸಭಾಂಗಣಂ ಆ ತಾರಕಿತನಭದವೊಲ್ ಸೊಗಯಿಸುಗುಂ".

---

೭೧. ಪಾಠಕರ ಪ್ರತಿಯಲ್ಲಿ 'ತೃಟಿತ' ಎಂದೂ, ಮದ್ರಾಸು ಪ್ರತಿಯಲ್ಲಿ 'ತ್ರುಟಿತ' (ಕತ್ತರಿಸಲ್ಪಟ್ಟ, ತುಂಡರಿಸಿದ) ಎಂದೂ ಪಾಠಗಳಿವೆ. 'ತೃಟಿತ' ಅಶುದ್ಧರೂಪ. 'ತ್ರುಟಿತ : ಎಂಬಲ್ಲಿ 'ತ್ರು' ಎಂಬಕ್ಷರಕ್ಕೆ ಶೈಥಿಲ್ಯವನ್ನು ಹೇಳಬೇಕು. ಇದು ವ್ಯಾಕರಣ ಶುದ್ಧವಲ್ಲ." (ಮದ್ರಾಸು ಮುದ್ರಣದ ಅಡಿ ಟಿಪ್ಪಣಿ : ಪು. ೯೯). ಅಲ್ಲದೆ, 'ತ್ರುಟಿತ' ಎಂಬುದನ್ನು ಸ್ವೀಕರಿಸಿದರೆ,

ಅರ್ಥ : "ನಮಸ್ಕಾರ ಮಾಡಿದ ಶತ್ರುರಾಜರ ಶಿರೋಭೂಶಣಗಳಿದ ಮುತ್ತುರತ್ನಗಳು ಕಳಚಿಕೊಂಡು ಉದುರಿರಲು, ವೀರನಾರಾಯಣನು (ನೃಪತುಂಗನು) ಮೆರೆಯುತ್ತಿರಲು, ಸಭೆಯ ಅಂಗಳವೆಲ್ಲ ನಕ್ಷತ್ರ ಖಚಿತವಾದ ಆಕಾಶದ ಹಾಗೆ ಶೋಭಿಸುವುದು".

ಮುಕ್ತಾ = ಮುತ್ತು. ಉತ್ತಂಸ = ಶಿರೋಭೂಷಣ, ತಲೆದೊಡವು. ಕಱಲ್ = ಕ್ಷೀಣಿಸು, ಸವೆದುಹೋಗು, ಕರಗು ; ಜಾರಿಬೀಳು, ಕಳಚಿಬೀಳು. ('ತನುತ್ವೇ' – ಶ.ಮ.ದ. ಈ ಪದ್ಯದಲ್ಲಿ, 'ಕಳಲ್' ಎನ್ನುವುದಕ್ಕೆ 'ಕರಗು' (ಸಣ್ಣಾಗು : 'ಮುತ್ತು ಕರಗಿಹೋಯಿತು', 'ಕೆಂಡ ಕಳಲುತ್ತದೆ' ಎಂದು ಈಗಲೂ ಹೇಳುವುದುಂಟು) ಎಂಬ ಶ.ಮ.ದ.ದ ಪ್ರಾಚೀನಾರ್ಥವೇ ಇರಬಹುದೆ ? ಹಾಗೆ ಇಟ್ಟುಕೊಂಡರೆ ಧ್ವನಿತಾರ್ಥದ ಸೊಗಸುಹೆಚ್ಚು : "ವೀರನಾರಾಯಣನ ಪ್ರತಾಪದಿಂದ ಶತ್ರುಗಳ ಉತ್ತಂಸದಮುತ್ತು 'ಕಱಲಿ' ಉದುರಿದುವು !"] ತಾರಕಿತನಭ = ಚುಕ್ಕಿ ತುಂಬಿದ ಬಾನು, ನಕ್ಷತ್ರಖಚಿತ ಆಕಾಶ.

ಪದ್ಯ ೧೮೧ : "ಪರಚಕ್ರಭೂಪರ್ (ಶತ್ರುಮಂಡಲದ ರಾಜರು) ಅಟ್ಟಿದ ಕರಿಗಳ್ (= ಕಾಣಿಕೆಯಾಗಿ ಕಳಿಸಿಕೊಟ್ಟ ಆನೆಗಳು) ಬಿಡುತಪ್ಪ ಮದದ ಪೊನಲಿಂದೆ (= ಸುರಿಸುವ ಮದೋದಕದ ಪ್ರವಾಹದಿಂದ) ಎತ್ತಂ ನರಲೋಕಚಂದ್ರನಾ ಮಂದಿರದೊಳಗೊಳಗೆ ಎಲ್ಲ ಕಾಲಮುಂ ಕೆಸಱಿಕ್ಕುಂ (= ಎಲ್ಲೆಲ್ಲಿಯೂ ನರಲೋಕಚಂದ್ರನ ಅರಮನೆಯಲ್ಲಿ ಸದಾಕಾಲವೂ ಕೆಸರಾಗಿರುವುದು") ಮೇಲಿನ ಎರಡು ಪದ್ಯಗಳಲ್ಲಿನ 'ವೀರನಾರಾಯಣ' ಮತ್ತು 'ನರಲೋಕಚಂದ್ರ' ಎಂಬಿವು ನೃಪತುಂಗನ ಬಿರುದುಗಳಷ್ಟೆ. ಈ ಎರಡು ಪದ್ಯಗಳಂತೂ ನೃಪತುಂಗನನ್ನು ಪ್ರಶಂಸೆ ಮಾಡುವ ಪದ್ಯಗಳೇ ಆಗಿವೆ. ಇವುಗಳಲ್ಲಿ ನೃಪತುಂಗನ 'ವಿಭವದ ಪೆಂಪ'ನ್ನು ವರ್ಣಿಸಿದೆ. ಇವಕ್ಕೆ

---

'ಕಱಲ್ದು' ಪದ ಪ್ರಯೋಗಕ್ಕೆ ಔಚಿತ್ಯವಿಲ್ಲ. ಮೂಲಪ್ರತಿಯ 'ಫ' ಕಾರವು ತರುವಾಯದ ಪ್ರತಿಗಳಲ್ಲಿ ಲಿಪಿಕಾರನ ಭ್ರಮಾಜನ್ಯ ಪ್ರಮಾದದಿಂದ 'ತ್ರು' (ಅಥವಾ 'ತೃ') ಅಕ್ಷರವಾಗಿ ಪರಿಣಮಿಸಿರಬಹುದೆಂಬ ಎಣಿಕೆಯಿಂದ ಈಗಿನ ತಿದ್ದುಪಾಟನ್ನು ಸೂಚಿಸಿದೆ.

೭೨. ಈ ಸೂಚಿತ ಪಾಠಕ್ಕೆ ಪ್ರತಿಯಾಗಿ ಪಾಠಕರ ಮುದ್ರಣದಲ್ಲಿ 'ಗಣಗಣನೋತ್ತಂ ಸದಿಂ' ಎಂದೂ, ಮದ್ರಾಸು ಮುದ್ರಣದಲ್ಲಿ 'ಮಣಿಗಳ್ ಮಾರ್ತ್ತಾಂಕದಿಂ' ಎಂದೂ ಪಾಠಗಳಿವೆ. ಮೊದಲಪಾಠ ಮೇಲು ; ಎರಡನೆಯದರಲ್ಲಿ ಅರ್ಥಕ್ಲೇಶವಿದೆ. ಆದ್ದರಿಂದ, ಯಥಾಮತಿಯಾಗಿ ಯಥೋಚಿತವಾಗಿ ಈಗಿನ ತಿದ್ದುಪಾಟನ್ನು ಸೂಚಿಸಿದೆ.

ಹಿಂದಿನ – ೧೭೪ ರಿಂದ ೧೭೯ರ ವರೆಗಿನ – ಆರು ಪದ್ಯಗಳಲ್ಲಿ ಆತನ 'ಮನದ ಪೆಂಪ'ನ್ನು ವರ್ಣಿಸಿದೆಯೆಂದು ಊಹಿಸಿದರೆ ತಪ್ಪಾಗದು. ಈ ಎಲ್ಲ ಪದ್ಯಗಳೂ, 'ನಿದರ್ಶನಾಲಂಕಾರ'ದ ಲಕ್ಷ್ಯಗಳಂತೆ, ಮಾರ್ಗಕಾರನ ಸ್ವಂತ ರಚನೆಗಳಾದ್ದರಿಂದ ಈ ಊಹೆಗೆ ಹೆಚ್ಚಿನ ಅವಕಾಶವಿದೆ.
[ಪದ್ಯಗಳಲ್ಲಿನ ಅತಿಶಯೋಕ್ತಿಯನ್ನು ಬದಿಗಿಟ್ಟರೂ, ಅನೇಕ ಶತ್ರುಗಳನ್ನು ನೃಪತುಂಗನು ಗೆದ್ದು 'ವೀರನಾರಾಯಣ' ಎಂಬ ಬಿರುದಿಗೆ ಪಾತ್ರನಾಗಿದ್ದನು, ಶತ್ರುರಾಜರು ಅವನಿಗೆ ಆನೆಗಳನ್ನು ಕಾಣಿಕೆಯಾಗಿ ಕಳಿಸುತ್ತಿದ್ದರು – ಎಂಬ ಪದ್ಯಗಳ ತಾತ್ಪರ್ಯಾರ್ಥವು ಯಥಾರ್ಥವಾದ ಐತಿಹಾಸಿಕ ಸಂಗತಿ ಎಂದು ತಿಳಿಯಬಹುದು.]

## ೨೯. ಅಪಹ್ನುತಿ

ಪದ್ಯ ೧೮೨ : "ಅತಿಶಯವಾಗಿ ಕಾಣುವ ವಸ್ತುವಿನ ಯಥಾರ್ಥತೆಯನ್ನು ಮೆರೆಯಿಸಿ ('ವಸ್ತುವಿಷಯ ಪ್ರತೀತಿಯಂ ಮಱಸಿ'), ಇನ್ನೊಂದು ಅರ್ಥವನ್ನು ಮುಂದಿಟ್ಟು ಹೇಳುವುದು" ಅಪಹ್ನುತ್ಯಲಂಕಾರ. ('ಅಪಹ್ನುತಿರಪಹ್ನುತ್ಯ ಕಿಂಚಿದನ್ಯಾರ್ಥ ದರ್ಶನಂ' – 'ಕಾವ್ಯಾದರ್ಶ' II: ೩೦೪). ('ಅಪಹ್ನುತಿ' ಎಂಬ ಮಾತಿನ ಅರ್ಥವಾದರೂ 'ವಸ್ತುಸ್ಥಿತಿಯನ್ನು ಅಥವಾ ವಸ್ತುಜ್ಞಾನವನ್ನು ಮರೆಮಾಚುವುದು, ಇಲ್ಲವೆ ಅಲ್ಲಗಳೆಯುವುದು.)[೭೩]"

---

೭೩. 'ಅಪಹ್ನುತಿರಭೀಷ್ಟಾ ಚ ಕಿಂಚಿದಂತರ್ಗತೋಪಮಾ ।
ಭೂತಾರ್ಥಾಪಹ್ನವಾದಸ್ಯಾಃ ಕ್ರಿಯತೇ ಚಾಭಿಧಾ ಯಥಾ ॥
– ಕಾವ್ಯಾಲಂಕಾರ : III, ೨೧

(ಅಂತರ್ಗತವಾಗಿರುವ ಉಪಮೆಯನ್ನು ಎಂದರೆ ಸಾದೃಶ್ಯವನ್ನು ಬೇರೊಂದು ವಿಧದಲ್ಲಿ ತಿಳಿಯಪಡಿಸುವುದಕ್ಕಾಗಿ 'ಭೂತಾರ್ಥ'ವನ್ನು ಎಂದರೆ ಇದ್ದುದನ್ನು ಇಲ್ಲವೆನ್ನುವುದೇ – ಅಪಹ್ನವಮಾಡುವುದೇ – ಅಪಹ್ನುತಿ)

ದಂಡಿಯಾಗಲಿ, ಅವನನ್ನನುಸರಿಸಿರುವ ಮಾರ್ಗಕಾರನಾಗಲಿ, 'ವಸ್ತುವಿಷಯ'ದಲ್ಲಿ (ಎಂದರೆ, ಪ್ರಸ್ತುತವಾದ ಉಪಮೇಯದಲ್ಲಿ) ಉಪಮೆ ಅಂತರ್ಗತವಾಗಿರಬೇಕೆಂಬ ಅಭಿಪ್ರಾಯವನ್ನು ಹೊಂದಿಲ್ಲ. 'ತತ್ತ್ವಾಖ್ಯಾನೋಪಮೆ'ಯಲ್ಲಿಯೂ 'ತತ್ತ್ವಾಪಹ್ನವ ರೂಪಕ'ದಲ್ಲಿಯೂ (ನೋಡಿ 'ಕಾವ್ಯಾದರ್ಶ' – II, ೩೬ ಮತ್ತು ೯೫ ; ಕ.ರಾ. ಮಾರ್ಗ' – III, ೨೪ ಮತ್ತು ೭೬) ಉಪಮಾನಿಷ್ಠವಾದ ಅಪಹ್ನವವನ್ನು ಹೇಳಿರುವುದರಿಂದ, ಇಲ್ಲಿ ಸಾದೃಶ್ಯಸೂಚನೆ ಅಗತ್ಯವಿಲ್ಲವೆಂದು ಅವರು ಭಾವಿಸಿದ್ದಾರೆ. ('ಉಪಮಾಪಹ್ನುತಿಃ ಪೂರ್ವಮುಪಮಾ ಸ್ವೇವದರ್ಶಿತಾ.' – ದಂಡಿ : II ೩೦೯)

('ಅಪಹ್ನುತಿ'ಯಲ್ಲಿ ದಂಡಿ 'ವಿಷಯ ನಿಹ್ನುತಿ' ಮತ್ತು 'ಸ್ವರೂಪಾಪಹ್ನುತಿ' ಎಂದು ಎರಡು ಭೇದಗಳನ್ನು ಹೇಳಿರುವನು. ಮಾರ್ಗಕಾರನು, 'ಮೋಹಾಪೋಹ', 'ಧರ್ಮಾಪೋಹ' ಮತ್ತು 'ಗುಣಾಪೋಹ' ಎಂದು ಮೂರು ಭೇದಗಳನ್ನು ತಿಳಿಸಿದ್ದಾನೆ.)

ಪದ್ಯ ೧೮೩ : 'ಮೋಹಾಪೋಹ'ಕ್ಕೆ ಲಕ್ಷ್ಯ ; "ಶಶಿಗೆ ಎಂದುಂ ಅಮೃತಮಯ ಕಿರಣನೆಂಬುದುಂ ಶಿಶಿರಾಂಶುವೆಂಬುದುಂ ಅಮರದು (= ಸಲ್ಲದು) ; ಸಮನಿಸಿ, ವಿಷಕಿರಣನುಂ ಅನಲಮರೀಚಿಯುಂ ಎಂದೆನಲ್ಕೆ ಮೋಹಾಪೋಹಂ." ವಿರಹಾವಸ್ಥೆಯಲ್ಲಿರುವ ಪ್ರಣಯಿ, ಚಂದ್ರನ ಪ್ರಭಾವದಿಂದ ತನ್ನ ವಿರಹತಾಪ ಹೆಚ್ಚುತ್ತಿರಲು, "ಚಂದ್ರನ ಕಿರಣಗಳು ಅಮೃತಮಯವೂ ಅಲ್ಲ, ತಂಪಾದುವೂ ಅಲ್ಲ, ಅವು ವಿಷಮಯ ಹಾಗೂ ಬೆಂಕಿಯ ಜ್ವಾಲೆ'' ಎನ್ನುವ ಮಾತದು. ಇಲ್ಲಿ ಚಂದ್ರನ ಅಮೃತಮಯತೆಯನ್ನೂ ತಂಪಾದ ಗುಣವನ್ನೂ (ವಸ್ತು ಸ್ಥಿತಿಯನ್ನು) 'ಮರಸಿ' (ಅಲ್ಲಗಳೆದು), ಬೇರೆಯ ಗುಣಗಳನ್ನು (ವಿಷ ಮತ್ತು ಬೆಂಕಿ) ಅವನಿಗೆ ಆರೋಪಿಸಿದೆ.

ಪದ್ಯ ೧೮೪–೧೮೫ : ಇವೆರಡು ಪದ್ಯಗಳು ಧರ್ಮಾಪೋಹಕ್ಕೆ ಲಕ್ಷ್ಯಗಳು : (ಪದ್ಯ ೧೮೪): "ಮನಸಿಜನಾ ಅಂಬುಗಳ್ (= ಬಾಣಗಳು) ಕುಸುಮಂಗಳ್ (= ಹೂವಿನವು) ಎಂಬ ಮಾತದು ಪುಸಿ (= ಸುಳ್ಳು), ದಹನಮಯಂಗಳ್ (= ಸುಡುವ ಶಕ್ತಿಯಿಂದ ತುಂಬಿವೆ) ; (ಮನ್ಮಥನು ಪುಷ್ಪಬಾಣನು ಎಂಬ) ಜಸಂ ಅಟಿಯೆ (= ಯಶಸ್ಸು ನಾಶವಾಗಲು) ಎರ್ದೆಯಂ ಸುಡುವುವು, ಬಿಸಿಯವು" – ಎಂದು ಹೀಗೆ ಹೇಳಿದರೆ ಧರ್ಮಾಪೋಹ. (ಇಲ್ಲಿ ಮನ್ಮಥನ ಪುಷ್ಪಬಾಣಗಳ 'ಧರ್ಮ' ಸುಡದೆ ಮೃದುವಾಗಿರುವುದು ; (ಅದನ್ನು ಮರಸಿ, ಅದರ ಸ್ಥಾನದಲ್ಲಿ ಬಿಸಿಯವು' ಎಂಬ ಇನ್ನೊಂದು ಧರ್ಮವನ್ನು ಅವಕ್ಕೆ ಹೇಳಿದೆ).

(ಪ ೧೮೫): "ಸ್ಮರನ ಅಸ್ತ್ರಸಮಿತಿಯದು (= ಮನ್ಮಥನ ಬಾಣ ಸಮೂಹವು), ನಿರ್ಭರಂ (= ರಭಸದಿಂದ), ಅಂಗಮುಂ ಉರ್ಚಿಪೋಗೆಯಂ (= ಭೇದಿಸಿಕೊಂಡು ಹೋದರೂ) ಪೋಬಟೆಯಂ (= ಹೋದ ಮಾರ್ಗವನ್ನು) ದೊರೆಕೊಳಿಸಲಾಗದು (= ಹಿಡಿಯಲಾಗುವುದಿಲ್ಲ) ; ಅದಟಿಂ ಶರತತಿಯಲ್ತು". (ಇಲ್ಲಿ ಮನ್ಮಥ ಬಾಣಗಳ ಭೇದಿಸುವ ಶಕ್ತಿ ಅವುಗಳ ಧರ್ಮ; ಆದರೆ, ಆ ಶಕ್ತಿಯ

ಪರಿಣಾಮ ಗೋಚರವಾಗದ್ದರಿಂದ ಬಾಣಗಳನ್ನು ಬಾಣವಲ್ಲ ಎಂದು ಅಲ್ಲಗಳೆದಿದೆ).

ಪದ್ಯ ೧೮೬ : "ಸ್ಮರನ ಐದಂಬುಗಳ್ ಅಲ್ಲ ಇವು, ಶರಕೋಟಿಗಳ್ ; ಇಲ್ಲದಾಗಳ್ ಇಂತೀ ಲೋಕಾಂತರವರ್ತಿವಿರಹಿಗಣಮಂ (= ಲೋಕದಲ್ಲಿರುವ ವಿರಹಿಗಳ ಸಮುದಾಯವನ್ನು) ಮರ್ದಿಸವು ಅವು[೭೪] (= ಅವು ಪೀಡಿಸುತ್ತಿರಲಿಲ್ಲ); ನಿರುತಂ (= ನಿಶ್ಚಯ)". (ಇದು 'ಸುಗುಣಾಪೋಹ'ಕ್ಕೆ ಲಕ್ಷ್ಯ ಹೆಸರೇ ಸೂಚಿಸುವಂತೆ, ಮನ್ಮಥನ ಐದಂಬುಗಳ 'ಸುಗುಣ'ವನ್ನು – ಎಂದರೆ, ಪೀಡಿಸದಿರುವುದನ್ನು – ಇಲ್ಲವೆಂದು, ಅವುಗಳಲ್ಲಿ ಇಲ್ಲದ 'ಮರ್ದಿಸುವ ಗುಣ'ವನ್ನು ತಿಳಿಸಿದೆ).

## ೩೦. ರಸವದಲಂಕಾರ

ಪದ್ಯ ೧೮೭–೧೮೮ : "ಒಂಬತ್ತು ಬಗೆಯ ರಸಗಳು ಮನದಟ್ಟಾಗುವಂತೆ ನಿರೂಪಿಸುವ ವಚನವಿರಚನೆ" ರಸವದಲಂಕಾರ ಎಂದು ಹೇಳಿ, ಆ ಒಂಬತ್ತು ರಸಗಳನ್ನು ಹೆಸರಿಸಿ, ಹೆಚ್ಚಿನ ಲಕ್ಷಣ ವಿವರಣೆಯೇನೂ ಇಲ್ಲ.

[ಮಾರ್ಗಕಾರನು ಇಲ್ಲಿ ಒಂಬತ್ತು ರಸಗಳನ್ನು ಹೆಸರಿಸಿರುವುದು ಗಮನಾರ್ಹ; 'ಮಾರ್ಗದ್ವಿತಯ ಗತಿಗಳಂ ಬೆರಸಿ ಪೇೞ್ಗೆರಸವಿಶೇಷದೊಳ್' ಎಂದು ಹೇಳುವಾಗಲೂ ಅವನು ಒಂಬತ್ತು ರಸಗಳ ವಿಚಾರವನ್ನು ಪ್ರಸ್ತಾವಿಸಿರುವುದನ್ನು ಇಲ್ಲಿ ಸ್ಮರಿಸಬಹುದು. ಭರತಮುನಿ ತನ್ನ 'ನಾಟ್ಯಶಾಸ್ತ್ರ'ದಲ್ಲಿ ಎಂಟು ರಸಗಳನ್ನು ಮಾತ್ರ ಪ್ರತಿಪಾದಿಸಿದ್ದಾನೆ. ಆ ಗ್ರಂಥದ ಕೆಲವು ಮಾತೃಕೆಗಳಲ್ಲಿ ಶಾಂತರಸವನ್ನು ಹೇಳುವ ಭಾಗ ಪ್ರಕ್ಷಿಪ್ತವೆಂದು ವಿದ್ವಾಂಸರ ಮತ. 'ಅಷ್ಟರಸಾಶ್ರಯವಾದ ನಾಟಕಾಭಿನಯದ ಪ್ರಸಕ್ತಿ ಕಾಳಿದಸನ 'ವಿಕ್ರಮೋರ್ವಶೀಯ'ದಲ್ಲಿ ಬರುತ್ತದೆ. 'ಅಮರಕೋಶ'ದಲ್ಲಿಯೂ ಎಂಟೇ ರಸಗಳ ಉಲ್ಲೇಖವಿದೆ. ಮಾರ್ಗಕಾರನು ಬಹುಮಟ್ಟಿಗೆ ದಂಡಿಯನ್ನು ಅನುಸರಿಸಿರುನಷ್ಟೆ. ದಂಡಿ

---

೭೪. ಪಾಠಕರ ಪ್ರತಿಯಲ್ಲಿ, 'ಮರ್ದಿಸು(ವು)ವನೆ(ವೆ)ನೆ' ಎದು ತಿದ್ದುಪಡಿಯಿಂದ ಕೂಡಿದ ಪಾಠದಿಂದ ನಾವು '–ಸುವುವವೆನೆ' ಎಂಬ ಪಾಠವನ್ನು ಅಂಗೀಕರಿಸಿದ್ದಾಗಿದೆ. ಮದ್ರಾಸು ಪ್ರತಿಯಲ್ಲಿ 'ಮರ್ದಿಸುವವನೆನೆ' ಎಂದು ಪಾಠವಿದೆ. ಯಾವ ಪಾಠದಲ್ಲಿಯೂ ಅರ್ಥ ಸರಿಯಾಗಿ ಹೊಂದುವುದಿಲ್ಲ. ಆದ್ದರಿಂದ, 'ಮರ್ದಿಸವವುವೆನೆ' (ಮರ್ದಿಸವು + ಅವು + ಎನೆ) ಎಂದು ಅತ್ಯಲ್ಪವಾದ ಮಾರ್ಪಾಟು ಮಾಡಿಕೊಂಡರೆ ಮೇಲು.

ರಸವದಲಂಕಾರವನ್ನು ನಿರೂಪಿಸುವಲ್ಲಿ ದೃಷ್ಟಾಂತಪೂರ್ವಕ ರಸಗಳ ಹೆಸರುಗಳನ್ನು ಹೇಳಿದ್ದಾನೆ ; ಆದರೆ ಅವನು ಶಾಂತರಸದ ಹೆಸರನ್ನೂ ಎತ್ತಿಲ್ಲ. ಈಗ ತಿಳಿದುಬಂದಿರುವ ಮಟ್ಟಿಗೆ ಸಂಸ್ಕೃತ ವಾಙ್ಮಯದಲ್ಲಿ ಶಾಂತರಸದ ಉಲ್ಲೇಖ ಮೊಮ್ಮೊದಲಿಗೆ ಬಂದಿರುವುದು ಉದ್ಭಟನ 'ಕಾವ್ಯಾಲಂಕಾರ ಸಂಗ್ರಹ'ದಲ್ಲಿ ಭಾಮಹನನ್ನು ಅನುಸರಿಸಿರುವ ಉದ್ಭಟನ ಕಾಲ ಕ್ರಿ.ಶ.ಸು. ೭೭೬–೮೦೭ (ಎಂದರೆ ನೃಪತುಂಗನು ಪಟ್ಟಕ್ಕೇರುವುದಕ್ಕಿಂತ ಆರೇಳು ವರ್ಷ ಮುಂಚಿನದು). ಭಾಮಹನು ಕೂಡ 'ರಸಮದ್' ಅಂಲಕಾರದ ವಿಷಯವನ್ನು ಹೇಳುವಾಗ 'ರಸವದ್‌ದರ್ಶಿತ ಸ್ಪಷ್ಟಶೃಂಗಾರಾದಿರಸಂ' (ಶೃಂಗಾರಾದಿ ರಸಗಳು ಎಲ್ಲಿ ಸ್ಪಷ್ಟ ಗೋಚರಗಳೋ ಅಲ್ಲಿ 'ರಸವತ್' ಎಂಬ ಅಲಂಕಾರವಿರುವುದು') ಎಂದು ಒಟ್ಟಿನ ಮೇಲೆ ಹೇಳಿರುವೇ ಹೊರತು, ರಸಗಳ ಸಂಖ್ಯೆಯನ್ನಾಗಲಿ ಶಾಂತ ರಸದ ಹೆಸರನ್ನಾಗಲಿ ತಿಳಿಸಿಲ್ಲ. "ಉದ್ಭಟನ ನಿರೂಪಣೆಯನ್ನು ನೋಡಿಕೊಂಡು ಈತನು (ಎಂದರೆ, ಮಾರ್ಗಕಾರನು) ಬರೆದನೆಂದು ಹೇಳಲು ಸಾಕಾದಷ್ಟು ಆಧಾರವಿಲ್ಲ" ಎಂದೂ "ಶಾಂತರಸ'ದ ಚರಿತ್ರೆಯನ್ನು ನೆನೆದರೆ, ಇಲ್ಲಿ ಅದು ಹೊಸದಾಗಿ ಸೇರಿರುವುದಕ್ಕೆ ಈ ಗ್ರಂಥಕಾರನು ಜೈನನಾಗಿದ್ದುದರ ಕಾರಣವಾಗಿರಬಹುದೆನ್ನಿಸುತ್ತದೆ'' ಎಂದೂ ಪ್ರೊ ತೀ.ನಂ.ಶ್ರೀ. ಅಭಿಪ್ರಾಯಪಟ್ಟಿದ್ದಾರೆ. (ಭಾ. ಕಾ. ಮೀ., ಮೊದಲ ಮುದ್ರಣ : ಪು. ೪೪೧). ಮಾರ್ಗಕಾರನು ಜೈನನಾಗಿದ್ದುದರ ಜೊತೆಗೆ, ಕ್ರಿ.ಶ. ೫ನೆಯ ಶತಮಾನದ 'ಅನುಯೋಗ ದ್ವಾರ ಸೂತ್ರ'ವೆಂಬ ಪ್ರಾಕತ ಜೈನಧರ್ಮ ಗ್ರಂಥವನ್ನು ಈ ವಿಚಾರದಲ್ಲಿ ಅನುಸರಿಸಿರಬಹುದೆಂದು ಊಹಿಸಬಹುದಾಗಿದೆ. ಈ ಗ್ರಂಥದಲ್ಲಿ 'ಶಾಂತರಸ'ವನ್ನು 'ಪ್ರಶಾಂತ'

---

೭೫. "ಪ್ರಾಕೃತದಲ್ಲಿ ರಚಿತವಾಗಿರುವ 'ಅಣು ಓಗದಾರಸುತ್ತ' (= ಅನುಯೋಗದ್ವಾರ ಸೂತ್ರ) ವೆಂಬ ಜೈನಧರ್ಮ ಗ್ರಂಥದಲ್ಲಿ ಹೇಳಿರತಕ್ಕ ಒಂಬತ್ತು ಕಾವ್ಯರಸಗಳೊಳಗೆ 'ಪ್ರಸಂತ' (= ಪ್ರಶಾಂತ)ವು ಸೇರಿದೆಯಲ್ಲದೆ, ಅದರ ಲಕ್ಷ್ಯಲಕ್ಷಣಗಳೂ ಸಂಕ್ಷಿಪ್ತರವಾಗಿ ಬಂದಿವೆ. ಈ 'ಪ್ರಶಾಂತ'ವೂ ನಮ್ಮ 'ಶಾಂತ'ವೂ ಒಂದೇ ಎಂಬುದರಲ್ಲಿ ಸಂಶಯವಿಲ್ಲ. 'ಅನುಯೋಗದ್ವಾರ ಸೂತ್ರ'ದ ಕಾಲವು ಬಹುಶಃ ಕ್ರಿ.ಶ. ೫ನೆಯ ಶತಮಾನವಾಗಿರಬಹುದೆಂದು ವಿದ್ವಾಂಸರು ಭಾವಿಸುತ್ತಾರೆ. ಇದು ದಿಟವಾಗಿದ್ದಲ್ಲಿ, ಶಾಂತರಸದ ವಿಚಾರವನ್ನು ಮೊದಲು ಎತ್ತಿದ ಕೀರ್ತಿ ಈ ಗ್ರಂಥದ ಕರ್ತೃವಿಗೆ ಸಲ್ಲಬೇಕಾಗುತ್ತದೆ". (V. Raghavan : Number of Rasas, pp ૭೩, ೫೭–೮ ನೋಡಿ – ಭಾ. ಕಾ. ಮೀ. ಪು. ૭೮ರಲ್ಲಿನ ಅಡಿ ಟಿಪ್ಪಣಿ.)

ಎಂಬ ನಾಮಾಂತರದಿಂದ ಕರೆದಿದೆ.[೨೫] ಮಾರ್ಗಕಾರನು ಗುಣವಿಶಿಷ್ಟ ವಚನವಿರಚನೆಯನ್ನು 'ರಸವಿಶೇಷದೊಳ್ ಬೆರಸಿಪೇಟ್ಗೆ' ಎಂದು ರಸದ್ಯೋತಕ ವಚನ ವಿರಚನೆಯನ್ನು ವಿವರಿಸುವಾಗ, 'ಪ್ರಸನ್ನ ಗಂಭೀರತರೋಕ್ತಿಯಿಂ ಪ್ರಕಟಮಕ್ಕೆ ರಸಂ ಸತತಂ ಪ್ರಶಾಂತದಂ' ಎಂದು ಹೇಳಿ 'ಶಾಂತ'ವನ್ನು 'ಪ್ರಶಾಂತ' ಎಂದು ಹೆಸರಿಸಿರುವುದು ಈ ಊಹೆಗೆ ಬೆಂಬಲ ನೀಡುತ್ತದೆ. (II–೯೮, ೯೯ ; ಈ ಪದ್ಯಗಳ ಮೇಲಿನ ಟಿಪ್ಪಣಿಯನ್ನೂ ನೋಡಿ.) (ಪದ್ಯದ ಛಂದಸ್ಸಿನ ನಿರ್ಬಂಧಕ್ಕೆ ಒಳಗಾಗಿ ಹೀಗೆ ಪದಪ್ರಯೋಗ ಮಾಡಿರಬಹುದು ಎಂಬ ಆಕ್ಷೇಪಕ್ಕೂ ಅವಕಾಶವಿದೆ)]

ದಂಡಿ ರಸವದ್‌ರಸಪೇಶಲಂ' ('ರಸಮಯವಾಗಿ ಕೋಮಲವಾಗಿರುವುದು ರಸವದಲಂಕಾರ') ಎಂದಿಷ್ಟೇ ಹೇಳಿ (II – ೨೭೫) ಮುಂದೆ ಸಾಗಿ, ರಸವದಲಂಕಾರದ ಕೆಲವು ದೃಷ್ಟಾಂತಗಳನ್ನು ಕೊಟ್ಟು–

ವಾಚ್ಯಸ್ಯಗ್ರಾಮ್ಯತಾಯೋನಿರ್ಮಾಧುರ್ಯೇ ದರ್ಶಿತೋ ರಸಃ

ಇಹ ತ್ವಷ್ಟ ರಸಾಯತ್ತಾ ರಸವತ್ತಾ ಸ್ಮೃತಾ ಗಿರಾಂ ॥ – II–೨೯೨

('ಮಾಧುರ್ಯಗುಣದಲ್ಲಿ ಕಂಡುಬರುವ ಮಾತಿನ ರಸವು ಅಗ್ರಾಮತೆಯಲ್ಲಿಯೆ ಜನ್ಮತಾಳುತ್ತದೆ ; ಆದರೆ, ಇಲ್ಲಿ ಅಷ್ಟರಸಾಯತ್ತವಾದ ನಿರೂಪಣೆಯೆ ರಸವದ್ ಅಲಂಕಾರ')

– ಎಂದು ಹೇಳಿ ರಸವದಲಂಕಾರ ನಿರೂಪಣೆಯನ್ನು ಮುಗಿಸಿದ್ದಾನೆ. ಮಾರ್ಗಕಾರನು 'ಗುಣ'ಗಳಿಗೆ ರಸಪರತ್ವವನ್ನು ಹೇಳುವ ಕಲ್ಪನೆಗೆ ಇಲ್ಲಿ ಸೂಚನೆ ಇರುವಂತೆ ಕಂಡುಬರುತ್ತದೆ. ಗುಣವು ರಸವ್ಯಂಜಕವಾಗಬಲ್ಲದೆಂದು ಮಾರ್ಗಕಾರನ ಅಭಿಪ್ರಾಯ ಎಂದು ಗ್ರಹಿಸಬಹುದು. (ಎಂದರೆ, ಅಲ್ಲಿ ರಸವು ವ್ಯಂಗ್ಯವಾದಂತಾಯಿತು). ದಂಡಿಯ ದೃಷ್ಟಿಯಲ್ಲಿ ಇದು 'ರಸವದಲಂಕಾರ'ವಲ್ಲ. ಗುಣಾಶ್ರಿತವಾಗಿರದೆ, 'ರಸಮಯವಾಗಿರುವ ವಚನ'ವೆ 'ರಸವದಲಂಕಾರ.' ಲಕ್ಷ್ಯ ಪದ್ಯಗಳಲ್ಲಿಯೂ 'ರಸವದ್ವಚಃ', 'ರಸವತ್ತ್ವಂಗಿರಾಂ' ಎಂಬ ಉಕ್ತಿಗಳು ಬರುತ್ತವೆ. ಇವನ್ನೆಲ್ಲ ಅನುಲಕ್ಷಿಸಿಯೇ ಮಾರ್ಗಕಾರನು, 'ಇಹತ್ವಷ್ಟರಸಾಯತ್ತಾ ರಸವತ್ತಾ ಸ್ಮೃತಾಗಿರಾಮ್' ಎಂಬ ದಂಡಿಯ ವಾಕ್ಯವನ್ನೇ 'ನವವಿಧರಸಂಗಳಂ ಮನಕೆ ವರೆ ನಿರೂಪಿಸುವ ವಚನವಿರಚನೆ' ಎಂದು ಸ್ಫುಟಗೊಳಿಸಿ 'ಅಷ್ಟರಸ'ವನ್ನು 'ನವರಸ'ವಾಗಿ

ಮಾಡಿದ್ದಾನೆ.[೭೬]

ಪದ್ಯ ೧೮೯ : ವೀರರಸಕ್ಕೆ ದೃಷ್ಟಾಂತವಾದ ಈ ಲಕ್ಷ್ಯ ಪದ್ಯವು ಮಾರ್ಗಕಾರನ ಸ್ವಂತ ರಚನೆ ; ರಾಮಾಯಣ ಕಥಾ ಸಂದರ್ಭಕ್ಕೆ ಸಂಬಂಧ ಪಟ್ಟಿದೆ. 'ಕಾವ್ಯಾದರ್ಶ'ದಲ್ಲಿ ವೀರರಸದ ಲಕ್ಷ್ಯಲಕ್ಷಣ ಸಮನ್ವಯ ಹೀಗಿದೆ.

"ಅರ್ಣಯುಕ್ತನಾದ ಉರ್ವಿಯನ್ನು ಗೆಲ್ಲದೆ, ವಿವಿಧ ಯಜ್ಞಗಳನ್ನು ಮಾಡದೆ, ಅರ್ಥಿಗಳಿಗೆ ಅರ್ಥವನ್ನು ದಾನಮಾಡದೆ, ನಾನು ಹೇಗೆ ಪಾರ್ಥಿವನಾಗಬಲ್ಲೆ? ಹೀಗೆ, ರಾಜನ ಉತ್ಸಾಹವು ಉತ್ಕರ್ಷವನ್ನು ಹೊಂದಿ ವೀರರಸದಲ್ಲಿ ನೆಲಸಿ, ಈ ವಚನಗಳ ರಸವತ್ತ್ವವನ್ನು ಸಮರ್ಥಿಸುತ್ತಿವೆ." (ಕಾವ್ಯಾದರ್ಶ, II ೨೮೪, ೨೮೫). (ಉತ್ಸಾಹವು ವೀರರಸದ ಸ್ಥಾಯಿಭಾವ ಎಂದು ಇಲ್ಲಿ ಸ್ಪಷ್ಟವಾಗಿ ಸೂಚಿತವಾಗಿದೆ).

ಪದ್ಯ ೧೯೦ : ಅದ್ಭುತ ರಸದ ದೃಷ್ಟಾಂತ. ಇದೂ ಮಾರ್ಗಕಾರನ ಸ್ವಂತ ಲಕ್ಷ್ಯಪದ್ಯ. ರಾಮಾಯಣ ಕಥೆಗೇ ಸಂಬಂಧಪಟ್ಟಿದೆ. ದಂಡಿಯದು ಬೇರೆಯ ತೆರನಾಗಿದೆ :

"ಈ ನಂದನ ವೃಕ್ಷಗಳ ನನೆಕೊನೆಗಳೇ ಅವುಗಳ ತೊಡಪು ; ಪುಷ್ಪಗಳೇ ಹಾರಾದಿ ಭೂಷಣಗಳು ; ಕೊಂಬೆಗಳೇ ಮಂದಿರಗಳು ; ಇದು

---

೭೬. ಭಾಮಹನಾಗಲಿ ದಂಡಿಯಾಗಲಿ ರಸಕ್ಕೆ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಟ್ಟಿಲ್ಲ. ತಮಗಿಂದ ಹಿಂದೆ ಭರತನು ರಸತತ್ತ್ವ ನಿರೂಪಣೆಯನ್ನು ವಿಸ್ತಾರವಾಗಿ ಮಾಡಿರುವುದರಿಂದಲೂ, ಶ್ರವ್ಯಕಾವ್ಯಕ್ಕಿಂತ ದೃಶ್ಯಕಾವ್ಯಕ್ಕೆ ಅದು ಹೆಚ್ಚು ಸಂಬಂಧಪಟ್ಟದ್ದೆಂದು ಅವರು ಭಾವಿಸಿರಬಹುದಾದ್ದರಿಂದಲೂ ತಮ್ಮ ಕಾವ್ಯಮೀಮಾಂಸೆಯಲ್ಲಿ ಅವರು ರಸವಿಚಾರಕ್ಕೆ ಪ್ರಾಮುಖ್ಯವನ್ನು ಕೊಡಲಿಲ್ಲವೆಂದು ಕಾಣುತ್ತದೆ. ಅವರಿಗೆ ರಸತತ್ತ್ವದ ಕಲ್ಪನೆಯೇ ಇರಲಿಲ್ಲವೆಂದಾಗಲಿ, ಇದ್ದರೂ ಶ್ರವ್ಯಕಾವ್ಯಕ್ಕೆ ಅದು ಅನ್ವಯಿಸತಕ್ಕದ್ದಲ್ಲವೆಂದಾಗಲಿ, ಆದ್ದರಿಂದಲೇ ಅವರು ರಸವನ್ನು ಲಂಕಾರ ಮಾಲಿಕೆಯಲ್ಲಿ ಸೇರಿಸಿದರು ಎಂದು ತೀರ್ಮಾನಿಸುವುದಾಗಲಿ ಅಷ್ಟು ಸಮಂಜಸವೆನಿಸದು. ನವೀನಾಲಂಕಾರಿಕರ ಪ್ರಕಾರ ರಸವು ವಾಚ್ಯವಲ್ಲ, ವ್ಯಂಗ್ಯ ; ಆದ್ದರಿಂದ, ಅದು ಅಲಂಕಾರ್ಯವಾಗಬಹುದೇ ಹೊರತು ಅಲಂಕಾರವಲ್ಲ ಎಂದು ಅವರ ಸಿದ್ಧಾಂತ. (ಈ ಸಂಬಂಧದ ವಿವೇಚನೆಯನ್ನು ಇಲ್ಲಿ ಬೆಲಸುವುದು ಅನಾವಶ್ಯಕವೆಂದು ತೋರುತ್ತದೆ. ಈ ವಿಚಾರದಲ್ಲಿ ಆಸಕ್ತಿಯುಳ್ಳವರು ಪ್ರೊ॥ ತೀ. ನಂ. ಶ್ರೀ.ಯವರ 'ಭಾರತೀಯ ಕಾವ್ಯಮೀಮಾಂಸೆ'ಯ ರಸಪ್ರಕರಣವನ್ನೂ, ಡಾ॥ ಕೆ.ಕೃಷ್ಣಮೂರ್ತಿ ಯವರ 'ಕನ್ನಡ ಕಾವ್ಯಾಲಂಕಾರದ ಮುನ್ನುಡಿ ಹಾಗೂ 'ಕನ್ನಡ ಧ್ವನ್ಯಾಲೋಕ'ವನ್ನೂ ಪರಿಶೀಲಿಸಬಹುದು.) ಅದು ಹೇಗಿದ್ದರೂ, ಭಾಮಹನಿಗಿಂತ ದಂಡಿಯೂ, ದಂಡಿಗಿಂತ ಮಾರ್ಗಕಾರನೂ ರಸವಿಚಾರದಲ್ಲಿ ಹೆಚ್ಚಿನ ಗಮನ ಹರಿಸಿದ್ದಾರೆಂಬುದು ಸ್ಪಷ್ಟ.

ಆಶ್ಚರ್ಯಕರ !' (II–೨೯೦) (ಆಶ್ಚರ್ಯಭಾವವು ಅದ್ಭುತದ ಸ್ಥಾಯೀ ಎಂಬ ಸೂಚನೆಯಿಲ್ಲಿದೆ).

ಪದ್ಯ ೧೯೧ : ಕರುಣಾರಸಕ್ಕೆ ಮಾರ್ಗಕಾರನು ಕೊಟ್ಟಿರುವ ಈ ಸ್ವಂತ ಲಕ್ಷ್ಯವು ರಾಮಾಯಣ ಕಥೆಗೆ ಸಂಬಂಧಪಟ್ಟಂತೆ ಕಾಣುವುದಿಲ್ಲ. ಆದರೂ, ಸೀತಾದೇವಿಯ ವಿರಹಾವಸ್ಥೆಯನ್ನು ಹನುಮಂತನು ರಾಮನಿಗೆ ವರ್ಣಿ ವರ್ಣಿಸುತ್ತಿರುವನೆಂದು ಊಹಿಸಿದರೆ ತಪ್ಪಾಗದು. ದಂಡಿಯ ಲಕ್ಷ್ಯಲಕ್ಷಣ ಸಮನ್ವಯ ಹೀಗಿದೆ :

"ಎಲೌ ದೇವಿ ! ಕುಸುಮಶಯ್ಯೆ ಕೂಡ ನಿನ್ನ ಕೋಮಲಾಂಗಕ್ಕೆ ನೋವನ್ನುಂಟುಮಾಡುತ್ತಿತ್ತು ; ಈಗ ಅದು ಹೇಗೆ ತಾನೆ ಜ್ವಾಲಾಮಯವಾದ ಈ ಚಿತೆಯ ಮೇಲೆ ಮಲಗಿರುವೆ ? ಹೀಗೆ ಉದ್ರಿಕ್ತವಾದ ಕಾರುಣ್ಯ (ರಸವದ್) ಅಲಂಕಾರವೆಂದು ಪರಿಗಣಿಸಲ್ಪಟ್ಟಿದೆ." (II, – ೨೮೬ – ೮೭).

ಪದ್ಯ ೧೯೨ : ಶೃಂಗಾರರಸಕ್ಕೆ ಲಕ್ಷ್ಯವಾದ ಈ ಸ್ವಂತ ಲಕ್ಷ್ಯ ಪದ್ಯದಲ್ಲಿ ಶೃಂಗಾರರಸಕ್ಕೆ ಸ್ಥಾತಿಯಾದ 'ರತಿ'ಯನ್ನು ಸೂಚಿಸುವ 'ಅನುಭಾವ'ಗಳನ್ನು ಕವಿ ವರ್ಣಿಸಿದ್ದಾನೆ. ದಂಡಿಯ ಲಕ್ಷಣ ಸಮನ್ವಯದಿಂದ ಕೂಡಿದ ಲಕ್ಷ್ಯವು ವಾಸವದತ್ತೆಯ ಕಥೆಗೆ ಸಂಬಂಧಿಸಿದ್ದು, ಮನೋಹರವಾಗಿದೆ: "ಯಾರನ್ನು ಮೃತಳೆಂದು ತಿಳಿದು, ಅವಳನ್ನು ಸೇರಬಯಸಿ, ನಾನೇ ಮರಣ ಹೊಂದಬಯಸಿದೆನೋ – ಆ ಅವಂತೀ ರಾಜಪುತ್ರಿ ಅದು ಹೇಗೆ ನನಗೆ ಲಭಿಸಿದಳು? ಅದೂ ಈ ಜನ್ಮದಲ್ಲಿ? (ಈ ಹಿಂದೆ ನಿದರ್ಶನಪಡಿಸಿದ್ದು ಪ್ರೀತಿ ಅಥವಾ ಪ್ರೇಯು); ಇದು ರೂಪಬಾಹುಲ್ಯದಿಂದಾಗಿ ("Intensity of manifestation") ಶೃಂಗಾರವಾಗಿ ಪರಿಣಮಿಸಿರುವ ರತಿ ; ರಸವದ್ ಉಕ್ತಿಗೆ ಇದು ನಿದರ್ಶನ" (II– ೨೮೦, ೨೮೧).

ಪದ್ಯ ೧೯೩ : ಭೇತಾಳಗಳ ವಿಕಟನರ್ತನದ ವರ್ಣನೆಯ ಈ ಲಕ್ಷ್ಯ ಮಾರ್ಗಕಾರನ ಸ್ವಂತರಚನೆ. 'ಭಯಾನಕ' ರಸದ ಸ್ಥಾಯಿಯಾದ ಭಯಹುಟ್ಟಿಸುವ ಭಾವ ಇಲ್ಲಿ ಶಕ್ತಿಪೂರ್ಣವಾಗಿ ವರ್ಣಿತವಾಗಿದೆ. ದಂಡಿಯ ಲಕ್ಷ್ಯ ಬೇರೆಯ ತೆರನಾಗಿದೆ.

"ಇದು ಇಂದ್ರನ ವಜ್ರಾಯುಧ ; ಅದರ ಅಲಗಿನ ಧಾರೆಯಲ್ಲಿ ಅಗ್ನಿ ಸಂನಿಹಿತ ; ಅದರ ಸ್ಮರಣ ಮಾತ್ರದಿಂದ ದೈತ್ಯಸ್ತ್ರೀಯರ

ಗರ್ಭಪಾತವಾಗುವುದು".

ಪದ್ಯ ೧೯೪ : ಮಾರ್ಗಕಾರನ ಸ್ವಂತ ಲಕ್ಷ್ಯವಾದ ಇದರಲ್ಲಿ ರಾಮನ ಕ್ರೋಧಕವಚದಿಂದ ಕೂಡಿದ ಪ್ರತಿಜ್ಞೆ ವರ್ಣಿತವಾಗಿದೆ. ಇದು ರಾಮಾಯಣಕಥಾ ಸನ್ನಿವೇಶಕ್ಕೆ ಸಂಬಂಧಪಟ್ಟಿದ್ದರೆ, ದಂಡಿಯದು ಭಾರತಕಥಾಸನ್ನಿವೇಶಕ್ಕೆ ಸಂಬಂಧಪಟ್ಟಿದೆ. ದಂಡಿಯ ಲಕ್ಷ್ಯ : "ಕೃಷ್ಣೆಯ ಕೇಶವನ್ನು ಹಿಡಿದೆಳೆದ ಆ ಪಾಪಿ ದುಶ್ಯಾಸನನು ಈಗ ನನ್ನ ಮುಂದಿರುವವನು ; ಅವನು ಇನ್ನು ಒಂದು ಕ್ಷಣವಾದರೂ ಬದುಕಿರಬಲ್ಲನೆ?" – ಇಲ್ಲಿ ತನ್ನ ಶತ್ರುವನ್ನು ಕಂಡ ಭೀಮನ ಕ್ರೋಧವು ಪರಾಕೋಟಿಯನ್ನು ಮುಟ್ಟಿದೆ; ಹೀಗೆ, ಇದು ರಸವದ್ ವಚನ". (II– ೨೮೨, ೨೮೩) (ರೌದ್ರದ ಸ್ಥಾಯಿ ಕ್ರೋಧ).

ಪದ್ಯ ೧೯೫ : ಭೀಭತ್ಸದ ಲಕ್ಷ್ಯ. ಪದ್ಯದ ಅರ್ಥ : "(ಮನುಷ್ಯನ) ಮೆಯ್, ನವವಿವರಾವೃತ ಪೂತಿದ್ರವ (= ನವದ್ವಾರಗಳಲ್ಲಿ ತುಂಬಿದ ಕೀವು), (ಮತ್ತು) ತ್ವಗಾವೃತವಿಮಿಶ್ರಮಾಂಸ (= ಆವರಿಸಿಕೊಂಡಿರುವ ಚರ್ಮದೊಂದಿಗೆ ಬೆರೆತ ಮಾಂಸ), (ಇವುಗಳಿಂದ) ಉಪಚಿತಂ (= ಒಟ್ಟುಗೂಡಿರುವಂಥದು); ಅಧ್ರುವಂ (= ಅಶಾಶ್ವತವಾದದ್ದು) ; ಅಸುಚಿತ್ರಭ್ರಮಿತ ಅಸ್ಥಿವಹಂ (= ಹಿತಕರವಾದದ್ದೆಂಬ ಭ್ರಮೆಯನ್ನು ಹುಟ್ಟಿಸದ ಮೂಳೆಗಳನ್ನು ಹೊತ್ತಿರತಕ್ಕದ್ದು) ; ಬಗೆವೊಡೆ ಇಂತು ಆದಂ ಕಿಸುಗುಳಂ (= ವಿಚಾರ ಮಾಡಿದರೆ, ಈ ರೀತಿಯಲ್ಲಿ ವಿಶೇಷವಾಗಿ ಹೇಯವಾದ ಪದಾರ್ಥ)."

ದಂಡಿ ಲಕ್ಷ್ಯ : "ನಿನ್ನ ಶತ್ರುಗಳ ರಕ್ತವನ್ನು ಪಾಣಿ ಸಂಪುಟಗಳಲ್ಲಿ ಕುಡಿಕುಡಿದು ಕರುಳುಗಳನ್ನೇ ಒಡವೆಯಾಗಿ ಧರಿಸಿಕೊಂಡು ಅವರ ಮುಂಡಗಳೊಡನೆ ಈ ರಣಪಿಶಾಚಗಳು ನರ್ತಿಸುತ್ತಿವೆ".

ಪದ್ಯ ೧೯೬ : ಮಾರ್ಗಕಾರ, ದಂಡಿ–ಇವರಿಬ್ಬರ ಲಕ್ಷ್ಯಗಳಲ್ಲಿಯೂ ಕಾಮುಕ ಸ್ತ್ರೀಯ ಹಾಸ್ಯಾಸ್ಪದ ವರ್ತನೆ ವರ್ಣಿತವಾಗಿದೆ. ಆದರೆ ಎರಡಕ್ಕೂ ಬಹಳ ವ್ಯತ್ಯಾಸವಿದೆ. ಮಾರ್ಗಕಾರನ ಲಕ್ಷ್ಯದಲ್ಲಿ, ತನ್ನ ಪತಿಯೊಡನೆ ನೆರೆಯುವ ವೇಳೆಯಲ್ಲಿ ಪರ ಪುರುಷನೊಡನೆ ತಾನು ಆ ಮುನ್ನ ಭೋಗಿಸಿದ್ದನ್ನು ಮರೆಯಲು ಯತ್ನಿಸಿದ ಅಭಿಸಾರಿಕೆ'ಯ ನಗೆಗೀಡಾಗುವ ಸಂದರ್ಭವನ್ನು ವರ್ಣಿಸಿದೆ. ದಂಡಿಯ ಲಕ್ಷ್ಯದಲ್ಲಿ, ಒಬ್ಬಳು ತನ್ನ ಗೆಳತಿಯ ಮೈಮೇಲಿನ ಪುರುಷನಖಕ್ಷತವನ್ನು ಕಂಡು, ಅತಿ ಮಾನವತಿಯೆ, ಅದನ್ನು

ಉತ್ತರೀಯದಿಂದ ಮರೆಮಾಡಿಕೋ' ಎಂದು ಬೇಡಿಕೊಳ್ಳುವ ಸನ್ನಿವೇಶ ವರ್ಣಿತವಾಗಿದೆ. (ಇಲ್ಲಿ, 'ಮಾನವತಿ' ಎಂಬ ಪದ ಪ್ರಯೋಗ ಅರ್ಥಪೂರ್ಣವಾಗಿದೆ. ಮಾನವತಿಯು ಮಾನಗೆಟ್ಟನಡತೆ ಹಾಸ್ಯಾಸ್ಪದವಲ್ಲದೆ?)

ಪದ್ಯ ೧೯೭ : ಶಾಂತರಸಕ್ಕೆ ಕೊಟ್ಟಿರುವ ಈ ಲಕ್ಷ್ಯ ಮಾರ್ಗಕಾರನ ಸ್ವಂತ ರಚನೆ :

"[ಮಿಗೆರ]ಣದೊಳ್ ಪರಿಚಿತ [ಮಾ] ದ್ವಿಗುಣಂ (= ರಜೋಗುಣ ಮತ್ತು ತಮೊಗುಣ)[೭೭]," ಅದು ಓರಂತೆ (= ಒಂದೇ ಸಮನಾಗಿ) ಮಟ್ಟಮಿರ್ದುದು (= ತನ್ನ ಮೂಲಸ್ವರೂಪದಲ್ಲಿಯೆ ಇದೆ) ; ಮತ್ತಂ, ವಿಗತವಿಕಾರಾಕಾರಂ ಶಾಂತಧಾರಂ (= ಶಾಂತಗುಣಕ್ಕೆ ನೆಲೆಯಾದ, ಯಾವ ವಿಕಾರವನ್ನೂ ಹೊಂದದ), ನಿನ್ನ ರೂಪು, ಸೊಗಯಿಸುಗು." (= 'ರಣರಂಗದಲ್ಲಿ ಕ್ಷಾತ್ರವನ್ನು ಮೆರೆದು, ಕ್ಷಾತ್ರಗುಣವನ್ನು ಮೆರೆಯುವ ಆಕಾರವನ್ನು ಹೊಂದಿದ್ದರೂ ಕೂಡ ನಿನ್ನ ರೂಪು ಶಾಂತ ಸ್ವಭಾವಕ್ಕೆ ನೆಲೆಯಾಗಿದೆ' – ಎಂದು ಒಬ್ಬ ರಾಜನನ್ನು ಈ ಪದ್ಯದಲ್ಲಿ ವರ್ಣಿಸಿದೆ. ಇದು ನೃಪತುಂಗನನ್ನು ಸ್ತುತಿಸುವ ಪದ್ಯವಾಗಿದ್ದರೂ ಆಗಿರಬಹುದು.)

## ೩೧. ಊರ್ಜಿತ

ಪದ್ಯ ೧೯೮ : "ಊರ್ಜಸ್ವಿ ರೂಢಾಹಂಕಾರಂ" ಎಂದು ದಂಡಿ 'ಊರ್ಜಸ್ವಿ' ಎಂಬ ಅಲಂಕಾರದ ಬಗೆಗೆ ಸಂಗ್ರವಾಗಿ ಹೇಳಿರುವುದನ್ನೇ "ಆರೂಡ ನಿಜ ಮನೋಹಂಕಾರಕಾರೋತ್ಕರ್ಷ ಪ್ರಕಾಶಂ ಊರ್ಜಿತ" ಎಂದು ಮಾರ್ಗಕಾರನು ವಿಸ್ತರಿಸಿ ಹೇಳಿದ್ದಾನೆ. ('ಊರ್ಜಸ್ವಿ'ಯನ್ನೇ ಮಾರ್ಗಕಾರನು 'ಊರ್ಜಿತ' ಎಂದು ಕರೆದಿದ್ದಾನೆ. 'ಕಾವ್ಯಾ ದರ್ಶ'ದ ಲಕ್ಷಣ ಶ್ಲೋಕದಲ್ಲಿ 'ತೇಜಸ್ವಿ' ಎಂಬ ಪಾಠವೂ ಇದೆ. (ಪ್ರೊ. ಎನ್.ಕೆ. ಬೆಳವಳಕರ್ ಅವರ ಮುದ್ರಣ : II – ೨೭೫ ; ಪು. ೨೬). ಭಾಮಹನು

---

೭೭. ಪಾಠಕರ ಪ್ರತಿಯಲ್ಲಿ '...ಣದೊಳ ಪರಿಚಿತಮಂ ದ್ವಿಗುಣಂ' ಎಂದಿದೆ. ಮೊದಲಿನ ಮೂರು ಅಕ್ಷರಗಳು ಲಪ್ತವಾಗಿವೆ. ಮದ್ರಾಸು ಮುದ್ರಣದ ಸಂಪಾದಕರು, '(ಮೃಗಗ) ಣದೊಳ್...' ಎಂದು ಲುಪ್ತಪಾಠವನ್ನು ಊಹಿಸಿ ಸೇರಿಸಿದ್ದಾರೆ. ಹಾಗಿದ್ದರೂ ಅರ್ಥಕ್ಲೇಷವು ಕಂಡು ಬಂದದ್ದರಿಂದ, ನಮಗೆ ಹೊಳೆದಂತೆ ಲುಪ್ತಪಾಠವನ್ನು ಊಹಿಸಿ ಸೇರಿಸಿ, ಒಂದು ಸಣ್ಣ ತಿದ್ದು ಪಾಟನ್ನು ಮಾಡಿರುತ್ತೇವೆ.

ದೃಷ್ಟಾಂತವನ್ನು ಮಾತ್ರ ಕೊಟ್ಟಿದ್ದಾನೆ.) ಒಬ್ಬ ವ್ಯಕ್ತಿಯ ಆತ್ಮಾಭಿಮಾನದ ಹೆಚ್ಚಳವನ್ನು ಪ್ರಕಾಶಗೊಳಿಸುವುದು 'ಊರ್ಜಿತಾಲಂಕಾರ'ದ ಲಕ್ಷಣ.

ಪದ್ಯ ೧೯೯ : 'ಊರ್ಜಿತ'ದ ಈ ಲಕ್ಷ್ಯ ದಂಡಿಯದನ್ನು ಸ್ವಲ್ಪಮಟ್ಟಿಗೆ ಹೋಲುತ್ತದೆ. ಪದ್ಯದ ಅರ್ಥ : "ಕೊಲ್ಲೆಂ, ಬಿಸುಡು ಆಯುಧಮಂ ; ಪುಲ್ಲಂ ಕರ್ಚು; ಏಱು ಪುತ್ತಂ ; ಎನ್ನ ಅಡಿಗೆಱಗು; ಇದಿರಿಂದ ನಿಲ್ಲದೆ ತೊಲಗು ; ಅಂತಲ್ಲದೊಡೆ, ನೀನೀಗಳ್ ಎಱಿಂ ಆರ್ದು (= ಗರ್ಜಿಸಿ, ಸಿಂಹನಾದ ಮಾಡಿ), ಕೈದುಗೆಯ್ (= ಆಯುಧವನ್ನು ಹಿಡಿದು ಹೋರಾಡು)". (ಬಾಯಲ್ಲಿ ಹುಲ್ಲನ್ನು ಕಚ್ಚಿಕೊಳ್ಳುವುದು, ಹಾವಿನ ಹುತ್ತವನ್ನು ಏರಿ ನಿಲ್ಲುವುದು – ಇವು ಶರಣಾಗತಿಯನ್ನು ಸೂಚಿಸುವ ಪ್ರಾಚೀನ ಸಂಜ್ಞೆಗಳು).

**೩೨. ವ್ಯಾವೃತ್ತಿ**

ಪದ್ಯ ೨೦೦ : "ಮತ್ತೆ ಮತ್ತೆ ಆ ಮಾತನ್ನು (ಎಂದರೆ, ಒಮ್ಮೆ ಹೇಳಿದ ಮಾತನ್ನು) ಎತ್ತಿ ಕಾಣುವಂತೆ ('ನೆಗೞ್ವುರೆ') ಹೇಳಿದರೆ, ಅದು 'ವ್ಯಾವೃತ್ತಿ' ಯೆನಿಸುವುದು." (ವಿಶಿಷ್ಟವಾದ ಆವೃತ್ತಿಯೆ ವ್ಯಾವೃತ್ತಿ). (ಈ ಅಲಂಕಾರವನ್ನು ದಂಡಿಯಾಗಲಿ ಭಾಮಹನಾಗಲಿ ಹೇಳಿಲ್ಲ)*. ಹೇಳಿದ ಮಾತನ್ನೆ ಅನಗತ್ಯವಾಗಿ ಮತ್ತೆ ಮತ್ತೆ ಹೇಳಿದರೆ ಪುನರುಕ್ತಿ ದೋಷವಾಗುತ್ತದೆ. (ನೋಡಿ : ಕ.ರಾ. ಮಾರ್ಗ, I–೮೪).

ಅದು ದೋಷವೆನಿಸದೆ ಅಲಂಕಾರವಾಗಬೇಕಾದರೆ, ಅದರಲ್ಲಿ ಒಂದು ವೈಶಿಷ್ಟ್ಯ ವಿರಬೇಕು. (ಆ ವೈಶಿಷ್ಟ್ಯವೆಂದರೆ, ಹಿಂದಿನ ವಾಕ್ಯದಲ್ಲಿನ ಪದವು ಮುಂದಿನ ವಾಕ್ಯಕ್ಕೆ ಒಂದು ಅರ್ಥ ಶ್ರೇಣಿಯ ಸಂಬಂಧವನ್ನು ಕಲ್ಪಿಸುವಂತೆ ಪುನರುಕ್ತವಾಗುವುದು. ಆ ಸಂಬಂಧವು ಕೆಲವು ವೇಳೆ ಕಾರಣರೂಪದಲ್ಲಿರಬಹುದು).

(ಈ ಅಲಂಕಾರವನ್ನೆ ನಾಗವರ್ಮನು 'ಕಾವ್ಯಾವಲೋಕನ'ದಲ್ಲಿ ಆವಳ್ಯಲಂಕಾರ' ಎಂದು ನಿರೂಪಿಸಿರುವಂತೆ ಕಾಣುತ್ತದೆ. ಈಚಿನ ಅಲಂಕಾರಿಕರು ಈ 'ಆವಳಿ'ಯನ್ನು 'ಏಕಾವಳಿ'ಯೆಂದೂ ಕರೆದಿರುತ್ತಾರೆ. ಇದನ್ನು 'ಮುಕ್ತಪದಗ್ರಾಸಾಲಂಕಾರ' ಎನ್ನುವುದೂ ಉಂಟು. '(ಗೃಹೀತಮುಕ್ತ ರೀತ್ಯಾರ್ಥ ಶ್ರೇಣಿರೇಕಾವಳೀ ಮತಾ.' – ನೋಡಿ : ಕ. ಕೈಪಿಡಿ, ಪು. ೩೪೧ ; ೨ನೆಯ ಮುದ್ರಣ).

---

* ವಿಶೇಷ ಟಿಪ್ಪಣಿ – ೨ (ಅನುಬಂಧ – ೮) ನೋಡಿ. (ಆವೃತ್ತಿ : ೧೯೬೮)

ಪದ್ಯ ೨೦೧ : ಪದ್ಯದ ಅನ್ವಯಾರ್ಥ : "ವಿರಹಂ ಪರಿತಾಪಮಂ, ಆ ಪರಿತಾಪಮುಂ ಅಳಿಪಂ (= ಆಶೆಯನ್ನು), ಅಳಿಪುಂ ಆ ವಲ್ಲಭನೊಳ್ ನೆರೆದಿರ್ಪ ಬಗೆಯಂ (ಕೂಡಿರುವ ಮನಸ್ಸನ್ನು, ಆಲೋಚನೆಯನ್ನು), ಆ ನೆರೆದ ಇರವುಂ ಸುರತಾನುರಾಗಮಂ (ಸಂಭೋಗ ಪ್ರೀತಿಯನ್ನು), ಪೆರ್ಚಿಸುಗುಂ." (ಈ ಪದ್ಯದಲ್ಲಿ 'ಪರಿತಾಪ', 'ಅಳಿವು', 'ನೆರೆ' – ಈ ಪದಗಳಲ್ಲಿ ಕ್ರಮವಾಗಿ ಹಿಂದಿನ ಪದದ ಅರ್ಥವು ಮುಂದಿನಪದದ ಅರ್ಥಕ್ಕೆ ಕಾರಣವಾಗಿರುವುದರಿಂದ ವಾಕ್ಯಗಳ ನಡುವೆ ಅರ್ಥ ಸಂಬದ್ಧತೆ ಕಲ್ಪಿತವಾಗಿರುವುದನ್ನೂ, ವಾಕ್ಯವಾಕ್ಯಗಳ ನಡುವೆ ಶಾಬ್ದಿಕ ಸಂಬಂದ್ಧತೆ ಏರ್ಪಟ್ಟಿರುವುದನ್ನೂ ಗಮನಿಸಿದರೆ, ಇದು ಶಬ್ದವ್ಯಾವೃತ್ತಿಯಲ್ಲಿ 'ಸ್ವಗತ'ವಾಗಿರುವ ಎಂದರೆ ಅಡಕವಾಗಿರುವ ಅಲಂಕಾರ ಎಂದು ಪರಿಗಣಿಸಲು ಯಾವ ಅಡ್ಡಿಯೂ ಇಲ್ಲ).

ಪದ್ಯ ೨೦೨ : ಈ ಪದ್ಯದ ಅನ್ವಯವನ್ನೂ ಮೇಲಿನ ಲಕ್ಷ್ಯವನ್ನು ಅನುಸರಿಸಿ ಮಾಡಿಕೊಳ್ಳತಕ್ಕದ್ದು.

## ೩೩. ಪ್ರಿಯತರ

ಪದ್ಯ ೨೦೩ ; "ಪ್ರೇಯಃ ಪ್ರಿಯತರಾಖ್ಯಾನಂ" ("ಒಬ್ಬರ ಮನಸ್ಸಿಗೆ ತುಂಬ ಹಿತಕರವಾಗುವಂತೆ ಹೇಳುವುದೇ 'ಪ್ರೇಯಸ್ಸು") ಎಂಬ ದಂಡಿಯ ಸಂಕ್ಷೇಪವಾದ ಲಕ್ಷಣವನ್ನು – "ಪ್ರಿಯವೂ ಕುಶಲ ಪೂರ್ವಕವೂ ಉಚಿತವಾದ ನಯ, ವಿನಯ, ಉದಾರ ಗುಣಗಳಿಂದ ಮನೋಹರವಾದುದೂ (ಸಂದರ್ಭೋಚಿತವಾಗಿ ಕೈಗೊಳ್ಳಬೇಕಾದ) ಎಲ್ಲ ಕ್ರಿಯೆಗಳನ್ನೂ ಅನುಸರಿಸತಕ್ಕ ಅರ್ಥವುಳ್ಳದ್ದೂ ಆದ ವಚನವೇ 'ಪ್ರಿಯತರ" – ಎಂದು ಮಾರ್ಗಕಾರನು ವಿಸ್ತರಿಸಿರುವನು.

(ದಂಡಿ ಹೇಳುವ ಪ್ರೇಯಸ್ಸೇ ಪ್ರಿಯತರ ; ಅವನು ಈ ಅಲಂಕಾರಕ್ಕೆ ಲಕ್ಷ್ಯವನ್ನು ಕೊಟ್ಟಿಲ್ಲ. ಭಾಮಹನು ಲಕ್ಷ್ಯವನ್ನು ಕೊಟ್ಟಿರುವನೇ ಹೊರತು ಲಕ್ಷಣವನ್ನು ಹೇಳಿಲ್ಲ ; ಆದರೆ, 'ಪ್ರೇಯೋಗೃಹಾಗತಂ ಕೃಷ್ಣಮವಾದೀತ್ ವಿರುದೋ ಯಥಾ...' ('ಮನೆಗೆ ಬಂದ ಕೃಷ್ಣನಿಗೆ ವಿದುರನು ಹೇಳಿದ ಪ್ರಿಯವಾದ ಮಾತುಗಳು ಪ್ರೇಯಸ್ಸಿಗೆ ದೃಷ್ಟಾಂತ') ಎಂಬ ಲಕ್ಷ್ಯವಾಕ್ಯದಲ್ಲಿ ಲಕ್ಷಣ ಅಭಿಪ್ರೇತವಾಗಿರುವಂತೆ ಕಾಣುತ್ತದೆ. ಇದು ಅಲಂಕಾರವೇ ಅಲ್ಲವೆಂಬ ಮತವೂ ಇದೆ.)

ಪದ್ಯ ೨೦೪ : ಅನ್ವಯ : "ನಿಮ್ಮಡಿಯಾ ಬರವಿನೊಳ್ ಗುರುಜನದ ಪರಕೆಯುಂ ಬಂಧುರ ಪುಣ್ಯಫಳಾನುಬಂಧಮಂ ಪರಮಾನುಭಾವ ಭರಮಂ ನೆರೆದು ಎನ್ನೊಳ್ ದೊರೆಕೊಂಡುವವು."

**೩೪. ಆಶೀಃ (ಆಶೀರಲಂಕಾರ)**

ಪದ್ಯ ೨೦೫ : ಅನ್ವಯ : "ಪಿರಿಯರಂ ಮನದ ಬಗೆಯಿಂ ದೊರೆಕೊಂಡು ಪಿರಿದಾಗಿರೆ ಒಸಗೆಯುಂ ಪೇೞ್ವೊಡೆ ಅದುಂ ಪರವು ಆಶೀರರ್ಥಾಲಂಕಾರಣಾಂತರಂ." – "ಹಿರಿಯರು (ತಮ್ಮನ್ನು ಆದರದಿಂದ ಬರಮಾಡಿಕೊಂಡವರ) ಮನಸ್ಸಿನ ಬಗೆಯನ್ನು (ಇಷ್ಟಾರ್ಥವನ್ನು) ಗ್ರಹಿಸಿಕೊಂಡು ಅವರಿಗೆ 'ಒಸಗೆ'ಯನ್ನು (ಎಂದರೆ ಶುಭವನ್ನು) ಕೋರುವುದೆ ಆಶೀರಲಂಕಾರ" ಎಂದು ತಾತ್ಪರ್ಯಾರ್ಥ.

ದಂಡಿಯ ಶ್ಲೋಕ ಹೀಗೆದೆ :

> ಆಶೀರ್ನಾಮಾಭಿಲಷಿತೇ ವಸ್ತುನ್ಯಾ ಶಂಸನಂ ಯಥಾ ।
> ಪಾತು ವಃ ಪರಮಂ ಜ್ಯೋತಿರವಾಙ್ಮಾನಸಗೋಚರಂ ॥ (II, ೩೫೭)

('ಆದರಕ್ಕೆ ಪಾತ್ರವಾದ ವಸ್ತುವಿನ ಬಗೆಗೆ ಒಳ್ಳೆಯದನ್ನು ಹಾರೈಸುವುದು ಆಶೀರಲಂಕಾರ' – ಹೇಗೆಂದರೆ, 'ಮಾತಿಗೂ ಮನಸ್ಸಿಗೂ ಅಗೋಚರವಾದ ಆ ಪರಮಜ್ಯೋತಿ ನಿಮ್ಮನ್ನು ಕಾಪಾಡಲಿ').

ಪದ್ಯ ೨೦೬ : ಆಶೀರಲಂಕಾರಕ್ಕೆ ಲಕ್ಷ್ಯ : ಅನ್ವಯ : "ನೃಪತಿ, ತೋಯಧಿ ಧರಣೀ ಧರಾಧರ ಸ್ಥಿತಿವರೆಗಂ (= ಸಮುದ್ರ, ಭೂಮಿ, ಪರ್ವತ – ಇವು ಇರುವವರೆಗೆ) ಆಯುಂ (= ಆಯುಸ್ಸೂ) ಶ್ರೀಯುಂ (= ಐಶ್ವರ್ಯವೂ) ವಿಜಯಮುಂ ಆಯತಿಯುಂ (= ವೈಭವವೂ) ನಿಜ ಸಂತತಿಯುಂ (= ನಿನ್ನ ಸಂತಾನವೂ) ನ್ಯಾಯದೆ ಪೆರ್ಚುವುದು ಅಕ್ಕೆ (= ಹೆಚ್ಚುವುದಾಗಲಿ)."[೭೮]

---

೭೮. ಪ್ರಥಮ ಪರಿಚ್ಛೇದದ ೫–೬ನೆಯ ಪದ್ಯಗಳು ಹಾಗೂ 'ಪ್ರಿಯತರ' ಮತ್ತು 'ಆಶೀಃ' – ಈ ಅಲಂಕಾರಗಳ ಲಕ್ಷ್ಯಪದ್ಯಗಳು, ಕವಿರಾಜಮಾರ್ಗಕಾರನು ನೃಪತುಂಗನು ನಗರವನ್ನು ಪ್ರವೇಶಮಾಡಿದ ಸಂದರ್ಭವನ್ನೂ, ನೃಪತುಂಗನು ಕವಿಯನ್ನು ಗೌರವಪೂರ್ವಕವಾಗಿ ಬರಮಾಡಿಕೊಂಡ ಸಂಗತಿಯನ್ನೂ ಮತ್ತು ಆ ಸಂದರ್ಭದಲ್ಲಿ ಕವಿ ನೃಪತುಂಗನಿಗೆ ಶುಭಶಂಸನವನ್ನು ಮಾಡಿದುದನ್ನೂ ಸೂಚಿಸುತ್ತಿವೆ ಎಂದು ಮುಳಿಯ ತಿಮ್ಮಪ್ಪಯ್ಯನವರು ಊಹಿಸಿ, ಆ ಬಗೆಗೆ ತಕ್ಕಮಟ್ಟಿಗೆ ವಿಸ್ತಾರವಾಗಿಯೆ ವಿವೇಚನೆ ಮಾಡಿದ್ದಾರೆ. (ಕ. ಮಾ. ವಿವೇಕ, ಭಾಗ ೧ : ಪು. ೯೫–೯೬, ೧೧೧–

## ೩೫. ಭಾವಿಕಾಲಂಕಾರ

ಪದ್ಯ ೨೦೭ : ಅನ್ವಯ : "ಕವಿಗಳಾ ಭಾವಿಸಿ ಮನದ ಬಗೆಯೊಂದಿದರ್ಥಂ ಭಾವಮೆಂಬುದಕ್ಕುಂ ; ಅದಱೊಳ್ ಕೇವಲಂ ಅಳಂಕೃತಿ ಭಾವಿಕಂ ಎಂಬುದಕ್ಕುಂ." – "ಕವಿಗಳು ಭಾವಿಸಿಕೊಂಡ ಅರ್ಥವು ಅವರ ಮನಸ್ಸಿನ ಬಗೆಗೆ ಹೊಂದಿಕೊಂಡು 'ಭಾವ' ವೆನಿಸುವುದು ; ಆ ಭಾವವು ಅಲಂಕಾರಿಕವಾಗಿ ಪ್ರಕಟಗೊಂಡಾಗ 'ಭಾವಿಕ' ಎಂಬ ಅಲಂಕಾರವಾಗುವುದು :" ಇದು ತಾತ್ಪರ್ಯ. ('ಕವಿಗಳಾ ಭಾವಿಸಿ' ಎಂಬಲ್ಲಿ ಪ್ರಥಮೆಯ ಎಡೆಯಲ್ಲಿ ಷಷ್ಠೀ ವಿಭಕ್ತಿ ಪ್ರಯೋಗವಾಗಿದೆ : 'ಕವಿಗಳ್ ಭಾವಿಸಿ' ಎಂದು ಅನ್ವಯ).

ದಂಡಿಯ ಲಕ್ಷಣ ವಿವರಣೆಯಿಂದ ಅಲಂಕಾರದ ಸ್ವರೂಪವು ಚೆನ್ನಾಗಿ ಮನದಟ್ಟಾಗುವುದು ;

ಭಾವಿಕತ್ವಮಿತಿ ಪ್ರಾಹುಃ ಪ್ರಬಂಧವಿಷಯಂ ಗುಣಂ ।
ಭಾವಃ ಕವೇರಭಿಪ್ರಾಯಃ ಕಾವ್ಯೇಷ್ವಾಸಿದ್ಧಿಯಃ ಸ್ಥಿತಃ ॥
ಪರಸ್ಪರೋಪಕಾರಿತ್ವಂ ಸರ್ವೇಷಾಂ ವಸ್ತುಪರ್ವಣಾಂ ।
ವಿಶೇಷಣಾನಾಂ ವ್ಯರ್ಥಾನಾಮ ಕ್ರಿಯಾ ಸ್ಥಾನವರ್ಣನಾ ॥
ವ್ಯಕ್ತಿರುಕ್ತಿ ಕ್ರಮಬಲಾದ್ಗಂಭೀರಸ್ಯಾಪಿ ವಸ್ತುನಃ ।
ಭಾವಾಯತ್ತಮಿದಂ ಸರ್ವಮಿತಿ ತದ್ಭಾವಿಕಂ ವಿದುಃ ॥ (II, ೩೬೪–೩೬೬)

('ಪ್ರಬಂಧವನ್ನೆಲ್ಲ ವ್ಯಾಪಿಸಿಕೊಂಡಿರುವ ಗುಣವೆ ಭಾವಿಕತ್ವ ಎಂದು ಹೇಳಲಾಗಿದೆ. ಕಾವ್ಯದಲ್ಲಿ ಕೊನೆಮುಟ್ಟುವವರೆಗೂ ನೆಲಸಿರುವ ಕವಿಯ ಅಭಿಪ್ರಾಯವೇ ಭಾವ. ಕಾವ್ಯವಸ್ತುವಿನ ಎಲ್ಲ ಭಾಗಗಳು ಪರಸ್ಪರ ಉಪಕಾರಿಗಳಾಗಿ ಹೊಂದಿಕೊಂಡಿರುವುದು; ವ್ಯರ್ಥವಾದ ವಿಶೇಷಣಗಳನ್ನು ಪ್ರಯೋಗಿಸದಿರುವುದು ; ಸ್ಥಳವರ್ಣನೆ ; ಉಕ್ತಿಕ್ರಮದ ಬಲದಿಂದ ಗಂಭೀರವೆನಿಸುವ ವಸ್ತುವನ್ನು ಕೂಡ ಅಭಿವ್ಯಕ್ತಿಗೊಳಿಸುವುದು ;

---

೧೧೨) ಈ ಪದ್ಯಗಳೆಲ್ಲವೂ ದಂಡಿಯ ಶ್ಲೋಕಗಳ ಅನುವಾದಗಳಾಗಿರದೆ ಕವಿಯ ಸ್ವಂತ ರಚನೆಗಳೆಂಬ ಅಂಶವನ್ನು ಗಮನಿಸಿದರೆ ಆ ಊಹೆ ಬಹುಮಟ್ಟಿಗೆ ಸಮರ್ಥನೀಯವಾಗಿ ಕಾಣುತ್ತದೆ. ಅಲ್ಲದೆ, ಮೇಲಿನ ಲಕ್ಷ್ಯಪದ್ಯದಲ್ಲಿನ 'ಶ್ರೀಯುಂ ವಿಜಯುಮುಂ' ಎಂಬ ಪದಗಳಲ್ಲಿ ಕವಿಯ ಹೆಸರು ಅಡಕಗೊಂಡು ಹೊಳೆಯುತ್ತಿದೆಯೆಂದೂ ತಿಮ್ಮಪ್ಪಯ್ಯನವರು ಊಹಿಸಿದ್ದಾರೆ 'ಕವಿರಾಜಮಾರ್ಗ'ದ ಕರ್ತೃ ಶ್ರೀವಿಜಯನೇ ಎಂಬ ತೀರ್ಮಾನಕ್ಕೆ ನಾವು ಬಂದಿರುವುದರಿಂದ, ಈ ಊಹೆಯೂ ಆ ತೀರ್ಮಾನಕ್ಕೆ ಉಪಷ್ಟಂಭಕವಾಗಿಯೆ ಪರಿಣಮಿಸುವುದೆಂದು ನಾವು ಭಾವಿಸಿದ್ದೇವೆ.

ಇವೆಲ್ಲಕ್ಕೂ ಭಾವವೇ ಆಧಾರ, ಆದ್ದರಿಂದ, ಭಾವಾಲಂಬಿಯಾದದ್ದು ಭಾವಿಕಲಂಕಾರ).[೭೯]

## ೩೬. 'ಧ್ವನಿಯೆಂಬುದಳಂಕಾರಂ'[೮೦]

ಪದ್ಯ ೨೦೮ : ಅನ್ವಯ : "ಧ್ವನಿಯೆಂಬುದು ಅಳಂಕಾರಂ ; ಧ್ವನಿಯಿಸುಗುಂ ಶಬ್ದದಿಂದಂ, ಅರ್ಥದೆ ದೂಷ್ಯಂ. ನೆನೆವುದು ಇದಂ ಇತು : ಕಮಳದೊಳ್ ಅನಿಮಿಷಯುಗಂ ಒಪ್ಪಿ ತೋರ್ಪುದು ; ೦ತಿದು ಚೋದ್ಯಂ."

ತಾತ್ಪರ್ಯ : "ಧ್ವನಿ ಎಂಬುದು ಅಲಂಕಾರ ; ಅದು ಶಬ್ದದಿಂದ ಧ್ವನಿತ (= ಸೂಚಿತ)ವಾಗುತ್ತದೆ. ; ಅರ್ಥದಿಂದ ಧ್ವನಿತವಾದರೆ ದುಷ್ಟವೆನಿಸುವುದು. ಅದನ್ನು ಹೀಗೆ (= ಈ ಮುಂದಿನ ಉದಾಹರಣೆಯಿಂದ) ಅರಿತುಕೊಳ್ಳಬೇಕು : ಕಮಲದಲ್ಲಿ 'ಅನಿಮಿಷ'ಗಳ ಜೋಡಿ ಒಪ್ಪಿ ಕಾಣುತ್ತದೆ; ಇದು ಸೋಜಿಗ."

---

೭೯. ಈ ಅಲಂಕಾರವನ್ನು ಭಾಮಹನೂ ವಿವರಿಸಿದ್ದಾನೆ. ಇಬ್ಬರ ಲಕ್ಷಣವಿವರಣೆಯಲ್ಲಿ ಅಲ್ಪಸ್ವಲ್ಪ ವ್ಯತ್ಯಾಸವಿದ್ದರೂ, ಒಟ್ಟಿನಲ್ಲಿ ಮತಭೇದವಿಲ್ಲ. 'ಭಾವಿಕತ್ವಮಿತಿ ಪ್ರಾಹುಃ ಪ್ರಬಂಧ ವಿಷಯಂ ಗುಣಂ' ಎಂಬ ಮಾತುಗಳು ಇಬ್ಬರ ಶ್ಲೋಕಗಳಲ್ಲಿಯೂ ಇರುವುದು ಗಮನಾರ್ಹ. ನಾಗವರ್ಮನು 'ಕಾವ್ಯಾವಲೋಕನ'ದಲ್ಲಿ (ಪ. ೨೨೨) ಈ ಇಬ್ಬರು ಲಾಕ್ಷಣಿಕರ ಲಕ್ಷಣಗಳ ಸಾರಾಂಶವನ್ನು ಸಂಗ್ರಹಿಸಿ ಹೇಳಿದ್ದಾನೆ. ಮಾರ್ಗಕಾರನ ಲಕ್ಷಣ ಅಷ್ಟು ವಿವರ ಪೂರ್ಣವಾಗಿಲ್ಲ. ಇದಕ್ಕೆ ಯಾರೂ ಲಕ್ಷ್ಯವನ್ನು ಕೊಟ್ಟಿಲ್ಲ. ಪ್ರಬಂಧಸರ್ವಕ್ಕೂ ಅನ್ವಯಿಸುವ ಈ ಅಲಂಕಾರಕ್ಕೆ ಲಕ್ಷ್ಯವನ್ನು ಕೊಡುವುದು ಅಸಾಧ್ಯವೇ ಸರಿ. ಆದ್ದರಿಂದಲೇ, ಈಚಿನ ಅಲಂಕಾರಿಕರು ಕೆಲವರು ಈ ಅಲಂಕಾರವನ್ನು ಅಂಗೀಕರಿಸಿಲ್ಲ.

೮೦. (i) ಈ ಗ್ರಂಥದಲ್ಲಿಯೂ ಕನ್ನಡ ಕಾವ್ಯಮೀಮಾಂಸೆಯ ಬೆಳವಣಿಗೆಯನ್ನು ಕುರಿತ ವಿವೇಚನೆಯಲ್ಲಿಯೂ ಈ ಪದ್ಯಕ್ಕೆ ವಿಶೇಷವಾದ ಪ್ರಾಮುಖ್ಯವುಂಟು. ಈಗಾಗಲೇ ಈ ಪದ್ಯವು ಇಬ್ಬರು ವಿದ್ವಾಂಸರ (ಡಾ॥ ಕೆ. ಕೃಷ್ಣಮೂರ್ತಿ ಮತ್ತು ಪ್ರೊ॥ ತೀ. ನಂ. ಶ್ರೀಕಂಠಯ್ಯ) ಗಮನವನ್ನು ಸೆಳೆದು, ಅರ್ಥವಿವರಣೆಯ ವಿಷಯದಲ್ಲಿ ಅವರಿಬ್ಬರ ನಡುವೆ ಅಭಿಪ್ರಾಯಭೇದಕ್ಕೆ ಎಡೆಗೊಟ್ಟಿದೆ. ಮುಳಿಯ ತಿಮ್ಮಪ್ಪಯ್ಯನವರು ತಮ್ಮದೇ ಆದ ಬಗೆಯಲ್ಲಿ ಈ ಪದ್ಯವನು ವ್ಯಾಖ್ಯಾನಿಸಿರುವರು. ಈ ಎಲ್ಲರ ವಿಚಾರ ವಿಮರ್ಶೆಗಳ ಆಧಾರದ ಮೇಲೆಯೆ ನಮ್ಮ ಅಭಿಪ್ರಾಯ ರೂಪಗೊಂಡರುವುದು. (ಈ ವಿಚಾರದಲ್ಲಿ ಹೆಚ್ಚಿನ ಆಸಕ್ತಿಯುಳ್ಳವರು, (೧) ಡಾ॥ ಕೆ. ೫೦–೫೨, (೨) ಪ್ರೊ॥ ತೀ.ನಂ. ಶ್ರೀ.ಯವರ 'ಭಾರತೀಯ ಕಾವ್ಯ ಮೀಮಾಂಸೆ' ೧೯೫೩ರ ಮುದ್ರಣ : ಪು. ೪೫೮–೪೬೦ ; ತಿದ್ದಿದ ಎರಡನೆಯ ಮುದ್ರಣ, ೧೯೬೧ : ಪು. ೪೯೧–೯೨, ೫೯೫), ಡಾ ಕೆ. ಕೃಷ್ಣಮೂರ್ತಿಯವರ 'ಕನ್ನಡದಲ್ಲಿ ಕಾವ್ಯತತ್ತ್ವ' (೧೯೬೪) (ಪು. ೯–೧೧) – ಈ ಗ್ರಂಥಗಳಲ್ಲಿನ ಸಂಬಂಧಪಟ್ಟ ಪ್ರಕರಣಗಳನ್ನು ಪರಿಶೀಲಿಸಬಹುದು).

(ii) ದಂಡಿ ಭಾಮಹರು ಈ ಅಲಂಕಾರದ ಹೆಸರನ್ನು ಹೇಳಿಲ್ಲ. ಈ ಸಂಬಂಧವಾಗಿ, "ಕನ್ನಡದ ಕವಿರಾಜಮಾರ್ಗವೂ ಸಂಸ್ಕೃತದ ಧ್ವನ್ಯಾಲೋಕವೂ ಬಹುಶಃ ಏಕಕಾಲದಲ್ಲಿ ರಚಿತವಾದುವೆಂಬುದನ್ನೂ, ಕನ್ನಡ ನಾಡಿಗೂ ಕಾಶ್ಮೀರಕ್ಕೂ ಇರುವ ಸಾವಿರಾರು ಮೈಲಿಗಳ ದೂರವನ್ನೂ ನೆನೆದರೆ, ಧ್ವನಿಯ ಮಾತು ಇಷ್ಟೊಂದು ಬೇಗ ಕನ್ನಡದ ಗ್ರಂಥದಲ್ಲಿ ಬಂದಿರುವುದು ಸೋಜಿಗವೆನಿಸುತ್ತದೆ. ಆನಂದವರ್ಧನನಿಗೆ ಹಿಂದೆಯೇ ಧ್ವನಿಯ ಪ್ರಸ್ತಾವ ಎದ್ದಿತ್ತೆಂಬ ವಾದಕ್ಕೆ ಇದು ಪುಷ್ಟಿ ಕೊಡುತ್ತದೆ. ಕವಿರಾಜಮಾರ್ಗಕಾರನು ಧ್ವನ್ಯಾಲೋಕವನ್ನು ನೋಡಿದ್ದನೆಂಬುದಕ್ಕೆ ಯಾವ ನಿದರ್ಶನವೂ ಅವನ ಗ್ರಂಥದಲ್ಲಿ ದೊರೆಯುವುದಿಲ್ಲ" ಎಂದು ಪ್ರೊ॥ ತೀ.ನಂ. ಶ್ರೀ. ಯವರು ಅಭಿಪ್ರಾಯಪಟ್ಟಿದ್ದಾರೆ. ಡಾ॥ ಕೆ. ಕೃಷ್ಣಮೂರ್ತಿಯವರದ್ದೂ ಇದೇ ಅಭಿಪ್ರಾಯ ; ಅವರ ಹೆಚ್ಚಿನ ಮಾತೆಂದರೆ ಇದು : "ಇಲ್ಲಿಯ 'ಧ್ವನಿಯೆಂಬುದಳಂಕಾರಂ' ಎಂಬ ಘೋಷಣೆಯನ್ನು ನೋಡಿದರೆ, ಇತರರು ಅಲಂಕಾರಾತಿರಿಕ್ತವಾದ ಯಾವುದೋ ಕಾವ್ಯ ರಹಸ್ಯವೋ ಧ್ವನಿಯೆನ್ನುವುದು ಸರಿಯಲ್ಲವೆಂದು ನಿರಾಕರಿಸುತ್ತಿರುವಂತಿದೆ." (ಕ. ಕಾವ್ಯತತ್ವ, ಪುಟ ೩೭). ಇದು ವಿಚಾರಣೀಯವಾದ ಅಂಶ. ನಮಗೆ ತೋರುವುದು ಹೀಗೆ : ಧ್ವನಿಸಿದ್ಧಾಂತವು ಸಾಕಲ್ಯವಾಗಿ ಇದ್ದಕ್ಕಿದ್ದಂತೆ 'ಧ್ವನ್ಯಾಲೋಕ'ದಲ್ಲಿ ರೂಪುಗೊಂಡಿತೆಂದರೆ ಅಸಂಭಾವ್ಯವಾಗಿ ಕಾಣುತ್ತದೆ. ತೀ.ನಂ. ಶ್ರೀ. ಯವರು ಅಭಿಪ್ರಾಯಪಟ್ಟಿರುವಂತೆ, 'ಆನಂದವರ್ಧನನಿಗೆ ಹಿಂದೆಯೇ ಧ್ವನಿಯ ಪ್ರಸ್ತಾವ ಎದ್ದಿದ್ದಿತು.' 'ಧ್ವನಿ' ವಿಷಯಕವಾದ ಒಂದು ಸ್ಥೂಲವಾದ ಪ್ರಾಕೃತ ಸ್ವರೂಪ ಕಾಶ್ಮೀರದಲ್ಲಿ ಮಾತ್ರವಲ್ಲದೆ ಭರತಖಂಡದ ಇತರ ಜ್ಞಾನ ಕೇಂದ್ರಗಳಲ್ಲಿಯೂ ಪ್ರಚಲಿತವಾಗಿದ್ದಿರಬೇಕು. ನೃಪತುಂಗನ ತಂದೆ ಮೂರನೆಯ ಗೋವಿಂದನ ಕಾಲದಲ್ಲಿ ರಾಷ್ಟ್ರಕೂಟ ಸಾಮ್ರಾಜ್ಯವು ಉತ್ತರಾಪಥದ ಸೆರಗನ್ನು ಸೋಕಿತ್ತೆಂಬುದನ್ನು ನೆನೆಯಬೇಕು. ನೃಪತುಂಗನ ಕಾಲದಲ್ಲಿ ಮಾನ್ಯಖೇಟ ನಗರವು ಕವಿಗಳನ್ನೂ, ವಿದ್ವಾಂಸರನ್ನೂ ಆಕರ್ಷಿಸುತ್ತಿದ್ದ ಅಂಥ ಒಂದು ಜ್ಞಾನ ಕೇಂದ್ರವಾಗಿತ್ತೆಂಬುದು ಇತಿಹಾಸಪ್ರಸಿದ್ಧವಾದ ಸಂಗತಿ. ದಂಡಿ ದಾಕ್ಷಿಣಾತ್ಯನಾಗಿದ್ದಿರಬಹುದೆಂಬ ಅಭಿಪ್ರಾಯವೂ ಇದೆಯಷ್ಟೆ. ಹೀಗಿರುವಲ್ಲಿ, ಕಾಶ್ಮೀರದ ಆನಂದವರ್ಧನನ ಕೈಯಲ್ಲಿ ಪರಿಷ್ಕಾರಗೊಂಡು ಒಂದು ವ್ಯವಸ್ಥಿತ ರೂಪವನ್ನು ಪಡೆದ ಧ್ವನಿತತ್ತ್ವದ ಪ್ರಾಕೃತರೂಪ ಕಾವ್ಯಶಾಸ್ತ್ರದ ಬೆಳವಣಿಗೆಯ ಒಂದು ಮಜಲಾಗಿ ದಕ್ಷಿಣ ಭಾರತದಲ್ಲಿಯೂ ವಿದ್ವನ್ಮಂಡಲಿಗೆ ಪರಿಚಿತವಾಗಿದ್ದಿರಬೇಕು. ಬಹುಶಃ ನೃಪತುಂಗನ ಸಭೆಯಲ್ಲಿ ಧ್ವನಿ ವಿಷಯಕವಾದ ಚರ್ಚೆಯೂ ನಡೆದು, 'ಧ್ವನಿಯೆಂಬುದಳಂಕಾರಂ' ಎಂಬ 'ನೃಪತುಂಗದೇವ ಮತ'ಕ್ಕೆ ಮನ್ನಣೆ ದೊರೆತು ಕವಿರಾಜಮಾರ್ಗದ ಅಲಂಕಾರ ಮಾಲಿಕೆಯಲ್ಲಿ ಸೇರ್ಪಡೆಯಾಗಿರಬೇಕು. 'ಯಾವುದೋ ಕಾವ್ಯ ರಹಸ್ಯವೆ ಧ್ವನಿಯೆನ್ನುವುದು ಸರಿಯಲ್ಲ' ಎಂಬ ನಿರಾಕರಣೆ ಮೇಲ್ಕಂಡ ಲಕ್ಷಣವಾಕ್ಯದಲ್ಲಿ ಬೋಧೆಯಾಗುತ್ತಿದೆ ಎಂದು ನಮಗೆ ಎನ್ನಿಸುವುದಿಲ್ಲ. ಅಲಂಕಾರಗಳಿಗೆ ಪ್ರಾಧ್ಯಾನ್ಯವಿದ್ದ ಆ ಕಾಲದಲ್ಲಿ 'ರಸ'ವೂ ಒಂದು ಅಲಂಕಾರವೆನಿಸಿದ ಹಾಗೆ, 'ಧ್ವನಿ'ಯೂ ಒಂದು ಅಲಂಕಾರವೆನಿಸಿದ್ದರಲ್ಲಿ ಸೋಜಿಗವೇನಿಲ್ಲ. ಈ ಬಗೆಗೆ ಡಾ॥ ರಾಘವನ್‌ರವರ ಅಭಿಪ್ರಾಯ ಹೀಗಿದೆ : 'For, it is the analysis of the Alamkaras that led to the rise of Vakrokti and in another direction throug such Alamkaras ans Dipika,

Samasokti, Paryayokti containing a suggested element, gave rise to the concept of suggestion, Dhvani" (Some Concepts of Alamkara Sastra, P.260. ಈ ವಾಕ್ಯವನ್ನು ನನ್ನ ಗಮನಕ್ಕೆ ತಂದು ಉಪಕಾರಮಾಡಿದವರು ಪ್ರೊ| ಡಿ.ಎಲ್.ಎನ್.)

(iii) ಈ ಸಂಬಂಧದಲ್ಲಿ ವ್ಯಕ್ತಪಟ್ಟಿರುವ ಇನ್ನೊಂದು ಸಂದೇಹ, 'ಈ ಪದ್ಯ ಪ್ರಕ್ಷಿಪ್ತವಾಗಿರಬಹುದೆ' ಎಂಬುದು. ಮಾರ್ಗಕಾರನು ಅಲಂಕಾರಗಳ ನಾಮನಿರ್ದೇಶ ಮಾಡುವ 'ಪ್ರತಿಜ್ಞಾ' ಪದ್ಯಗಳಲ್ಲಿ iii, ೨–೪) ಧ್ವನ್ಯಳಂಕಾರದ ಹೆಸರನ್ನು ಸೇರಿಸದಿರುವುದರಿಂದ, 'ಧ್ವನಿಯನ್ನು ಕುರಿತ ಪದ್ಯವು ಪ್ರಕ್ಷಿಪ್ತವೇನಾದರೂ ಆಗಿರಬಹುದೆ ಎಂಬ ಆಲೋಚನೆ ಮನಸ್ಸಿನಲ್ಲಿ ಸುಳಿದುಹೋಗುತ್ತದೆ" ಎಂದು ಸಂದೇಹವನ್ನು ವ್ಯಕ್ತಪಡಿಸಿರುವ ತೀ.ನಂ. ಶ್ರೀ. ಯವರೆ ಮುಂದುವರಿದು, "ಆದರೆ ಕವಿರಾಜಮಾರ್ಗದಲ್ಲಿ ಈ ಪದ್ಯಕ್ಕೆ ನೇರವಾಗಿ ಹಿಂದೆ (iii.೨೦೮ರಲ್ಲಿ) ಹೇಳಿರುವ ಭಾವಿಕಾಲಂಕಾರವೂ ಪ್ರತಿಜ್ಞಾಪದ್ಯಗಳಲ್ಲಿ ಉಕ್ತವಾಗಿಲ್ಲವೆಬುದನ್ನು ನೆನೆದರೆ ಈ ಸಂದೇಹ ನಿವಾರಣೆಯಾಗಬಹುದು" ಎಂದು ಸಂದೇಹಕ್ಕೆ ಪರಿಹಾರವನ್ನೂ ಸೂಚಿಸಿದ್ದಾರೆ. ಹೆಚ್ಚಿನದಾಗಿ ನಮಗೆ ತೋರುವುದೇನೆಂದರೆ, ಮಾರ್ಗಕಾರನು ದಂಡಿಯ ಪ್ರತಿಜ್ಞಾಶ್ಲೋಕಗಳನ್ನೆ ಅನುವಾದಿಸುತ್ತಿರುವುದರಿಂದ, ಹೊಸದಾಗಿ ಕಲ್ಪಿತವಾದ ಧ್ವನ್ಯಲಂಕಾರದ ಹೆಸರನ್ನು 'ಪುರಾಣ ಶಾಸ್ತ್ರೋಕ್ತಂಗಳ್' ಆದ ಅಲಂಕಾರಗಳ ಮಾಲಿಕೆಯಲ್ಲಿ ಸೇರಿಸುವುದು ಉಚಿತವಲ್ಲವೆಂದು ಅವನು ಭಾವಿಸಿರಬೇಕು. ಹಾಗಿದ್ದ ಮೇಲೆ, 'ಭಾವಿಕ'ದ ಹೆಸನ್ನೇಕೆ ಬಿಟ್ಟ ಎಂಬ ಸಂದೇಹವೂ ತಲೆದೋರದಿರುವುದಿಲ್ಲ. ಇದಕ್ಕೆ ಸಮಾಧಾನ : (i) ಹೆಸರಿಸದೆ ಬಿಡುವುದರಿಂದ ಬಾಧಕವಿಲ್ಲ ; 'ಪೂರ್ವಿಕರು ಹೇಳಿದ್ದು' ಎಂದು ಹೊಸದನ್ನು ಸೇರಿಸುವುದು ತಪ್ಪಾಗುತ್ತದೆ. (ii) 'ಪದ್ಯರಚನೆಯಲ್ಲಿ ಅಳವಡಿಸಲಾಗಲಿಲ್ಲ' ಎಂದೂ ಊಹಿಸಬಹುದು. ಅಲಂಕಾರಗಳ ನಾಮನಿರ್ದೇಶವು ಸಮಾಪ್ತಿಗೊಳ್ಳುವ ಪದ್ಯದ (iii, ೪) ಕಡೆಯ ಸಾಲಿನಲ್ಲಿ, ದಂಡಿ ಕೊಟ್ಟಕೊನೆಯಲ್ಲಿ ಸೇರಿಸಿರುವಂತೆ ಇವನೂ ಸೇರಿಸಬಹುದಾಗಿತ್ತು. '... ವ್ಯಾವೃತಿ ಪ್ರಿಯತರಾಶಿಗಳ್ ಕ್ರಮಾದ್ಯುಕ್ತಂಗಳ್' ಎನ್ನುವ ಎಡೆಯಲ್ಲಿ '...ವ್ಯಾ । ವೃತಿಪ್ರಿಯತರಾಶಿ ಭಾವಿಕಾದ್ಯುಕ್ತಂಗಳ್' ಎಂದು ಹೇಳಬಹುದಾಗಿತ್ತು. ಆಗ ವ್ಯಾಕರಣ ದೋಷವು ಸಂಭವಿಸುತ್ತಿತ್ತು. ('ಪ್ರಿಯ ತರಾಶೀರ್ಭಾವಿಕಾದ್ಯುಕ್ತಂಗಳ್' ಎಂದು ಸಮಾಸವಾಗಬೇಕು. ಇದರಿಂದ ಛಂದೋದೋಷವು ಸಂಭವಿಸುತ್ತದೆ). ಹೀಗೆ ಕ್ಲೇಶಪಡುವುದಕ್ಕಿಂತ, ಅಷ್ಟು ಮುಖ್ಯವೆಂದು ತೋರದ ಈ ಅಲಂಕಾರದ ಹೆಸರನ್ನು ಹೇಳದೆ ಬಿಡುವ ಉತ್ತಮ ಪಕ್ಷವನ್ನೆ ಮಾರ್ಗಕಾರನು ಅನುಸರಿಸಿರುವಂತೆ ಕಾಣುತ್ತದೆ.

ಈ ಸಂದರ್ಭದಲ್ಲಿ "ಪದಿನಾಱಲ್ಲವಲಂಕ್ರಿಯಾರಚನೆ ಮೂವತ್ತಾಱುನೇರ್ಪಟ್ಟು ಪೊಂದಿದ ಶೃಂಗಾರಮದಲ್ಲಮೊಂದೆ ರಸಮೊಂಬತ್ತೆಯ್ದೊಡಂಬಟ್ಟವು" ಎಂಬ ರನ್ನನ ಉಕ್ತಿಯನ್ನು ನೆನೆಯಬಹುದು (ಗದಾಯು. ಸಂ.i.೨ ; ಅಜಿತ ಪು. ೧–೧೩). ರನ್ನನಿಗೆ ದಂಡಿ ಭಾಮಹರ ಗ್ರಂಥಗಳ ಪರಿಚಯವಿದ್ದಿರಬಹುದಾದರೂ, ರನ್ನನು ಹೇಳುವ ಅಲಂಕಾರಗಳ ಹಾಗೂ ರಸಗಳ ಸಂಖ್ಯೆಗೆ ಅವುಗಳಲ್ಲಿನ ಸಮರ್ಥನೆ ದೊರೆಯುವುದಿಲ್ಲ. (ದಂಡಿ ಹೇಳಿರುವುದು ೩೫ ಅರ್ಥಾಲಂಕಾರಗಳನ್ನು ಮಾತ್ರ). ಕವಿರಾಜಮಾರ್ಗದಲ್ಲಿ ನವರಸಗಳ ಪ್ರಸ್ತಾಪವೂ, ೩೬ ಅರ್ಥಾಲಂಕಾರಗಳ ವಿವರಣೆಯೂ ಸ್ಪಷ್ಟವಾಗಿ ಬಂದಿವೆ.

(ಮಾರ್ಗಕಾರನು ಈ ಪದ್ಯದಲ್ಲಿ ಹೇಳುವ ಅಲಂಕಾರ ವಿಷಯಕವಾದ ಚರ್ಚೆಯನ್ನು ಅರ್ಥಮಾಡಿಕೊಳ್ಳಬೇಕಾದರೆ, ಧ್ವನಿತತ್ತ್ವವನ್ನು ಸ್ಥೂಲವಾಗಿಯಾದರೂ ಅರಿತಿರಬೇಕು. ಅದರ ವಿಚಾರದಲ್ಲಿ ಪ್ರವೇಶವಿಲ್ಲದವರಿಗಾಗಿ, ಅದನ್ನು ಬಹುಸಂಗ್ರಹವಾಗಿ ಇಲ್ಲಿ ತಿಳಿಸಿದೆ. (ಹೆಚ್ಚಿನ ವಿಷಯಜ್ಞಾನಕ್ಕಾಗಿ, ಪ್ರೊ ತೀ. ನಂ. ಶ್ರೀ. ಯವರ ಭಾ.ಕಾ.ಮೀ.ಯನ್ನು ನೋಡಿ : ಪು. ೨೨೧–೨೬೩).

ಜನರಲ್ಲಿ ಬಳಕೆಗೆ ಬಂದು, ರೂಢಿಯಾಗಿರುವ ಅರ್ಥದ ಸಂಕೇತವೇ ಶಬ್ದ. ಸಂಕೇತಿತವಾದ ಅರ್ಥವನ್ನು ಸಾಕ್ಷಾತ್ತಾಗಿ ತಿಳಿಸುವ ಶಬ್ದಶಕ್ತಿಗೆ 'ಅಭಿದಾವೃತ್ತಿ'ಯೆಂದು ಹೆಸರು. ಇದರಿಂದ ತೋರುವ ಅರ್ಥಕ್ಕೆ 'ಅಭಿಧೇಯಾರ್ಥ', 'ವಾಚ್ಯಾರ್ಥ' ಅಥವಾ 'ಮುಖ್ಯಾರ್ಥ' ಎಂದು ಹೆಸರು. ಈ ವಾಚ್ಯಾರ್ಥ ಎಲ್ಲರಿಗೂ ಒಂದೇ ಬಗೆಯಾಗಿರುವುದು. ಇದನ್ನು ನಿಘಂಟುವಿನ ಅರ್ಥ (lexical meaning) ಎನ್ನಬಹುದು. ವಾಚ್ಯಾರ್ಥಕ್ಕೆ ಬಾಧೆ ಬಂದು, ಎದರೆ ಅದು ಸಂದರ್ಭಕ್ಕೆ ಹೊಂದಿಕೊಳ್ಳದೆ, ಅದಕ್ಕೆ ಸಂಬಂಧಪಟ್ಟಂತೆ ಸುಸಂಗತವಾದ ಬೇರೊಂದು ಅರ್ಥ ತೋರಿಬಂದರೆ ಅದಕ್ಕೆ 'ಲಕ್ಷ್ಯಾರ್ಥ'ವೆಂದೂ, ಅದನ್ನು ತಿಳಿಸುವ ಶಬ್ದವ್ಯಾಪಾರಕ್ಕೆ 'ಲಕ್ಷಣಾವೃತ್ತಿ' ಎಂದೂ ಹೆಸರು. (ಲಕ್ಷಣಾವೃತ್ತಿಯಲ್ಲಿ 'ಸಂಬಂಧಮೂಲ', 'ಸಾದೃಶ್ಯಮೂಲ' ಎಂದು ಎರಡು ಮುಖ್ಯ ಒಳಭೇದಗಳು). "ಲಕ್ಷಣೆ ವಾಗ್‌ವ್ಯವಹಾರದ ನಿತ್ಯಧರ್ಮ ; ಕವಿಗಳ ಕಾಮಧೇನು ; ಅನೇಕ ಅಲಂಕಾರಗಳ ಜೀವದ್ರವ್ಯ". ಲಕ್ಷಣಾವೃತ್ತಿಯ ಈ ಮಹಿಮೆಗೆ ಕಾರಣ, ಅದರಿಂದ ಒದಗುವ ಇನ್ನೂ ಹೆಚ್ಚಿನ ಆರ್ಥಿಕ ಪ್ರಯೋಜನ, ಲಕ್ಷಣೆಯಿಂದ ಸ್ಫುರಿಸಿ ಬೆಳೆಯುವ ಅರ್ಥಪರಂಪರೆ. ಇದಕ್ಕೆ ಸಾಧಕವಾದ ಶಬ್ದಶಕ್ತಿ ಅಥವಾ ಶಬ್ದವ್ಯಾಪಾರವೆ 'ವ್ಯಂಜನಾವೃತ್ತಿ'. ವ್ಯಂಜನಾ ವ್ಯಾಪಾರದ ಫಲವೇ ವ್ಯಂಗ್ಯಾರ್ಥ. ಹೀಗೆ, ಅಭಿಧಾವೃತ್ತಿ, ಲಕ್ಷಣಾವೃತ್ತಿ ವ್ಯಂಜನಾವೃತ್ತಿ

---

(ರನ್ನನು ಶಬ್ದಾಲಂಕಾರಗಳನ್ನು ಗಣನೆಗೆ ತೆಗೆದುಕೊಂಡಿಲ್ಲವೆಂದು ಭಾವಿಸಬೇಕು). ಆದ್ದರಿಂದ, ರನ್ನನು 'ಕವಿರಾಜಮಾರ್ಗ'ದಲ್ಲಿ ಹೇಳಿರುವ ಅಲಂಕಾರಗಳ ಸಂಖ್ಯೆಯನ್ನು ನೆನೆದೇ ಈ ಮಾತು ಹೇಳಿದ್ದಾನೆಂದು ತೋರುತ್ತದೆ.

ಹೀಗಿರುವುದರಿಂದ, 'ಧ್ವನಿಯೆಂಬುದಳಂಕಾರಂ' ಎಂಬ ಪದ್ಯ ಪ್ರಕ್ಷಿಪ್ತವಲ್ಲವೆಂದು ನಮಗೆ ಖಚಿತವಾಗುತ್ತದೆ.

ಎಂಬುದಾಗಿ, ಶಬ್ದವ್ಯಾಪಾರಗಳು ಮೂರು ಬಗೆ; ಇವುಗಳಿಂದ ಹೊರಡುವ ಅರ್ಥಗಳೇ ಕ್ರಮವಾಗಿ ವಾಚ್ಯಾರ್ಥ, ಲಕ್ಷ್ಯಾರ್ಥ ಮತ್ತು ವ್ಯಂಗ್ಯಾರ್ಥ. ವಾಚ್ಯಾರ್ಥಕ ಶಬ್ದವೆ 'ವಾಚಕ' ; ಲಕ್ಷ್ಯಾರ್ಥವನ್ನು ತಿಳಿಸುವ ಶಬ್ದ 'ಲಕ್ಷಕ' ; ವ್ಯಂಜನಾ ವ್ಯಾಪಾರವುಳ್ಳ ಶಬ್ದ ಅಥವಾ ಅರ್ಥ 'ವ್ಯಂಜಕ'. ವ್ಯಂಗ್ಯಾರ್ಥದಲ್ಲಿ ಎರಡು ಸ್ಥೂಲಭೇದಗಳು : ಒಂದು ಪ್ರಧಾನ, ಇನ್ನೊಂದು ಅಪ್ರಧಾನ. ವ್ಯಂಗಕಳಾದ ಶಬ್ದಾರ್ಥಗಳಿಗಿಂತ ಅದು ಹೆಚ್ಚು ಮನೋಜ್ಞವಾಗಿದ್ದರೆ, ಅದು 'ಧ್ವನಿ' ಎನಿಸಿಕೊಳ್ಳುತ್ತದೆ. ಇನ್ನೊಂದು ಬಗೆಯಲ್ಲಿ ಹೇಳುವುದಾದರೆ, ವಾಚ್ಯಾರ್ಥ ಸ್ವಾರಸ್ಯವನ್ನು ಪೋಣ ಮಾಡುವುದು ಅಪ್ರಧಾನ ವ್ಯಂಗ್ಯ ; ರಮ್ಯತಾನುಭವಮೂಲವಾದ ಚಿತ್ತವಿಶ್ರಾಂತಿಸಾಧಕವಾದದ್ದು ಪ್ರಧಾನ ವ್ಯಂಗ್ಯ ಅಥವಾ 'ಧ್ವನಿ' ಈ ಪ್ರಧಾನ ವ್ಯಂಗ್ಯವು (ಅಥವಾ ಧ್ವನಿ) ರಸಪರ್ಯವಸಾಯಿಯಾಗಿದ್ದರೆ, ಎಂದರೆ ಚಿತ್ತವನ್ನು ರಸಾನುಭವಕ್ಕೆ ಒಯ್ದರೆ, ಅದು 'ರಸಧ್ವನಿ' ; ವ್ಯಂಗ್ಯಾರ್ಥವು ಉಪಮಾದಿ ಅಲಂಕಾರಗಳನ್ನು ಸೂಚಿಸಿದರೆ, ಅದು 'ಅಲಂಕಾರ ಧ್ವನಿ', ಎಂದರೆ ವಾಚ್ಯವಾಗಿದ್ದರೆ ಅಲಂಕಾರ ಎನಿಸಿಕೊಳ್ಳುತಿದ್ದ್ದದು ಸೂಚ್ಯವಾಗಿರುವ ಪ್ರಯುಕ್ತ ಧ್ವನಿ ಎನಿಸಿಕೊಳ್ಳತ್ತದೆ. ; ರಸದ್ಯೋತಕವೂ ಅಲಂಕಾರ ಸೂಚಕವೂ ಅಲ್ಲದ ವ್ಯಂಗ್ಯಾರ್ಥವು 'ವಸ್ತುಧ್ವನಿ' ಎನಿಸುತ್ತದೆ.

ವ್ಯಂಜಕವಿಲ್ಲದೆ ವ್ಯಂಗ್ಯವಿಲ್ಲವಷ್ಟೆ. ಈ ವ್ಯಂಜಕ ವ್ಯಂಗ್ಯಗಳ ಸಂಬಂಧವನ್ನು ಅವಲಂಬಿಸಿ ಅನೇಕ ಧ್ವನಿಪ್ರಕಾರಗಳು ಉಂಟಾಗುತ್ತವೆ. ವ್ಯಂಜನಾ ವೃತ್ತಿಗೆ ಲಕ್ಷಣಾ ವ್ಯಾಪಾರ ಕಾರಣವಾಗಬಹುದು. ಇಲ್ಲವೆ ಅಭಿದಾವ್ಯಾಪಾರ ಕಾರಣವಾಗಬಹುದು. ಕೆಲವು ವೇಳೆ ಶಬ್ದ ಇಲ್ಲವೆ ಅರ್ಥ ವ್ಯಂಜಕವಾಗಬಹುದು. ಈ ಒಳ ಭೇದಗಳ ವಿವರಣೆ ಇಲ್ಲಿ ಸಾಧ್ಯವೂ ಅಲ್ಲ ; ಪ್ರಕೃತವೂ ಅಲ್ಲ. ಅಭಿಧಾವ್ಯಾಪಾರ ಮೂಲವಾದ ಧ್ವನಿಯಲ್ಲಿ 'ಶಬ್ದಶಕ್ತಿ ಮೂಲ'ವಾದದ್ದು, 'ಅರ್ಥಶಕ್ತಿ ಮೂಲ'ವಾದದ್ದು – ಎಂಬೀ ಎರಡು ಪ್ರಭೇದಗಳನ್ನು ಇಲ್ಲಿ ಗಮನಿಸಿದರೆ ಸಾಕು. ('ಕವಿರಾಜಮಾರ್ಗ'ದ ಮೇಲ್ಕಂಡ ಪದ್ಯದಲ್ಲಿರುವಂತೆ) ಶಬ್ದಕ್ಕೆ ಶ್ಲೇಷಾರ್ಥವಿರುವೆಡೆಯಲ್ಲಿ ಅದು ಶ್ಲೇಷಾಲಂಕಾರವೇ ಹೊರತು, ಧ್ವನಿ ಹೇಗಾದೀತು ಎಂಬ ಪ್ರಶ್ನೆ ಸಹಜ. ಪ್ರಕರಣಾದಿಗಳ ಬಲದಿಂದ ವಾಚ್ಯಾರ್ಥವು ನಿಯಮನಗೊಂಡು, ಇನ್ನೊಂದು ಅರ್ಥವು ಸ್ಫುರಿಸಿದ ಸಂದರ್ಭದಲ್ಲಿ ಅದು ಶ್ಲೇಷಾಲಂಕಾರವೇ ಹೊರತು, ಧ್ವನಿ ಹೇಗಾದೀತು ಎಂಬ ಪ್ರಶ್ನೆ ಸಹಜ. ಪ್ರಕರಣಾದಿಗಳ

ಬಲದಿಂದ ವಾಚ್ಯಾರ್ಥವು ನಿಯಮನಗೊಂಡು, ಇನ್ನೊಂದು ಅರ್ಥವು ಸ್ಫುರಿಸಿದ ಸಂದರ್ಭದಲ್ಲಿ ಅದು ವ್ಯಂಗ್ಯವೇ ಆಗುತ್ತದೆ. (ಹಾಗೆ ನಿಯಮನ ಮಾಡತಕ್ಕ ಸಂದರ್ಭಗಳು ಯಾವುವೆಂದರೆ, ಸಂಯೋಗ, ವಿಪ್ರಯೋಗ, ಸಾಹಚರ್ಯ, ಅನ್ಯ ಶಬ್ದಸಾನ್ನಿಧ್ಯ, ಇತ್ಯಾದಿ). ಈ ವ್ಯಂಗ್ಯಾರ್ಥವು ಶಬ್ದ ಶಕ್ತಿ ಮೂಲವಾದ 'ಅಲಂಕಾರ ಧ್ವನಿ'ಯಾದಲ್ಲಿ ಮಾತ್ರ ಅದು 'ಧ್ವನಿ' ಎಂದೂ, ಶಬ್ದಶಕ್ತಿಮೂಲವು ವಸ್ತುಧ್ವನಿಯೂ ಆಗಿರಬಹುದೆಂದೂ ಅಭಿಪ್ರಾಯ ಭೇದಗಳಿವೆ. ಅರ್ಥಶಕ್ತಿ ಮೂಲವಾದ ಧ್ವನಿಯಲ್ಲಿ ಎರಡು ಬಗೆಗಳಿವೆ. ಅವುಗಳ ವಿವರಣೆ ಇಲ್ಲಿಗೆ ಅಪ್ರಸಕ್ತ.)

ಈಗ ಪದ್ಯದ ಲಕ್ಷ್ಯಭಾಗದ ಅರ್ಥವನ್ನು ಪರಿಶೀಲಿಸೋಣ: ಈ ವಾಕ್ಯದಲ್ಲಿ ಸುಂದರಿಯೊಬ್ಬಳ ಮುಖವನ್ನು ವರ್ಣಿಸಿದೆ. ಅದರ ವಾಚ್ಯಾರ್ಥವಿದು: "ಕಮಲದಲ್ಲಿ ಮೀನಿನ ಜೋಡಿ ಶೋಭಿಸುತ್ತಿದೆ; ಇದು ಆಶ್ಚರ್ಯ!" (ಅನಿಮಿಷ' ಎಂದರೆ 'ರೆಪ್ಪೆಯಿಕ್ಕದ್ದು' ಎಂಬ ಮೂಲಾರ್ಥದಿಂದ ರೂಪಗೊಂಡ ಪ್ರಸಿದ್ಧವಾದ ಅರ್ಥಗಳು ಎರಡು: ೧. 'ಅಮರ' ಅಥವಾ 'ದೇವ'; 'ದೇವಿ'ಯೂ ಆಗಬಹುದು. ೨. ಮೀನು) ಕಮಲದಲ್ಲಿ ಅಮರಯುಗ್ಮ ಇರುವುದು ತೀರ ಅಸಂಭವ. ಈ ಕಮಲವು ನೀರಿನಲ್ಲಿರುವುದರಿಂದ, ಜಲಚರವೇ ಆದ ಮೀನು ಕಮಲದಲ್ಲಿ ಬಂದು ನೆಲಸಿರುವುದು, ಅಸಂಭವವೇನಲ್ಲ. ಆದ್ದರಿಂದ, 'ಕಮಲದಲ್ಲಿ ಮೀನಿನ ಜೋಡಿ' ಎಬ ವಾಚ್ಯಾರ್ಥ ಪ್ರತೀತವಾಗುತ್ತದೆ. ಆದರೆ, ನೀರನ್ನುಳಿದ ಮೀನದ್ವಯ ಕಮಲದಲ್ಲಿ ಕೆಲವು ಕಾಲ ಇರಬಹುದೇ ಹೊರತು ಶೋಭಿಸುವ ಮಟ್ಟಿಗೆ ('ಒಪ್ಪಿ ತೋರ್ಪುದು') ಚಿರಕಾಲ ಇರಲು ಸಾಧ್ಯವಿಲ್ಲ. ಅದು ಸಂಭವವೂ ಅಲ್ಲ ; 'ಇದು ಚೋದ್ಯಂ' ಎಂಬ ಉಕ್ತಿಯ ಬಲದಿಂದ, 'ಕಮಲದಲ್ಲಿ ಸದಾಕಾಲವೂ ಇರುವ ಮೀನಿನ ಜೋಡಿ' ಯಾವುದೆಂಬುದರ ಕಡೆಗೆ ನಮ್ಮ ಆಲೋಚನೆ ಹರಿಯುವಂತಾಗಿ, ವಾಕ್ಯದ ಮುಖ್ಯಾರ್ಥಕ್ಕೆ (ವಾಚ್ಯಾರ್ಥಕ್ಕೆ) ಬಾಧೆ ತಟ್ಟುತ್ತದೆ. ಮುಖವನ್ನು ಕಮಲಕ್ಕೆ ಹೋಲಿಸುವುದು ಹಾಗೂ ಹೆಣ್ಣಿನ ಕಣ್ಣನ್ನು ಮೀನಿಗೆ ಹೋಲಿಸುವುದು ಪ್ರಸಿದ್ಧವಾಗಿರುವುದರಿಂದಲೂ, ಮೀನಿನ **'ಜೋಡಿ'** ಎಂದಿರುವುದರಿಂದಲೂ, 'ಕಮಲಸದೃಶವಾದ ಮುಖದಲ್ಲಿ ಮೀನಸದೃಶವಾದ ನಯನದ್ವಯ (ಎರಡು ಕಣ್ಣುಗಳು)' ಎಂಬ ಅರ್ಥವು ಸ್ಫುರಿಸುತ್ತದೆ. ('ಅನಿಮಿಷ' ಎಂಬ ಪದಕ್ಕೆ ಶ್ಲೇಷಾರ್ಥವಿದ್ದರೂ ಅನ್ಯಶಬ್ದಗಳ

ಸಾಹಚರ್ಯಬಲದಿಂದ 'ಅಮರ' ಎಂಬ ಅರ್ಥವು ತಿರಸ್ಕೃತವಾಗಿ 'ಮೀನು' ಎಂಬ ವಾಚ್ಯಾರ್ಥವಷ್ಟಕ್ಕೆ 'ಅನಿಮಿಷ'ದ ವಾಚ್ಯಾರ್ಥವ್ಯಾಪ್ತಿಯು ಇಲ್ಲಿ ನಿಯಮನ ಗೊಂಡಿದೆ). ಕಮಲದಂಥ ಮುಖ, ಮೀನಿನಂಥ ಕಣ್ಣು ಎಂಬ ಉಪಮೆ (ಅರ್ಥಾಲಂಕಾರ) ಇಲ್ಲಿ ವ್ಯಂಗ್ಯವಾಗಿದೆ. (ಮುಖಕಮಲದಲ್ಲಿ ಮೀನನೇತ್ರ ಎಂದರೆ 'ರೂಪಕ'ವಾಗುತ್ತದೆ). ಇದೇ ಇಲ್ಲಿನ ವ್ಯಂಗ್ಯಾರ್ಥ. ಇದು ಶಬ್ದಶಕ್ತಿಮೂಲವಾದ 'ಅಲಂಕಾರ ಧ್ವನಿ' ಎಂಬಲ್ಲಿ ಸಂದೇಹಕ್ಕೆ ಎಡೆಯಿಲ್ಲ ಎಂದು ನಮ್ಮ ಅಭಿಪ್ರಾಯ. ಹೀಗೆ, ವಾಚ್ಯವಾಗಿರಬಹುದಾದ ಉಪಮಾಲಂಕಾರವು ಇಲ್ಲಿ ಸೂಚ್ಯಕವಾಗಿರುವುದರಿಂದ, ಈ 'ಧ್ವನಿ' ಪ್ರಧಾನವಾದ ಉಕ್ತಿವೈಚಿತ್ರ್ಯವನ್ನೆ ಮಾರ್ಗಕಾರನು 'ಅಲಂಕಾರ' ಎಂದು ಕರೆದಿದ್ದಾನೆ.

ಮೇಲ್ಕಂಡ ಲಕ್ಷ್ಯದ ವಿರಮೆಯಲ್ಲಿ ಹೆಚ್ಚಿನ ಕ್ಲೇಷವೇನೂ ಕಂಡು ಬರುವುದಿಲ್ಲ. ಮಾರ್ಗಕಾರನು ಹೇಳುವ ಲಕ್ಷಣಕ್ಕೆ ಇದು ಅನುಗುಣವಾಗಿದೆಯೇ ಎಂಬುದನ್ನು ಪರಿಶೀಲಿಸುವಲ್ಲಿ ಕ್ಲೇಶ ಕಂಡು ಬಂದಿದೆ. ಮಾರ್ಗಕಾರನ ಈ ಪದ್ಯಕ್ಕೆ ಮೊತ್ತಮೊದಲು ವ್ಯಾಖ್ಯಾನಮಾಡಿರುವ ಶ್ರೇಯಸ್ಸು ಮುಳಿಯ ತಿಮ್ಮಪ್ಪಯ್ಯನವರಿಗೆ ಸಲ್ಲಬೇಕು. (ಕ. ಮಾರ್ಗವಿವೇಕ – ೨ ; ೧೯೭೩). ಲಕ್ಷ್ಯವಾಕ್ಯದಲ್ಲಿ ಔಪಮ್ಯವು ಧ್ವನಿತವಾಗುತ್ತಿದೆ ಎಂಬ ಅವರ ಗ್ರಹಿಕೆಯನ್ನೆ ನಾವು ಸ್ವೀಕರಿಸಿದ್ದೇವೆ. ಬಳಿಕ, ಡಾ॥ ಕೆ. ಕೃಷ್ಣಮೂರ್ತಿಯವರು ತಮ್ಮ 'ಆನಂದವರ್ಧನನ ಕಾವ್ಯಮೀಮಾಂಸೆ'ಯಲ್ಲಿ – "ಧ್ವನಿಯಿಸುಗುಂ ಶಬ್ದದಿಂದಂ, ಅರ್ಥದೆ ದೂಷ್ಯಂ" ಎಂಬ ಲಕ್ಷ್ಯ ಭಾಗಕ್ಕೆ : "ಮುಖ್ಯವಾದ ಅರ್ಥವು ಅಸಂಗತ, ಆತ ಏವ ದೂಷ್ಯ, ಎನ್ನುವಂತಿದ್ದರೂ ಧ್ವನಿಯೆಂಬ ವ್ಯಾಪಾರಾಂತರದಿಂದ ಶಬ್ದವು ಅರ್ಥಾಂತರವನ್ನು ಬೋಧಿಸುವುದರಲ್ಲಿ ಇರುವ ಚಮತ್ಕಾರವೇ ಈ ಅಲಂಕಾರದ ಲಕ್ಷಣ" – ಎಂದು ವಿವರಣೆಯಿತ್ತಿದ್ದಾರೆ. "ಇಷ್ಟು ಅರ್ಥವು ಮೂಲ ವಾಕ್ಯದಿಂದ ಹೊರಡಲಾರದು ಎಂದು ನಮಗೆ ತೋರುತ್ತದೆ" ಎಂದು ತೀ.ನಂ.ಶ್ರೀ. ಯವರ ಸಂದೇಹ. ಧ್ವನಿತತ್ತ್ವದ ಪ್ರಕ್ರಿಯೆಯನ್ನು ಅನ್ವಯಿಸಿ, ನಮಗೆ ಸಮ್ಮತವಾದ ಕೃಷ್ಣಮೂರ್ತಿಯವರ ಅರ್ಥವಿವರಣೆಯನ್ನೇ ವಿಸ್ತಾರವಾಗಿ ಮೇಲೆ ಪ್ರತಿಪಾದಿಸಲು ಪ್ರಯತ್ನಸಿದ್ದೇವೆ. ಲಕ್ಷಣ ವಾಕ್ಯವನ್ನು ವಿವರಿಸುತ್ತಾ "ಶಬ್ದಶಕ್ತಿ – ಮೂಲಧ್ವನಿಯನ್ನೇನಾದರೂ ಕವಿರಾಜಮಾರ್ಗಕಾರನು

ಮನಸ್ಸಿನಲ್ಲಿ ಇಟ್ಟುಕೊಂಡಿರಬಹುದೆ ?' ಎಂಬ ಸದೇಹವನ್ನೂ ತೀ.ನಂ.ಶ್ರೀ.ಯವರೇ ವ್ಯಕ್ತಪಡಿಸಿದ್ದಾರೆ. 'ಏಕೆ ಇಟ್ಟುಕೊಂಡಿರಬಾರದು?' ಎಬ ಪ್ರಮೇಯದ ಮೇಲೆಯೆ ನಮ್ಮ ಮೇಲ್ಕಂಡ ಪ್ರತಿಪಾದನೆ ಸಾಗಿದೆ. ಅವರೂ ಈ ಪ್ರಮೇಯವನ್ನಿಟ್ಟುಕೊಂಡು, ಲಕ್ಷ್ಯವಾಕ್ಯದ 'ಆನಿಮಿಷ' ಶಬ್ದದ ಶ್ಲೇಷಾರ್ಥದ ಆಧಾರದ ಮೇಲೆ, ''ದೇವತೆಗಳು 'ಅನಿಮಿಷ'ರಾಗಿರುವುದರಿಂದ ಅವಳು ಮಾನವಿಯಲ್ಲ, ದೇವಿ ಎಂಬ ಅರ್ಥವೂ ಇಲ್ಲಿ ಸ್ಫುರಿಸಬಹುದು. ಇದೇ ಇಲ್ಲಿಯು 'ಚೋದ್ಯ'ವಾಗಿರಬಹುದೆ? ಇದು 'ಶಬ್ದ'ಶಕ್ತಿಯಿಂದ ಧ್ವನಿಸುವುದೆಂಬುದನ್ನೂ

---

೮೧. ಲಕ್ಷ್ಯ ವಾಕ್ಯದ ಶಬ್ದಗಳಿಂದಲೇ ಉಪಮಾಲಂಕಾರವು ಧ್ವನಿತವಾಗಿದೆಯೆಂದು ಮೇಲೆ ವಿವರಿಸಿರುವೆವಷ್ಟೆ. ವ್ಯಂಗ್ಯವಾದ ಅರ್ಥದಿಂದ ಅದು 'ಪೋಷಿತ'ವಾಗಿರುವುದರಿಂದ, 'ಅರ್ಥದೆ ದೂಷ್ಯಂ' ಎಂಬೆಡೆಯಲ್ಲಿ '– ಪೋಷ್ಯಂ' ಎಂದು ಮೂಲಪಾಠವಿದ್ದು, ಪ್ರತಿಕಾರನ ಹಸ್ತದೋಶದಿಂದ ಅದು '–ದೂಷ್ಯಂ' ಎಂದಾಗಿರಬಹುದೆ ಎಂಬ ಸಂದೇಹವೂ ಉಂಟಾಗುತ್ತೆ. ಪಾಠಾಂತರವಿಲ್ಲದಿರುವುದರಿಂದಲೂ ಆಧಾರವಿಲ್ಲದೆ ಈ ಬಗೆಗೆ ಹೀಗೆಯೇ ಸರಿಯೆಂದು ಖಂಡಿತವಾಗಿ ಹೇಳಲಾಗುವುದಿಲ್ಲ.

ನಮ್ಮ ಈ ಅಡಿಟಿಪ್ಪಣಿಯ ಬಗೆಗೆ ಪ್ರಸ್ತಾವಿಸಿ ಕೇಳಲಾಗಿ, ಪ್ರೊ॥ ಡಿ. ಎಲ್. ನರಸಿಂಹಾಚಾರ್ಯರ ತಮ್ಮ ಅಮೂಲ್ಯವಾದ ಅಭಿಪ್ರಾಯವನ್ನು ತಿಳಿಸಿ ಉಪಕಾರಮಾಡಿದ್ದಾರೆ : ''ಧ್ವನಿ'ಯೆಂಬ ಒಂದು ವಿಷಯ ಕವಿರಾಜಮಾರ್ಗಕ್ಕಿಂತ ಹಿಂದೆಯೇ ಪ್ರಸಿದ್ಧವಾಗಿದ್ದಿರಬಹುದು – ಇದಕ್ಕೆ ಆಧಾರವನ್ನು ಹೇಳಬೇಕು. ಇದನ್ನು ನೃಪತುಂಗನೂ ಅವನ ಹಿಂದಿನವರೂ ಒಂದು ಅಲಂಕಾರವೆಂದು ಪರಿಗಣಿಸಿದ್ದರು – ರಸವದಲಂಕಾರದಂತೆ. ಅನಂತರ ಅದು ಆನಂತವರ್ಧನನ ಕೈಯಲ್ಲಿ ಒಂದು ಸಾರ್ವತ್ರಿಕ ತತ್ತ್ವವಾಗಿ ಪರಿಣಮಿಸಿರಬಹುದು. ಆದಿಪುರಾಣದ ಪದ್ಯದಲ್ಲೂ (೯–೧೧೯) 'ಧ್ವನಿಯೆನಿಸಿದಲಂಕಾರಧ್ವನಿಯೆಸೆವಿನಂ' ಎದು ಧ್ವನಿಯೆಬುದು ಒಂದು ಅಲಂಕಾರವೆಂಬ ಅರ್ಥ ಬರುತ್ತದೆ. ಕವಿರಾಜಮಾರ್ಗದ ಪದ್ಯಕ್ಕೆ ನನ್ನ ಅರ್ಥ ಹೀಗೆ: ಧ್ವನಿಯೆಂಬುದು ಒಂದು ಅಲಂಕಾರ ; ಅದು ಕವಿಪ್ರಯುಕ್ತವಾದ ಶಬ್ದದಿಂದ ಹೊರಹೊಮ್ಮುತ್ತದೆ; ಆ ವಾಚ್ಯಾರ್ಥವನ್ನೇ ಹಿಡಿದುಕೊಂಡು ಹೋದರೆ ಅರ್ಥಹೀನವಾಗಿ ದೂಷ್ಯವಾಗುತ್ತದೆ. 'ಕಮಲದಲ್ಲಿ ಅನಿಮಿಷಯುಗ' ಎಂದರೆ ಕಮಲದಲ್ಲಿ ಎರಡು ಮೀನುಗಳು ಎಂಬ ವಾಚ್ಯಾರ್ಥ ದೂಷ್ಯ. 'ಮುಖದಲ್ಲಿ ಎರಡು ಕಣ್ಣುಗಳು' ಎಂಬ ಧ್ವನಿತಾರ್ಥ ಸುಂದರ, ಇದು ಧ್ವನಿಯೆಂಬ ಅಲಂಕಾರ. ಆದ್ದರಿಂದ, ನೀವು ಆಧಾರವಿಲ್ಲದೆ 'ದೂಷ್ಯ'ವನ್ನು 'ಪೋಷ್ಯ' ಎಂದು ತಿದ್ದಬೇಕಾಗಿಲ್ಲ. ಇದು ನನ್ನ ದೃಷ್ಟಿ.'' ಡಿ.ಎಲ್.ಎನ್. (ತಿದ್ದುಪಾಟು ಮಾಡಿಲ್ಲ. ನಮ್ಮದು ಕೇವಲ ವಿಚಾರಾರ್ಹವಾದ ಒಂದು ಸೂಚನೆಯಷ್ಟೆ, – ಸಂ.)

ಲಕ್ಷಿಸಬೇಕು" ಎಂದು ಲಕ್ಷ್ಯಲಕ್ಷಣ ಸಮನ್ವಯ ಮಾಡಿದ್ದಾರೆ. ಮೀನ, ಮತ್ಸ್ಯ ಎಂಬ ಪರ್ಯಾಯ ಪದಗಳಿರುವಲ್ಲಿ 'ಅನಿಮಿಷ' ಎಂಬ ಪದವನ್ನು ಕವಿ ಉದ್ದೇಶಪೂರ್ವಕವಾಗಿ ಉಪಯೋಗಿಸಿರುವನೆಂಬ ಅವರ ಗ್ರಹಿಕೆ ಸಮರ್ಥನೀಯ. ಆದರೆ, ಡಾ॥ ಕೃಷ್ಣಮೂರ್ತಿಯವರು ಶಂಕೆಪಟ್ಟಿರುವಂತೆ, ತೀ.ನಂ.ಶ್ರೀ.ಯವರು ಲಕ್ಷ್ಯದ ಅರ್ಥವನ್ನು ಹಿಗ್ಗಿಸಿ ಎಳೆದಿರುವಂತೆ ಕಾಣುತ್ತದೆ. ಶ್ಲೇಷಾರ್ಥವನ್ನು ಅಂಗೀಕರಿಸಿ, ಶಬ್ದಶಕ್ತಿ ಮೂಲಧ್ವನಿ ಹೇಗೆ ವರ್ತಿಸಿದೆ ಎಂಬುದನ್ನು ನಾವು ಈ ಮೊದಲೇ ಸೂಚಿಸಿದ್ದೇವೆ."[೮೧]

ಪದ್ಯ ೨೦೯-೨೧೭ : ಈ ಪದ್ಯಗಳಲ್ಲಿ ಮಾರ್ಗಕಾರನು ದಂಡಿಯ ಶ್ಲೋಕಗಳನ್ನನು ಸರಿಸಿ 'ಮಹಾಕಾವ್ಯ'ದ ಲಕ್ಷಣಗಳನ್ನು ವಿವರಿಸಿದ್ದಾನೆ. ದಂಡಿಯ ಮತದಂತೆ ಮಹಾಕಾವ್ಯದ ಲಕ್ಷಣಗಳು ಹೀಗಿವೆ :

ಸರ್ಗಬಂಧೋ ಮಹಾಕಾವ್ಯ ಮುಚ್ಯತೇ ತಸ್ಯ ಲಕ್ಷಣಂ ।
ಅಶೀರ್ನಮಸ್ಕ್ರಿಯಾ ವಸ್ತುನಿರ್ದೇಶೋ ವಾಽಪಿ ತನ್ಮುಖಂ ॥

(ಅನೇಕ ಸರ್ಗಗಳುಳ್ಳ 'ಪ್ರಬಂಧ'ವು ಮಹಾಕಾವ್ಯ. ಅದರ ಲಕ್ಷಣಗಳು : ಅದರ ಪ್ರಾರಂಭದಲ್ಲಿ 'ಆಶೀಃ' (= ಹಾರೈಕೆ), 'ನಮಸ್ಕ್ರಿಯಾ' (= ನಮಸ್ಕಾರ), ಇಲ್ಲವೆ 'ವಸ್ತುನಿರ್ದೇಶ'ವು ಇರುತ್ತದೆ.)

ಇತಿಹಾಸ ಕಥೋದ್ಭೂತಮಿತರದ್ವಾ ಸದಾಶ್ರಯಂ ।
ಚತುರ್ವರ್ಗಫಲಾಯತ್ತಂ ಚತುರೋದಾತ್ತನಾಯಕಂ ।

(ಅದು ಇತಿಹಾಸದಿಂದಲಾಗಲಿ ಕಥೆಯೊಂದರಿಂದಾಗಲಿ ಉದ್ಭೂತವಾಗಿರಬಹುದು; ಅಥವಾ ಸತ್ಯ ಸಂಗತಿಯನ್ನು ಕುರಿತಿರಬಹುದು. ಅದು ಚತುರ್ವಿದ ಪುರುಷಾರ್ಥಗಳ (= ಧರ್ಮ, ಅರ್ಥ, ಕಾಮ, ಮೋಕ್ಷ) ಫಲವನ್ನು ಒಳಗೊಂಡಿರುತ್ತದೆ ; ಅದರ ನಾಯಕನು ಚತುರನೂ ಉದಾತ್ತನೂ ಆಗಿರುತ್ತಾನೆ.)

ನಗರಾರ್ಣವ ಶೈಲರ್ತು ಚಂದ್ರಾರ್ಕೋದಯವರ್ಣನೈಃ ।
ಉದ್ಯಾನಸಲಿಲಕ್ರೀಡಾ ಮಧುಪಾನ ರತೋತ್ಸವೈಃ ।

(ನಗರ, ಸಮುದ್ರ, ಪರ್ವತ, ಋತು, ಚಂದ್ರೋದಯ, ಸೂರ್ಯೋದಯ - ಇವುಗಳ ವರ್ಣನೆಯಿಂದಲೂ ಉದ್ಯಾನಕ್ರೀಡೆ, ಜಲಕ್ರೀಡೆ, ಮಧುಪಾನೋತ್ಸವ, ಪ್ರಿಯರ ಸಮಾಗಮ - ಇವುಗಳಿಂದಲೂ)

ವಿಪ್ರಲಂಭೈರ್ವಿವಾಹೈಶ್ಚ ಕುಮಾರೋದಯವರ್ಣನೈಃ ।
ಮಂತ್ರದೂತಪ್ರಯಾಣಾಜಿ ನಾಯಕಾಭ್ಯುದಯೈರಪಿ ॥

(ಪ್ರಣಯಿಗಳ ಅಗಲಿಕೆ ಮತ್ತು ವಿವಾಹಗಳಿಂದಲೂ, ಕುಮಾರೋದಯ

ವರ್ಣನೆಗಳಿಂದಲೂ, ಮಂತ್ರಾಲೋಚನೆ, ದೂತಕಾರ್ಯ, ಪ್ರಯಾಣ, ಯುದ್ಧ ನಾಯಕನ ಅಭ್ಯುದಯ – ಇವುಗಳಿಂದಲೂ)

ಅಲಂಕೃತಮಸಂಕ್ಷಿಪ್ತಂ ರಸಭಾವನಿರಂತರಂ ।
ಸರ್ಗೈರನತಿವಿಸ್ತೀರ್ಣೈಃ ಪ್ರವ್ಯವೃತ್ತೈಃ ಸುಸಂಧಿಭಿಃ ॥

(ಅಲಂಕೃತವಾಗಿಯೂ ಎಂದರೆ ವಿವಿಧ ಶಬ್ದಾಲಂಕಾರ ಅರ್ಥಾಲಂಕಾರಗಳಿಂದ ಕೂಡಿದ್ದಾಗಿಯೂ ; ಸಂಕ್ಷಿಪ್ತವಾಗಿಲ್ಲದೆಯೂ ; ಎಡೆಬಿಡದೆ ರಸಭಾವಗಳಿಂದ ತುಂಬಿಯೂ ; ಅತಿ ದೀರ್ಘವಲ್ಲದೆಯೂ ಕಿವಿಗಿಂಪಾದ ವೃತ್ತಗಳಿಂದ ಕೂಡಿರುವವಾಗಿಯೂ ಒಳ್ಳೆಯ ಸಂಧಿಗಳುಳ್ಳವಾಗಿಯೂ ಇರುವ ಸರ್ಗಗಳಿಂದ ಕೂಡಿರತಕ್ಕದ್ದೂ ಆಗಿ)

ಸರ್ವತ್ರಭಿನ್ನ ವೃತ್ತಾಂತೈರುಪೇತಂ ಲೋಕರಂಜನಂ ।
ಕಾವ್ಯಂ ಕಲ್ಪಾಂತರಸ್ಥಾಯಿ ಜಾಯತೇ ಸದಲಂಕೃತಿ ॥

(ಎಲ್ಲ ಸಂದರ್ಭಗಳಲ್ಲಿಯೂ ಎಂದರೆ ಪ್ರತಿಸರ್ಗದಲ್ಲಿಯೂ ಬೇರೆಯ ಜಾತಿಯ ವೃತ್ತದಿದಲೇ ಕೊನೆಗೊಳ್ಳುವಂತಿದ್ದು, ಒಳ್ಳೆಯ ಅಲಂಕಾರವುಳ್ಳದ್ದಾಗಿರುವ ಕಾವ್ಯವು ಲೋಕರಂಜನವನ್ನು ಮಾಡುವುದಲ್ಲದೆ ಕಲ್ಪಾಂತದವರೆಗೂ ಚಿರಸ್ಥಾಯಿಯಾಗಿರುವುದು).

ಮಾರ್ಗಕಾರನ ವಾಗಾಡಂಬರಜಾಲದಲ್ಲಿ ಸಿಲುಕಿರುವ ಲಕ್ಷಣಗಳನ್ನು ಹೀಗೆ ಬಿಡಿಸಿ ಹೇಳಬಹುದು :–

ಇತಿಹಾಸೋಪಾಶ್ರಯಂ (= ಇತಿಹಾಸವನ್ನು ಆಶ್ರಯಿಸಿದ್ದು, ಎಂದರೆ ಅದರ ಆಧಾರದ ಮೇಲೆ ರಚಿತವಾದದ್ದು) ; ಕಥಾವಿಶ್ರುತ ಚತುರ ವಿಕಾಶೋತ್ಪಾದಿತಾರ್ಥೋತ್ಕರಂ (ಕಥಾ + ವಿಶ್ರುತ + ಚತುರ + ವಿಕಾಶ + ಉತ್ಪಾದಿತ + ಅರ್ಥ + ಉತ್ಕರಂ = ಕಥೆಯಲ್ಲಿ ಪ್ರಸಿದ್ಧವಾದ್ದೂ, ಚತುರವಾದ ಪ್ರಕಾಶನದಿಂದ ಉಂಟಾದ ಅರ್ಥಸಮೂಹದಿಂದ ಕೂಡಿದ್ದು) ; ಅತಿಕುಶಲಸಲೀಲಾಚಾರ ಲೋಕೋಪಕಾರೋದಿತ ಪರಮಗುಣೈಕೋದಾರ ಧೀರಾಧಿಕಾರಂ [ಅತಿ ಕುಶಲ + ಸಲೀಲಾ + ಆಚಾರ + ಲೋಕೋಪಕಾರ + ಉದಿತ + ಪರಮಗುಣೈಕ + ಉದಾರ + ಧೀರ + ಅಧಿಕಾರಂ : ಇದಕ್ಕೆ ಸಂವಾದಿಯಾದ ಲಕ್ಷಣ ವಿವರಣೆ 'ಕಾವ್ಯಾದರ್ಶ'ದಲ್ಲಿ ಇಲ್ಲ ; ಶಬ್ದಗಳು ಅರ್ಥವಾಗುವಂತಿದ್ದರೂ ತಾತ್ಪರ್ಯವು ಸ್ಪಷ್ಟವಾಗುವುದಿಲ್ಲ. ಬಹುಶಃ

ಹೀಗಿರಬಹುದು : ಬಹು ಕುಶಲತೆಯಿಂದಲೂ ಸೌಂದರ್ಯದಿಂದಲೂ ಕೂಡಿದ ಆಚಾರ ಮತ್ತು 'ಲೋಕೋಪಕಾರ'ಗಳಿಂದ (ಎಂದರೆ ಲೋಕಾನುಭವದ ಉಪಕಾರಕ ಸಂಗತಿಗಳಿಂದ ಕೂಡಿದ) ಉಂಟಾದ ಶ್ರೇಷ್ಠಗುಣದಿಂದ ಕೂಡಿದ್ದೂ, ಉದಾರವೂ ಧೀರವೂ ಆದ 'ಅಧಿಕಾರ' (= ಗ್ರಂಥ ವಿಭಾಗ)]; ಪರಮಸುಖಪದ ಶ್ರೀಧರ್ಮಕಾಮಾರ್ಥ ಮೋಕ್ಷಸ್ಥಿರ ವಿಷಯ ವಿಶೇಷಾಖ್ಯಾನ ವಿಖ್ಯಾತ ತತ್ತ್ವಂ [= ಶ್ರೇಷ್ಠವಾದ ಸುಖ ಸಂಪತ್ ಸ್ವರೂಪವಾದ ಧರ್ಮ, ಕಾಮ, ಅರ್ಥ, ಮೋಕ್ಷಗಳೆಂಬ ಸ್ಥಿರ ವಿಷಯಗಳನ್ನು ನಿರೂಪಿಸುವ ಪ್ರಸಿದ್ಧ ತತ್ತ್ವ); ಪುರ, ಜನಪದ, ಶೈಲ (=ಬೆಟ್ಟ), ಆದಿತ್ಯ ಚಂದ್ರರ ಉದಯಗಳು, ಮೃಗಗಣಗಳು – ಇವುಗಳ ವರ್ಣನೆಗಳ ನಿರ್ಣಯಾರ್ಥವುಳ್ಳದ್ದು; ಸಮುದಿತ ಕುರುಮಾಮೋದೋದಯ ಉದ್ಯಾನಲೀಲಾ (= ಚೆನ್ನಾಗಿ ಅರಳಿದ ಹೂಗಳ ಸುಗಂಧವು ಹರಡಿರುವ ವನಕ್ರೀಡೆ), ಕ್ರಮವಿಹಿತ ಜಲಕ್ರೀಡಾ ವಿನೋದಾದಿನೀತಂ – ಇವುಗಳಿಂದ ಸಾಗತಕ್ಕದ್ದು; ಪ್ರಮದ ಮದನಮಾದ್ಯದ್ಯೌವನೋದ್ಯಾನ ರಾಮಂ (= ಉಕ್ಕೇರುವ ಕಾಮದಿಂದ ಸೊಕ್ಕೇರಿದ ಯೌವನವೆಂಬ ಉದ್ಯಾನದಿಂದ ಮನೋಹರವಾದದ್ದು) ; ರಮಣ ರಣಿತಗೋಷ್ಠೀಬಂಧ ಸಂಧಿಪ್ರಬಂಧಂ (= ಪ್ರಿಯನ (ನಾಯಕನ?) ಮಧುರಾಲಾಪದ ?) ಇಂಪಾದ ಧ್ವನಿಯಿಂದ ಕೂಡಿದ ಗೋಷ್ಠಿ (= ಸಭೆ, ಕೂಟ)ಯನ್ನು ವರ್ಣಿಸುವ ಕಥಾ ಸಂಧಿಗಳನ್ನುಳ್ಳ ಪ್ರಬಂಧ (= ಕಾವ್ಯ)]; ವಿವಿಧ ವಿಭವಶೋಭಾರಂಭ ಲಂಭ ಪ್ರಲಂಭೋದ್ಭವ ವಿಹಿತ ವಿವಾಹೋತ್ಸಾಹ ಸಾಕಲ್ಯ ಕಲ್ಪಂ (= ಬಗೆಬಗೆಯ ವೈಭವಗಳಿಂದ ಶೋಭಿಸುವ ಧರ್ಮಗಳಿಂದ ವಿಧಿವತ್ತಾದ ವಿವಾಹ ಸಂಭ್ರಮಗಳನ್ನು ವರ್ಣಿಸುವ ಸಮಗ್ರವಾದ ವಿಧಿವಿಧಾನಗಳನ್ನುಳ್ಳದ್ದು (; ಪ್ರವರ ನೃಪಕುಮಾರಾತ್ತೋದಯಾದಿ ಪ್ರಮೋದಾಸವ ಸಮುದಿತ ಸೇವಾರಾತಿ ವೃತ್ತಾಂತ ವೃತ್ತಂ (= ಶ್ರೇಷ್ಠನಾದ ರಾಜಕುಮಾರನ ಜನನ ಸಂಗತಿಯೇ ಮುಂತಾದ ಸಂತೋಷವೆಂಬ ಮದ್ಯದ ಸೇವನೆ, ಅರಾತಿ (= ಶತ್ರು) ವೃತ್ತಾಂತ, – ಇವುಗಳಿಂದ ಕೂಡಿದ ನಿರೂಪಣೆ); ನಯವಿನಿಮಯ ನಾನಾ ಮಂತ್ರದೂತ ಪ್ರಯಾಣಾಕ್ಷಯ ಸಮಯ ವಿಳಾಸೋಲ್ಲಾಸಿ ಸಂಗ್ರಾಮಿಕಾಂಗಂ (= ನೀತಿವಿನಿಮಯದಿಂದ ಕೂಡಿದ ಅನೇಕ ಮಂತ್ರಾಲೋಚನೆಗಳು, ದೂತಕಾರ್ಯ, ಪ್ರಯಾಣ,

ಅನಂತಕಾಲದಲ್ಲೂ ಉಲ್ಲಾಸಕರವೆನಿಸಿರುವ ಯುದ್ಧ – ಇವುಗಳ ವರ್ಣನೆಯನ್ನು ಅಂಗವಾಗಿ ಉಳ್ಳದ್ದು); ಭಯವಿರಹಿತ ವೀರ್ಯೌದಾರ್ಯ ಗಂಭೀರ ಕಾರ್ಯಾಶ್ರಯ ವಿಶದ ಗುಣಶ್ರೀನಾಯಕೋತ್ಕರ್ಷವೇದ್ಯಂ (= ಭಯವಿಲ್ಲದ ವೀರ, ಔದಾರ್ಯ, ಘನವಾದ ಕಾರ್ಯಗಳನ್ನು ಎಸಗುವುದರಲ್ಲಿ ವ್ಯಕ್ತಪಡುವ ಗುಣಸಂಪತ್ತು – ಇವನ್ನುಳ್ಳ, ನಾಯಕನ ಅಭ್ಯುದಯವನ್ನು ತಿಳಿಸತಕ್ಕದ್ದು); ವಿಳಸಿತ ಸದಳಂಕಾರಾದಿ ಸಂಸಾಧಿತಾರ್ಥಂ (= ಸೊಗಸುವ ಒಳ್ಳೆಯ ಅಲಂಕಾರ ಮೊದಲಾದುವುಗಳಿಂದ ಸಾಧಿತವಾದ ಅರ್ಥವುಳ್ಳದ್ದು) ; ಕುಳವಿದಿತ ಪದೋದ್ಯತ್ಕೋಮಳಾಳಾಶೀಲಂ (= ಕುಲ + ವಿದಿತ + ಪದ + ಉದ್ಯತ್ + ಕೋಮಲ + ಆಲಾಪ + ಶೀಲಂ = ಶುದ್ಧವಾದ ಪದಗಳಿಂದ ಉಂಟಾದ ಲಲಿತವಾದ ಮಾತಿನ ರೀತಿಯುಳ್ಳದ್ದು) ; ಸುಳಲಿತಗುಣ ನಾನಾ ವೃತ್ತಜಾತಿ ಪ್ರವೃತ್ತಾಸ್ಖಳಿತ ರಸ ವಿಶೇಷೋಪಾಶ್ರಯ ಶ್ರೀನಿವೇಶಂ (= ಲಲಿತವಾದ ಗುಣಗಳಿಗೂ, ಬಗೆಬಗೆಯ ವೃತ್ತಜಾತಿಗಳ ಪ್ರಯೋಗಕ್ಕೂ, ನಿರಂತರವಾದ ರಸ ವಿಶೇಷಕ್ಕೂ ಎಡೆಗೊಡುವ ಸುಂದರವಾದ ನೆಲೆವೀಡಾಗಿರತಕ್ಕದ್ದು) ; ನಯವಿದುದಿತ ಯುಕ್ತಿವ್ಯಕ್ತ ಲೋಕ ಪ್ರತೀತ್ಯಾಶ್ರಯ ಸಕಳ ಕಳಾ ಲೀಲಾ ಕರಾಲ್ಪೋಪಜಲ್ಪಂ (= ನಯವಿದ್ + ಉದಿತ + ಯುಕ್ತಿವ್ಯಕ್ತಿ + ಲೋಕಪ್ರತೀತಿ + ಆಶ್ರಯ + ಸಕಲಕಲಾಲೀಲಾ + ಆಕರ + ಅಲ್ಪ + ಉಪಜಲ್ಪಂ = ರಾಜನೀತಿಯನ್ನು ಬಲ್ಲವರು ಹೇಳಿದ ಯುಕ್ತಿಗಳ, ಎಂದರೆ ಉಪಾಯಗಳ, ತಿಳಿವಳಿಕೆಯನ್ನೂ ಲೋಕಾನುಭವವನ್ನೂ ಒಳಗೊಂಡ ಎಲ್ಲ ಕಲೆಗಳ ವಿಲಾಸಕ್ಕೂ ಆಕರವೆನಿಸುವ ಅಪೂರ್ವವಾದ ಮಾತುಗಾರಿಕೆಯುಳ್ಳದ್ದು); ನಿಯತ ಸಮಯಸಾರಾ ಸಾಧನೀಯಾದಿಕಾರಾನ್ವಯ ಪರಮ ತಪೋನುಷ್ಠಾನ ನಿಷ್ಠಾರ್ಥಸಿದ್ಧಂ

---

೮೨. ಇಲ್ಲಿ ಪಾಠದೋಷವಿದ್ದರೂ ಇರಬಹುದು. ಮೇಲ್ಕಂಡ ತಾತ್ಪರ್ಯಕ್ಕೆ ಅನುಗುಣವಾಗಿ ಪಾಠವನ್ನು ಹೀಗೆ ತಿದ್ದಿಕೊಳ್ಳಬಹುದು : (ನಿಯತ + ಸಮಯಸಾರ + ಅಸಾಧನೀಯ +ಅಧಿಕಾರ + ಅನ್ವಯ + ಪರಮ ತಪೋನುಷ್ಠಾನನಿಷ್ಠ + ಅರ್ಥಸಿದ್ಧಂ) 'ನಿಯತ ಸಮಯಸಾರಾ ಸಾಧನೀಯಾಧಿ ಕಾರಾನ್ವಯ ಪರಮ ತಪೋನುಷ್ಠಾನನಿಷ್ಠಾರ್ಥಸಿದ್ಧಂ' (ಪಾಠಾಂತರಗಳು : ಪಾಠಕರ ಪ್ರತಿ : 'ತಪೋನುಷ್ಠಾನ ನಿಷ್ಟಾರ್ಥ ಸಿದ್ಧಂ', ಮದ್ರಾಸು ಪ್ರತಿ :–

[(ಇಲ್ಲಿ ಸ್ವಲ್ಪ ಅರ್ಥಕ್ಲೇಶವಿದೆ ; ತಾತ್ಪರ್ಯ ಹೀಗಿರಬಹುದು)]: ನಿಯತವಾದ ವೈದಿಕಸಮಯ ಜಿನಸಮಯ ಮುಂತಾದ ಸಿದ್ಧಾಂತಗಳ ಸಾರವನ್ನು ತಿಳಿದುಕೊಂಡರೂ ಅದರಿಂದ ಸಾಧಿಸಲಾಗದ, ಪರಮ ತಪಸ್ಸನ್ನು ಅನುಷ್ಠಾನ ಮಾಡುವುದರಿಂದ ಸಿದ್ಧಿಸುವ, ಪ್ರಯೋಜನವನ್ನು ದೊರಕಿಸಿಕೊಡತಕ್ಕದ್ದು)] ;[೨] ವಿಗತಮಳಂ. (= ನಿರ್ಮಲವಾದದ್ದು, ನಿರ್ದುಷ್ಟವಾದದ್ದು) ; ಉಪಾತ್ತಾರಾತಿ ಸಾರ್ಥಾರ್ಥವೀರಂ (= ಉಪಾತ್ತಾ + ಅರಾತಿ + ಸಾರ್ಥ + ಅರ್ಥವೀರಂ = ಶತ್ರುಗಳಿಂದ ಸೆಳೆದುಕೊಂಡ ಐಶ್ವರ್ಯದಿಂದ ಸಾರ್ಥಕವೆನಿಸಿಕೊಂಡ ವೀರದಿಂದ ಕೂಡಿದ್ದು); ಸಾಗರಂಬೋಲ್ (= ಸಾಗರದ ಹಾಗೆ), ಸ್ಥಗಿತಮಮಿತ ನಾನಾ ಶಬ್ದವೀಚಿ ಪ್ರಪಂಚಂ (= ಹರಡಿಕೊಂಡಿರುವ ಅಪಾರವಾದ ಅಸಂಖ್ಯಾತವಾದ ಶಬ್ದಗಳೆಂಬ ಅಲೆಗಳ ಸಮೂಹದಿಂದ ಕೂಡಿದ್ದು), ನಿಗದಿತ ಗುಣರತ್ನೈಕಾಕರಂ (= ನಿರೂಪಣೆಗೊಂಡ ಗುಣಗಳೆಂಬ ರತ್ನಗಳಿಗೆ ನೆಲೆಯಾದದ್ದು); ಇಂಥ (ಮಹಾಕಾವ್ಯವು) ಸೊಗಯಿಸಿ, ಧರಣೀಚಕ್ರಾಂಬರಾಕ್ರಾಂತಮಕ್ಕುಂ (= ಭೂಮಂಡಲವನ್ನೂ ಅಂತರಿಕ್ಷವನ್ನೂ ಆಕ್ರಮಿಸಿಕೊಂಡಿರುವುದು, ಎಂದರೆ ಅದರ ಕೀರ್ತಿ ವಿಶ್ವವ್ಯಾಪಕವಾಗಿರುವುದು).

ಪದ್ಯ ೨೧೭ : "ಹೀಗೆ ಅತಿಶಯವಾದ ವರ್ಣನೆಗಳನ್ನು ಯಾವಾಗಲೂ ಒಟ್ಟುಗೂಡಿಸಿ ಹೇಳಿದ ಕಾವ್ಯವು ಅಮೋಘವರ್ಷನ ಯಶಸ್ಸಿನ ಹಾಗೆ ಕಲ್ಪಾಂತರದವರೆಗೂ ನಿಲುಗಡೆಯಿಲ್ಲದೆ ಚಿರಸ್ಥಾಯಿಯಾಗಿರುವುದು."

ಪದ್ಯ ೨೧೮–೨೩೦ : ನೃಪತುಂಗ ಸಭಾಸದನಾದ ಕವಿಯನ್ನು ಇತರ ಸಭಾಸದರು ಹೀಗೆ ವರ್ಣಿಸುತ್ತಿದ್ದರು :

(ಪ. ೨೧೮) (ಮಹಾ ನೃಪತುಂಗ ಸಭಾಸದನಾದ ಕವಿ) "ಸಕಲ ಲೌಕಿಕ ಸಾಮಯಿಕ ವೈದಿಕ ವಿಚಾರಗಳಲ್ಲಿ ನಿರತನಾದವನು ; ಸಾಹಿತ್ಯ ವಿದ್ಯೆಯಲ್ಲಿ ಉಕ್ತಿ ಕಲಾಕಲಾಪವನ್ನು ಪ್ರಕಟಪಡಿಸಿರುವವನು. (ಪ. ೨೧೯) ಅತಿಶಯವಾದ ಪ್ರತಿಭಾ ವೈಭವವುಳ್ಳವನು ; ಚತುರವಾದ

ವೃತ್ತಿ (= ವ್ಯಾಖ್ಯಾನ)ಯಲ್ಲಿ ಅಸಾಧಾರಣನಾದವನು ; ಲಕ್ಷಣ ಲಕ್ಷ್ಯಂನು (= ಲಕ್ಷಣಗಳನ್ನೂ ಅವುಗಳಿಗನುಗುಣವಾಗಿ ಲಕ್ಷ್ಯಗಳನ್ನೂ ನಿರೂಪಿಸಬಲ್ಲವನು). (ಪ. ೨೨೦) ಭಾವಿಸಿ ನೋಡಿದರೆ, ವಿಚಾರಪರನು, ಬಲು ಜಾಣನು ; ಸಮಸ್ತ ಭಾಷಾ ವಿಷಯಗಳಲ್ಲಿ ಅತಿಶಯವೂ

ನಿರ್ದುಷ್ಟವೂ ಆದ ಕುಶಲತೆಯುಳ್ಳವನು ; ದೇವತೆ, ಗುರು, ಗುಣೋದಯ (= ನೃಪತುಂಗ ?), ವೃದ್ಧ ಜನ – ಇವರನ್ನು ಚೆನ್ನಾನಿ ಸೇವಿಸುವುದರಲ್ಲಿ ಆಸಕ್ತನು ; ವಿಕಾರವಾದ ಚಾಪಲ್ಯವನ್ನು ಹೊಂದಿರದವನು. (ಪ. ೨೨೧) ಪರಮ ಕಾರುಣಿಕನು; ದೋಷರಹಿತನು; ಎಲ್ಲ ಜನರಲ್ಲಿಯೂ ಆದರವನ್ನು ಹುಟ್ಟಿಸತಕ್ಕವನು; ಪರರ ಗುಣದಲ್ಲಿ ಅಸಹನೆಯಿಲ್ಲದವನು; 'ಆತ್ಮ ಗುಣೋದಯಾಂತರಸ ರೂಪಂ' (= ತನ್ನ ಗುಣೋದಯ ಸಿದ್ಧಿಯ ಸಾರಸ್ವರೂಪನು);[೮೩] ಅಕಿಲಾಗಮಗಳ ಪಾಠವನ್ನು ಮುಟ್ಟುವುದರಲ್ಲಿ ನಿರತನಾದವನು. (ಪ. ೨೨೨) ವಂಶದ ಏಳಿಗೆಗೂ ಮೋಕ್ಷ ಸುಖಕ್ಕೂ ಕಾರಣವಾದ ಪರಮಧರ್ಮವನ್ನು ಪ್ರೀತಿಯಿಂದ ವಿಚಾರ ಮಾಡಿ, ಒದಗಿದ ನಿರ್ಮಲ ಕೀರ್ತಿವಿತಾನವನ್ನು ಸಮಕಟ್ಟುವುದಕ್ಕಾಗಿ, ಯಾವ ರೀತಿಯಿಂದಲೂ ಹೆರರ ಮೆಚ್ಚಿಗೆಯನ್ನು ಅವಲಂಬಿಸದಂತೆ, ಯಾವನಿಂದಲೂ ಏನನ್ನೂ ಕುರಿತು ನಿರೀಕ್ಷಿಸದೆ, ಇಂತು ಆಬಿಮಾನಿಯೂ '(ನಿರಗೀಡಿತ?) ಮಹಾಪುರುಷವ್ರತ ನಿಶ್ಚಿತ'ನೂ ಆದ ಈತನು 'ಕೂಡೆ ಪೇಟ್ದಿನ್ನುತ ಕಾವ್ಯಮಂ,[೮೪] ಜಗದಗಾಧ ವಿವರೋದರ ದೀಪವಿಕಲ್ಪಮಂ' (= ಜಗತ್ತಿನ ಅಗಾಧವಾದ ಕುಹರ ಪ್ರದೇಶದ ಮಧ್ಯಭಾಗದಲ್ಲಿ (ಅಲ್ಲಿನ ಕತ್ತಲೆಯನ್ನು ಕಳೆಯುವುದಕ್ಕಾಗಿ) ಒಂದು ದೀಪದಂತಿರುವ 'ನುತಕಾವ್ಯ'ವನ್ನು ಹೇಳಿದನು)'' – ಎಂಬುದಾಗಿ (ಪ. ೨೨೪) ''ನೃಪತುಂಗ ಸಭಾಸದರು 'ವರಗೀತ ಗುಣೋದಯೈಕಾಂತ ಕಾಂತವಿಷಯಾಶಯರಾಗಿ' (= ಹಾಡಿ ಹೊಗಳುವುದಕ್ಕೆ ಯೋಗ್ಯವಾದ ಕಾವ್ಯಗುಣೋದಯವೊಂದರಿಂದಲೇ ಆಕರ್ಷಿತವಾದ ವಿಷಯವನ್ನು ಮನಸ್ಸಿನಲ್ಲಿಟ್ಟುಕೊಂಡು), ನುಡಿಗಳೊಳ್ ಬಗೆ ಪೆರ್ಚಿರೆ' (= ಹೇಳುವ ಮಾತಿನಲ್ಲಿ ಮನಸ್ಸು ತುಂಬಿ ಬಂದಿರಲು, ಎಂದರೆ ಮನಃಪೂರ್ವಕವಾಗಿ),

---

೮೩. ''ತನ್ನ ಮತ್ತು 'ಗುಣೋದಯ' (ನೃಪತುಂಗ)ನ ಮಧ್ಯದಲ್ಲಿ ಭೇದರಹಿತನು (ಸರೂಪನು)'' – ಇದು ಮುಳಿಯ ತಿಮ್ಮಪ್ಪಯ್ಯನವರ ಅರ್ಥವಿವರಣೆ (ಕ. ಮಾರ್ಗವಿವೇಕ – ಭಾಗ ೧, ಪು. ೯೭)

೮೪. 'ಕೂಡೆ ಪೇಟ್ದಿನುತಕಾವ್ಯಮನಿಂತಭಿಮಾನಿ' ಎಂದು ಎರಡು ಮುದ್ರಿತ ಪ್ರತಿಗಳಲ್ಲಿಯೂ ಇರುವ ಪಾಠ. 'ಪೇಟ್ದಿನ್ನುತ ಕಾವ್ಯಮಂ' (ಪೇಟ್ದಿಂ + ನುತ ಕಾವ್ಯಮಂ) ಎಂದು ಸ್ವಲ್ಪ ತಿದ್ದುಪಾಟು ಮಾಡುವುದರಿಂದ ಸುಲಭವಾಗಿ ಅರ್ಥಾನ್ವಯ ಮಾಡಬಹುದು. ಇಲ್ಲಿ 'ನುತ ಕಾವ್ಯ' ಎಂದರೆ 'ಲಕ್ಷಣಗ್ರಂಥ' (= ಕವಿರಾಜಮಾರ್ಗ) ಎಂದೇ ಗ್ರಹಿಸಬೇಕು.

'ಅಂತು ಬಿಟ್ಟಿತೆಱದಿಂ' (= ಮಾತು ತಾನಾಗಿ ಉದುರಿದ ಹಾಗೆ, ಎಂದರೆ ಸ್ವಯಂ ಪ್ರೇರಿತರಾಗಿ), 'ನಿರಾಕುಳಂ ಸತತಂ ಪೇೞ್ದು ಅವರ್ ಸಂತಸಂಬಡಿಸುವರಂ' (= ಯಾವಾಗಲೂ ನಿಸ್ಸಂದಿಗ್ಧವಾಗಿ ಹೇಳಿ ಅವರು ಸಂತೋಷಪಡಿಸುವರು.)"

ಇಷ್ಟುಮಾತ್ರವಲ್ಲ : (ಪದ್ಯ ೨೨೫) "ಎಂದುಂ ವರ್ಣಿಕುಂ" (= ಹೀಗೆಂದೂ ವರ್ಣಿಸುತ್ತಾರೆ) :

ನೃಪತುಂಗ ಸಭಾಸದನು –

"ಪಾರ್ಥಿವಲೋಕನಪ್ಪಂ (= ಕ್ಷತ್ರಿಯ ಪ್ರಪಂಚಕ್ಕೆ ಸೇರಿದವನು, ಎಂದರೆ, ಕವಿಯಾಗಿದ್ದುದರ ಜೊತೆಗೆ ಕಲಿಯೂ ಆಗಿದ್ದನೆಂದು ಭಾವ) ; ಕವಿ ; ಸಾರ್ಥಚಯಂ (= ಸಂಪದ್ಯುಕ್ತನು) ; ನುತ ಸರಸ್ವತೀ ತೀರ್ಥಾವತಾರ ಮಾರ್ಗನ (= ನೃಪತುಂಗನ), ಎಸಕಂ (= ಕಾರ್ಯವು),[೮೫] ಸಾರ್ಥಮಪ್ಪಂತು ಚಿಂತಿತ ಕಾರ್ಯತತ್ಪರಂ (= ಸಾರ್ಥಕವಾಗುವ ರೀತಿಯಲ್ಲಿ ಆಲೋಚಿಸಿದ ಕಾರ್ಯದಲ್ಲಿ ನಿರತನಾದವನು).

ಪದ್ಯ ೨೨೬ : "ಕುಲ ಜಾತಿ ದೇಶವಿಶದಂ ; ವಿನಯೋಪಚಾರಂ ; ನಿಲಯೈಕ ವೃತ್ತಿ (= ಮನೆಯಲ್ಲಿಯೇ ಇರತಕ್ಕವನು, ಎಂದರೆ ಏಕಾಂತವಾಸಪ್ರಿಯ); [ಕೃತಿಬಿಂಬಿತ ಸತ್ತ್ವಸಾರಂ][೮೬] (= ತನ್ನ ಸತ್ತ್ವಸಾರವೆಲ್ಲವನ್ನೂ ಕೃತಿಯಲ್ಲಿ ಬಿಂಬಿಸಿರುವವನು ?) ; ವಿಲಸದ್ ಗುಣಾಗುಣವಿವರ್ತಿ ಗುರೂಪದೇಶಾಮಲಿ ನಾವಬೋಧ ವಿದಿತಾಖಿಳಚೋದ್ಯವೃಂದಂ (= ವಿಲಸದ್ + ಗುಣ + ಅಗುಣ + ವಿವರ್ತಿ + ಗುರೂಪದೇಶ + ಅಮಲಿನ + ಅವಬೋಧ + ವಿದಿತ + ಅಖಿಲಚೋದ್ಯವೃಂದಂ = ಗುಣದೋಷ ವಿವೇಕವನ್ನು ಸ್ಪಷ್ಟವಾಗಿ ತಿಳಿಸುವ, ಗುರುವಿನ ಉಪದೇಶದ ನಿರ್ಮಲವಾದ ಬೋಧೆಯಿಂದ ತಿಳಿದುಕೊಂಡ ಆಶ್ಚರ್ಯಕರವಾದ ಸಂಗತಿಗಳನ್ನು ಬಲ್ಲವನು).

ಪದ್ಯ ೨೨೭ : "ಮದ ಮಾನ ಮಾಯ ಭಯ ಲೋಭ ವಿಷಾದ

---

೮೫. ಈ ಇಡಿಯ ವಾಕ್ಯಭಾಗವು ಎರಡು ಮುದ್ರಿತ ಪ್ರತಿಗಳಲ್ಲಿಯೂ ಲುಪ್ತವಾಗಿದೆ. ಈಗಿರುವಂತೆ ಈ ವಾಕ್ಯವು ಸಂಪಾದಕನು ಯಥಾಮತಿಯಾಗಿ ರಚಿಸಿ ಸೇರಿಸಿರತಕ್ಕದ್ದು. ಸರಿಯಾದ ಮೂಲಪಾಠವು ದೊರಕಿದ ಮೇಲೆ ಇದನ್ನು ತೆಗೆಯತಕ್ಕದ್ದು.

೮೬. ಇದು ಮುಳಿಯ ತಿಮ್ಮಪ್ಪಯ್ಯನವರು ಗ್ರಂಥಪಾತವಾಗಿರುವೆಡೆಯಲ್ಲಿ ಸೂಚಿಸಿರುವ ಪಾಠ.

ಹಾರ್ಷಾಭ್ಯುದಿತಾಂತರಂಗರಿಪುವರ್ಗ ಜಯಾವತಾರಂ [= ಮದ ಮಾನ ಮುಂತಾದ ಅಂತರಂಗ ರಿಪುವರ್ಗವನ್ನು ಜಯಿಸಿದವನು (ಪ್ರಸಿದ್ಧವಾದ ಅರಿಷಡ್ವರ್ಗ : ಕಾಮ, ಕ್ರೋಧ, ಲೋಭ, ಮದ, ಮೋಹ, ಮತ್ಸರ; ತದ್ಭಿನ್ನವಾಗಿದೆ ಇಲ್ಲಿ ಹೇಳಿರುವ 'ಸಪ್ತರಿಪುವರ್ಗ')]; ವಿದಿತ ಸ್ವಧೀ ವಿಭವ ಭಾವಿತ ವಿಶ್ವಲೋಕಂ (= ಪ್ರಸಿದ್ಧವಾದ ತನ್ನ ಬುದ್ಧಿಶಕ್ತಿಯಿಂದಾಗಿ ಸಮಸ್ತ ಲೋಕದ ಗೌರವಕ್ಕೆ ಪಾತ್ರನಾದವನು); ಬುಧಗೋತು ಕಾವಂ (= ವಿದ್ವಾಂಸರನ್ನು ಪ್ರೀತಿಯಿಂದ ಕಾಪಾಡತಕ್ಕವನು); ಅನುನೀತಗೃಹೀತವಾಕ್ಯಂ (= ಕೈಕೊಂಡ ವಚನವನ್ನು ಪಾಲಿಸತಕ್ಕವನು).

ಪದ್ಯ ೨೨೮ : "ಪರಮಾನುಭಾವನು; ಅಭಿಮಾ; ವಿನೋದಶೀಲನು; 'ಪರಂ' (= ಶ್ರೇಷ್ಠನು); ಅತ್ಯುದಾರಚರಿತೋದಯನು; ಏಕರೂಪನು: 'ಸರಸಾಶ್ರಯ ಪ್ರವರ ಮೂರ್ತಿ' (= ಅತ್ಯಂತ ಶ್ರೇಷ್ಠನಾದ ರಸಿಕನು); ಪರೋಪಕಾರಿ; ಯಾವಾಗಲೂ ಗುಣೋದಯನು; 'ಅಕಾರಣಧುರ್ಯಮಿತ್ರಂ' (= ನಿರ್ವ್ಯಾಜ ಮೈತ್ರಿಯನ್ನು ತಳೆಯಬಲ್ಲವನು).

ಪದ್ಯ ೨೨೯ : "ಅಸಹಾಯಸಾಹಸವಿನೋದಿ (= ಏಕಾಂಗವೀರದಲ್ಲಿ ನಲಿಯುವವನು) ; ವಿವಿಕ್ತ ಚಿತ್ರ ಪ್ರಸಹಕಾಶಿತ ಮಹೋದಯ ತತ್ತ್ವ ಸತ್ತ್ವಂ (= ಪ್ರತ್ಯೇಕ ಪ್ರತ್ಯೇಕವಾಗಿಯೂ ಆಶ್ಚರ್ಯಕವಾಗಿಯೂ ಸ್ಥಿರವಾಗಿಯೂ ಪ್ರಕಾಶಗೊಂಡ ಮಹಿಮೆಯಿಂದ ಕೂಡಿದ ಸತ್ತ್ವಶಾಲಿ; ಎಂದರೆ, ನಾನಾ ವಿಧವಾಗಿ, ಬೆರಗುಗೊಳಿಸುವ ರೀತಿಯಲ್ಲಿ, ತನ್ನ ಆತ್ಮಶಕ್ತಿಯನ್ನು ವ್ಯಕ್ತಪಡಿಸುವ ಮಹಾಪುರುಷ); ವ್ಯಸನ ವ್ಯಪೇತಂ (= ದುರಭ್ಯಾಸಗಳಿಲ್ಲದವನು, ಕೆಟ್ಟ ಚಟಗಳಿಲ್ಲದವನು); ಉಪನೀತ ಕಲಾಕಲಾಪಂ (ಕಲಾಕಲಾಪಸಹಿತನು, ಎಂದರೆ ಅನೇಕ ಕಲೆಗಳಲ್ಲಿ ನಿಪುಣನು); ಶಶಿಖಂಡನಿರ್ಮಲಯ ಶೋವಿವಿಧಾವತಂಸಂ [(= ಬಾಲಚಂದ್ರನಂತೆ ನಿರ್ಮಲವಾದ ಕೀರ್ತಿಯೆಂಬ (ಶಿರೋಭೂಷಣ, ಕರ್ಣಕುಂಡಲ, ಮುಂತಾದ) ಬಗೆಬಗೆಯ ಆಭರಣಗಳುಳ್ಳವನು"].

ಪದ್ಯ ೨೩೦ : "ಪರಿವೃತ್ತ ನೃಪತುಂಗದೇವಮಾರ್ಗಾಂತರಗತ ಬೋಧ ವಿಶೇಷ ಯಾನಪಾತ್ರಂ [= 'ನೃಪತುಂಗದೇವ ಮಾರ್ಗ' ಎಂದು ಪ್ರಸಿದ್ಧವಾದ ಕಾವ್ಯಮಾರ್ಗ ಪ್ರಕಾರದಲ್ಲಿ ಅಡಗಿರುವ ತಿಳಿವಳಿಕೆ ('ಬೋಧ')ಯಿಂದ 'ಪರಿವೃತ'ವಾದ (= ಸುತ್ತುವರಿಯಲ್ಪಟ್ಟ, (ವ್ಯಾಪ್ತವಾದ) ವಿಶೇಷವಾದ ನೌಕೆ) ; (ಇಂಥ ನೌಕಾರೂಪದ ಈ) ಮಹಾತ್ಮನು, 'ಪರಮಗುಣಪರೀತ

ಕಾವ್ಯರತ್ನಾಕರದ ಉರುಪಾರಮಂ ಎಯ್ದುಗುಂ' (= ಶ್ರೇಷ್ಠ ಗುಣಗಳಿಂದ ಕೂಡಿದ ಕಾವ್ಯವೆಂಬ ಸಾಗರದ ಅಥವಾ ಕಾವ್ಯರತ್ನಗಳಿಂದ ತುಂಬಿದ ಸಾಗರದ ಮಹಾ ತೀರವನ್ನು ಮುಟ್ಟಬಲ್ಲನು]." (ಈ ಕವಿ, ನೃಪತುಂಗ ದೇವಮಾರ್ಗದ ಕಾವ್ಯ ಲಕ್ಷಣಗಳಿಗೆ ಅನುಗುಣವಾಗಿ ಮಹಾಕಾವ್ಯಗಳನ್ನು ರಚಿಸಬಲ್ಲವನು ಎಂದು ತಾತ್ಪರ್ಯ. ಮೇಲೆ ಹೇಳಿದ, 'ಲಕ್ಷಣಲಕ್ಷ್ಯಂ' ಎಂಬ ವಿಶೇಷಣಕ್ಕೆ ಇದು ವ್ಯಾಖ್ಯಾನದಂತಿದೆ).

ಪದ್ಯ ೨೩೧ : ಅನ್ವಯಾರ್ಥ : "ನಿರವದ್ಯಾನ್ವಯಂ [= ದೋಷರಹಿತವಾದ ವಂಶವುಳ್ಳ ಎಂದರೆ ಕರ್ತೃತ್ವವುಳ್ಳ), ಉದ್ಘಂ (= ಶ್ರೇಷ್ಠವಾದ), ಉದ್ಧತ ಮಹಾಕ್ಷೀರಾಬ್ಧಿಡಿಂಡೀರ ಪಾಂಡುರಂ (= ಮಹಾಕ್ಷೀರ ಸಾಗರದಲ್ಲಿ ಮೇಲಕ್ಕೆದ್ದ ತೆರೆನೊರೆಯಂತೆ ಬೆಳ್ಳಗಿರುವ], ಆಕ್ರಾಂತ ಸುಶೈಲ ಸಾಗರ ಧರಾಶಾಚಕ್ರವಾಳಾಂಬರಂ (= ಪರ್ವತ, ಸಾಗರ, ಭೂಮಿ, ದಿಗಂತದ ಮಂಡಲ, ಅಂತರಿಕ್ಷ – ಇವನ್ನೆಲ್ಲಾ ಆಕ್ರಮಿಸಿಕೊಂಡಿರುವ), ಸ್ತ್ರೀಬಾಲ ವೃದ್ಧಾಹಿತ (= ಸ್ತ್ರೀಯರು ಬಾಲಕರು, ವೃದ್ಧರು – ಇವರಿಂದ ಅಂಗೀಕೃತವಾದ, ಎಂದರೆ ಸಮಸ್ತ ಜನರ ಅನುಮೋದನೆಯನ್ನು ಪಡೆದ), ಪರಮ ಶ್ರೀವಿಜಯ ಪ್ರಭೂತಿಜ ಯಶಂ (= ಪರಮ ಶ್ರೀ ವಿಜಯನಿಂದ ರಚಿತವಾದ ಈ ಕೃತಿಯ ಎಂದರೆ 'ಕವಿರಾಜಮಾರ್ಗ'ದ ಕೀರ್ತಿ), ಪರಮಾನಂದಿತ ಲೋಕಮೊಪ್ಪೆ) (= ಅತ್ಯಂತ ಆನಂದವನ್ನು ಪಡೆದ ಲೋಕವು ಒಪ್ಪಿಕೊಳ್ಳಲು, ಮೆಚ್ಚಿಕೊಳ್ಳುವಂತೆ), ಆಚಂದ್ರತಾರಂಬರಂ (= ಚಂದ್ರನೂ ನಕ್ಷತ್ರಗಳೂ ಇರುವವರೆಗೆ), ನೆಲೆಗೊಳ್ಗೆ (= ನೆಲೆಗೊಳ್ಳಲಿ, ಸ್ಥಿರವಾಗಿರಲಿ)"

## ಅನುಬಂಧ
## ಪ್ರಾಸವಿಚಾರ : ಅಧಿಕಪಾಠ

[ಪದ್ಯ II–೩೧ರಲ್ಲಿ 'ಇಂತಾಱು ತೆಱಂ', 'ಪ್ರಾಸಗಳು ಆರು ಬಗೆ', ಎಂದು ಸ್ಪಷ್ಟವಾಗಿ ಹೇಳಿರುವುದರಿಂದ, ಇಲ್ಲಿ ಕೊಟ್ಟಿರುವ ಹೆಚ್ಚಿನ ನಾಲ್ಕು ಬಗೆಯ ಪ್ರಾಸವಿಷಯಕ ಪದ್ಯಗಳು ಅನ್ಯಕವಿ ಕರ್ತೃಕ ಎಂಬಲ್ಲಿ ಸಂದೇಹವಿಲ್ಲ. ಇದು ಹೇಗಾದರೂ ಇರಲಿ, ಲಕ್ಷ್ಯಪದ್ಯಗಳು ಚಮತ್ಕಾರದಿಂದ ಕೂಡಿದ್ದು, ಮನೋಹರವಾಗಿವೆ.

೨. ಅನುಬಂಧದ ೩ನೆಯ ಪದ್ಯದಲ್ಲಿನ 'ನಾಸಿಕಮಡ್ಡಂ ಬಂದಂದಮನೀಕ್ಷಿಸಿ' ಎಂಬ ಪದ್ಯಭಾಗವು 'ಶಬ್ದಮಣಿ ದರ್ಪಣ'ದ ೧೦೪ನೆಯ ಸೂತ್ರಕ್ಕೆ (ಪರಿಷತ್ತಿನ ಮುದ್ರಣ ಪು. ೯೧ ; ಪ್ರೊ॥ ಡಿ. ಎಲ್. ನರಸಿಂಹಾಚಾರ್ಯರು ಸಂಪಾದಿಸಿರುವ ಮುದ್ರಣದ ದ್ವಿತೀಯಾವತ್ತಿಯಲ್ಲಿ ಸೂತ್ರ ಸಂಖ್ಯೆ ೧೧೪, ಪು. ೧೨೧) ಪ್ರಯೋಗವೆಂದು ಉದಾಹೃತವಾಗಿದೆ. ಉದಾಹೃತ ವಾಕ್ಯವು 'ಶಬ್ದಮಣಿ ದರ್ಪಣ'ದ ಮೂರು ಮುದ್ರಣಗಳ ಪ್ರತಿಗಳಲ್ಲಿಯೂ 'ನಾಸಿಕವಡ್ಡಂ...' ಎಂದಿದೆ; 'ಆ ಮತ್ವಕ್ಕುಚ್ಚರಿಪರ್ ವತ್ವಮನರೆಬರ್' ಎಂಬ ನಿಯಮಕ್ಕೆ ಅನುಗುಣವಾಗಿಯೇ ಇದೆ ಈ ಪ್ರಯೋಗ. 'ಕವಿರಾಜಮಾರ್ಗ'ದ ಎಲ್ಲ ಮುದ್ರಿತ ಪ್ರತಿಗಳಲ್ಲಿಯೂ 'ನಾಸಿಕಮಡ್ಡಂ...' ಎಂದೇ ಇದೆ. "... ಪ್ರಯೋಗ ಪದ್ಯ ಭಾಗಗಳು ಮೂಲತಃ ಕೇಶಿರಾಜನು ಬರೆದಿದ್ದ ರೂಪದಲ್ಲಿಯೇ ಇನ್ನೂ ಉಳಿದಿವೆಯೆಂದು ಹೇಳಬೇಕಾಗುತ್ತದೆ. ಕೇಶಿರಾಜನ ಸ್ವಹಸ್ತಪ್ರತಿಯ ಪ್ರತಿಬಿಂಬ ಬಹುಶಃ ಇಲ್ಲಿ ನೆಲಸಿದೆ ; ಇಡೀ ಪ್ರಯೋಗಗಳಲ್ಲಿ ಅಲ್ಲ" ಎಂಬ ಪ್ರೊ॥ ನರಸಿಂಹಾಚಾರ್ಯರ ಹೇಳಿಕೆಯನ್ನು ಆಧರಿಸಿ ಹೇಳುವುದಾದರೆ, ಕೇಶಿರಾಜನು ಬಳಸಿಕೊಂಡಿರುವ 'ಕವಿರಾಜಮಾರ್ಗ'ದ ಪ್ರತಿಯಲ್ಲಿ 'ನಾಸಿಕವಡ್ಡಂ...' ಎಂಬ ಪಾಠವೇ ಇದ್ದಿರಬೇಕು ಎಂದು ಊಹೆ ಮಾಡಬಹುದಲ್ಲದೆ, ಆ ಪ್ರತಿಯಲ್ಲಿಯೂ ಈ ಹೆಚ್ಚಿನ ಪ್ರಾಸವಿಷಯಕ ಪದ್ಯಗಳು ಇದ್ದಿರಬೇಕು ಎಂದು ಧಾರಾಳವಾಗಿ ಊಹೆ ಮಾಡಬಹುದು. ಎಂದಮೇಲೆ, ಅನ್ಯಕರ್ತೃಕವೆಂದು ಊಹಿಸಬಹುದಾದ ಈ ಪದ್ಯಗಳು ಕೇಶಿರಾಜನಿಗಿಂತ ಹಿಂದೆಯೇ ಯಾವುದೋ ಒಂದು 'ಕವಿರಾಜಮಾರ್ಗಪ್ರತಿ'ಯಲ್ಲಿ ಸೇರ್ಪಡೆಯಾಗಿರಬೇಕು.

೩. ಪ್ರೊ॥ ಡಿ.ಕೆ. ಭೀಮಸೇನರಾಯರು ತಮಗೆ ದೊರೆತ 'ಶಬ್ದಮಣಿ ದರ್ಪಣ'ದ 'ಹೊಸ ಪ್ರತಿ' ಬಹುಶಃ ಪ್ರಾಚೀನತಮವೆಂದು ಅಭಿಪ್ರಾಯಪಟ್ಟಿದ್ದಾರೆ. ಆ ಪ್ರತಿಯಲ್ಲಿ ಉಲ್ಲೇಖಗೊಂಡಿರುವ 'ಕವಿರಾಜ ಮಾರ್ಗ'ದ ಹಲವಾರು ಪದ್ಯಗಳಲ್ಲಿ

